गलित (गल् ಧಾತುವಿನ ಕ. ಭೂ. ಕೃ.) ಬಿದ್ದ, ಉದುರಿದ.

ग्लै (೬ನೇ ಗ. ಪ.) ನುಂಗು; [सम् + ग्लै (ಆ.) ಮಾತು ಕೊಡು].

चन्दनमञ्जरी (ಸ್ತ್ರೀ.) [चन्दन (ಪು.) ಗಂಧದ ಮರ, मञ्जरी (ಸ್ತ್ರೀ.) ಮೊಳಕೆ, ಚಿಗುರು, ಮೊಗ್ಗೆ] ಗಂಧದ ಹೂ, ಗಂಧದ ಚಿಗುರು.

चम्पकपुष्परेणु (ಪು.) [चम्पक (ಪು.) ಸಂಪಿಗೆಯ ಮರ, रेणु (ಪು.) ಧೂಳಿ, ಪುಷ್ಪರಾಗ] ಸಂಪಿಗೆಯ ಹೂವಿನ ಧೂಳಿ.

चम्पकवन (ನ.) ಸಂಪಿಗೇ ಗಿಡಗಳ ತೋಟ.

चूत (ಪು.) ಮಾವಿನ ಮರ, (ನ.) ಮಾವಿನ ಹೂ.

तच्छिरस् (ನ.) ಅವನ ತಲೆ.

तत्कानन (ನ.) [कानन (ನ.) ಅಡವಿ, ತೋಪು, ವನ] ಅವನ ಅಡವಿ, ತೋಪು, ಬನ.

तीर्थोदक (ನ.) [तीर्थ (ನ.) ನದಿ ಮೊದಲಾದ ಪವಿತ್ರ ಸ್ಥಲ, उदक (ನ.) ನೀರು] ಪವಿತ್ರ ಸ್ಥಲದ ನೀರು.

तृणराजफल (ನ.) [तृणराज (ಪು.) ತಾಳೆ, ತೆಂಗು ಮುಂತಾದ ಜಾತಿಯ ಗಿಡ] ತಾಳೇ ಫಲ.

त्रय (ನ.) ಮೂವರ ಕೂಟ.

दत्वा (दा ಧಾ. ಭೂ. ಅ.) ಕೊಟ್ಟು.

दर्प (ಪು.) ಸೊಕ್ಕು, ಅಹಂಕಾರ.

दोहनकाल (ಪು.) [दोहन (ನ.) ಹಾಲು ಕರೆಯುವದು] ಹಾಲು ಕರೆಯುವ ವೇಳೆ.

धू [धून् (೧೦ನೇ ಗ.) वि+धून्] ಅಲ್ಲಾಡಿಸು.

धु (೧ನೇ ಗ. ಪ. ಆ.) ಅಲ್ಲಾಡಿಸು, ಕಂಪಿಸು, ಕದಲಿಸು.

पर (ಸ.) ಬೇರೊಬ್ಬ.

पर (ವಿ.) ಬೇರೊಬ್ಬನ, ಶತ್ರುವಿನ.

परमेश्वर (ಪು.) ಜಗದೊಡೆಯ.

प्रति + पादय (प्रति + पद् ಧಾತುವಿನ ಪ್ರಯೋಜಕಾರ್ಥಕರೂಪ) ಕೊಡು, ಒಪ್ಪಿಸಿಬಿಡು.

पापकृत् (ವಿ.) ಪಾಪ ಮಾಡುವವ.

पावक (ಪು.) ಬೆಂಕಿ.

पुष्पस्रज् (ಸ್ತ್ರೀ.) [पुष्प (ನ.), स्रज् (ಸ್ತ್ರೀ.)] ಸರ, ಹೂವಿನ ಮಾಲೆ.

प्रायस् (ಅ.) ಬಹುತರವಾಗಿ.

बाणजाल (ನ.) [जाल (ನ.) ಸಮೂಹ, ಇಂಡಿಗೆ] ಕಣೆಗಳ ಇಂಡಿಗೆ, ಬಾಣಸಮೂಹ.

मनुज (ಪು.) ಮನುಷ್ಯ.

महाजव (ವಿ.) [महत् (ವಿ.) ದೊಡ್ಡ, ಬಹಳ, जव (ಪು.) ವೇಗ] ಬಹಳ ವೇಗವುಳ್ಳ.

युवन्[1] (ಪು.) ಹರೇದವ, ಪ್ರಾಯದವ.

यौवन (ನ.) ಚಿಕ್ಕ ಪ್ರಾಯ.

रुद्र (ಪು.) ಶಿವನು.

ली (೪ನೇ ಗ. ಆ.) ಅಂಟಿಕೊಳ್ಳು, ಮುಳುಗು, ಇಂಗು.

वह्नि (ಪು.) ಬೆಂಕಿ.

विवाहविधि [विवाह (ಪು.) ಮದುವೆ, विधि (ಪು.) ಸಂಸ್ಕಾರ] ಮದುವೆಯ ಸಂಸ್ಕಾರ.

विस्मय (ಪು.) ಬೆರಗು, ಭ್ರಮೆ, ಆಶ್ಚರ್ಯ.

वीरवरूथिनी (ಸ್ತ್ರೀ.) [वरूथिनी (ಸ್ತ್ರೀ.) ಸೈನ್ಯ, ದಂಡು] ಬಂಟರ ದಂಡು.

शरमण्डप (ಪು. ನ.) ಬಾಣದ ಮಂಟಪ.

सदाचार (ಪು.) ಒಳ್ಳೇ ನಡತೆ.

समक्रिय (ವಿ.) [सम ಸರಿಯಾದ, क्रिया (ಸ್ತ್ರೀ.) ನಡತೆ, ಕೆಲಸ] ಪಕ್ಷಪಾತವಿಲ್ಲದವ, ಸರಿಯಾದ ನಡತೆಯುವ.

सुवर्णशत (ನ.) ನೂರು ನಾಣ್ಯಗಳು.

स्तम्भ्[2] (೧ನೇ ಗ. ಆ., ೫ನೇ ಗ. ಪ.) ನೆಟಿದುಕೊಳ್ಳು.

---

[1] ಇದು ಬೇರೆ अन्नन्त ಶಬ್ದಗಳಂತೆ ನಡೆಯುವದಿಲ್ಲ. ೧೬ನೇ ಪಾಠ ನೋಡು.

[2] ಈ ಧಾತುವಿನ ಉಪಾಂತ್ಯ ಅನುನಾಸಿಕಕ್ಕೆ ೫ನೇ ಗಣದಲ್ಲಿಯೂ ಲೋಪ ಬರುವದು (೬೪ನೇ ಪುಟದ ಕೆಳಗಿನ ೨ನೇ ಟಿಪ್ಪಣಿ ನೋಡು).

स्तम्भ (ಪು.) ಕಂಭ.

स्तृ (೫ನೇ ಗ. ಪ. ಅ.) ಹೊದಿಸು, ಹಾಸು, ಮುಚ್ಚು.

स्फुटितातिमुक्त (ನ.) ಅರಳಿದ ಅತಿಮುಕ್ತದ ಹೂ.

स्वप्न (ಪು.) ಕನಸು.

हय (ಪು.) ಕುದುರೆ.

---

ಹಾದಿ ಬಿಟ್ಟು, ಕೆಟ್ಟ ಹಾದಿಗೆ उत्पथम् (ಅ.).

ಕೊಂಬೆ शाखा (ಸ್ತ್ರೀ.).

ನಿರಾಹಾರದ ದಿನ उपवासदिन (ನ.) ನಿರಾಹಾರ उपवास (ಪು.), ಮತ್ತು दिन (ನ.) ದಿನ.

ಮೋಸದ ಆಲೋಚನೆ कपटप्रबन्ध (ಪು.).

ಈಗ संप्रति (ಅ.).

ಸರಕಾರದ ಉದ್ಯೋಗಸ್ಥ राजपुरुष (ಪು.).

ಕೊಡ कुम्भ (ಪು.).

ಮಾತ್ರ केवलम् (ಅ.).

ನಿಲ್ಲು स्था.

ನಿಂತ स्थित.

ಪರದೇಶದವನು (ಮುಸಲ್ಮಾನ ಗ್ರೀಕ್ ಮುಂತಾದವರಲ್ಲಿ ಒಬ್ಬನು) यवन (ಪು.).

## ೭ನೇ ಪಾಠ.

### ೯ನೇ ಗಣ (ಮುಂದೆ ಸಾಗಿದ್ದು).

### ಅನದ್ಯತನಭೂತಕಾಲ.

#### ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अक्रीणात् | अक्रीणीताम् | अक्रीणन् |
| ಮ. ಪು. | अक्रीणाः | अक्रीणीतम् | अक्रीणीत |
| ಉ. ಪು. | अक्रीणाम् | अक्रीणीव | अक्रीणीम |

#### ಆತ್ಮನೇಪದ.

| | | | |
|---|---|---|---|
| ಪ್ರ. ಪು. | अक्रीणीत | अक्रीणाताम् | अक्रीणत |
| ಮ. ಪು. | अक्रीणीथाः | अक्रीणाथाम् | अक्रीणीध्वम् |
| ಉ. ಪು. | अक्रीणि | अक्रीणीवहि | अक्रीणीमहि |

### ವಿಧ್ಯರ್ಥ.

#### ಪರಸ್ಮೈಪದ.

| | | | |
|---|---|---|---|
| ಪ್ರ. ಪು. | क्रीणीयात् | क्रीणीयाताम् | क्रीणीयुः |
| ಮ. ಪು. | क्रीणीयाः | क्रीणीयातम् | क्रीणीयात |
| ಉ. ಪು. | क्रीणीयाम् | क्रीणीयाव | क्रीणीयाम |

ಈ ಅರ್ಥದ ದುರ್ಬಲಪ್ರತ್ಯಯಗಳ ಆದಿಯಲ್ಲಿ ವ್ಯಂಜನವಿರುವದರಿಂದ ना ವಿಕರಣಕ್ಕೆ नी ಆದೇಶ ಬರುತ್ತದೆ. (ಪುಟ ೩೦, ನಿಯಮ ೧ ನೋಡು.)

ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | क्रीणीत | क्रीणीयाताम् | क्रीणीरन् |
| ಮ. ಪು. | क्रीणीथाः | क्रीणीयाथाम् | क्रीणीध्वम् |
| ಉ. ಪು. | क्रीणीय | क्रीणीवहि | क्रीणीमहि |

मन्थ् ಕಡೆ; ಅನದ್ಯತನ ಭೂತಕಾಲ.

ಪರಸ್ಮೈಪದ.

ಉ. ಪು. अमथ्नाम् अमथ्नीव अमथ्नीम (ಪುಟ ೩೪, ಟಿಪ್ಪಣಿ ೨).

ಲೂ ಪರಸ್ಮೈಪದ.

ಉ. ಪು. अलुनाम् अलुनीव अलुनीम (ಪುಟ ೩೪, ಟಿಪ್ಪಣಿ ೩ ನೋಡು).

ಆತ್ಮನೇಪದ.

ಉ. ಪು. अलुनि अलुनीवहि अलुनीमहि

कार्तिक्येकादश्यां कथयत कान्पदार्थानाश्नीत ।

क्व तानि वस्त्राणि यानि त्वमक्रीणीथाः ।

रे परिचारक किमर्थमद्य भूमिं कटैर्नास्तृणाः ।

यज्ञांस्तन्वाना वयं बहून्पशून्यूपे देवेभ्योऽबध्नीम ।

तस्मिन्देशे मया सार्धं योद्धुं बहवो भटा आगतास्तानहमेकाकी शस्त्रास्त्रैरमृद्नाम् ।

न कन्यायाः शुल्कं गृह्णीयादिति शास्त्रप्रतिषेधे सत्यपि केचिदुदरंभरयो ब्राह्मणा गृह्णन्त्येव ।

दमयन्त्याः स्वयंवरकाले बहवो राजानो मामियं वृणीत मामियं वृणीतेति मन्यमानाः कुण्डिनपुरमागता रङ्गं प्राविशन् । नलं वुवूर्षुर्दमयन्ती रङ्गागतान्नृपान्प्रेक्षमाणा नलतुल्याकृतीन्पञ्च पुरुषानपश्यत् । ततः संदेहान्नाभ्यजानान्नलं नृपम् । तेषां चत्वारो नलरूपधारिण इन्द्रादयो देवा

इति ज्ञात्वाऽभाषत । कथं देवाञ्जानीयां कथं च नलं नृपं बोधयम् । यदा सा देवाञ्शरणं गता तदा ते स्वीयानि रूपाण्याविरकुर्वन् । पश्चान्नलं नृपं दमयन्त्यवृणीत । अनन्तरं देवानां कोपं प्रतिकर्तुं तावुभौ स्तुतिभिस्तानप्रीणीताम् । ततो देवा नलं वरैरन्वगृह्णन् ।

यत्कृतेऽरीन् व्यगृह्णीम समुद्रमतराम च ।
सा हतेति वदन् राममुपातिष्ठन्मरुत्सुतः ॥

ದೇವತೆಗಳು ಮಂದರವನ್ನು ಕಡಗೋಲು ಮಾಡಿ ಸಮುದ್ರವನ್ನು ಕಡೆದರು (मन्थ्).

ನಾನು ನನ್ನ ಪುಸ್ತಕಗಳನ್ನೂ ಸಾಮಾನುಗಳನ್ನೂ ಮಾರಿದೆನು (वि + क्री): ಆದರೆ ಬಹಳ ಹಣ ಬರಲಿಲ್ಲ.

ಇಂದ್ರನು ತನ್ನ ಹಗೆಯಾದ ವೃತ್ರನೆಂಬ ಬ್ರಾಹ್ಮಣನನ್ನು ತುಂಡುತುಂಡಾಗಿ ಕಡಿದನು (कृत्), ಅದರಿಂದ ಅವನು ಬ್ರಹ್ಮಹತ್ಯ ಮಾಡಿದನು; ಆ ಪಾಪದಿಂದ ನಾವು ಅವನನ್ನು ಮುಕ್ತ ಮಾಡಲಿಲ್ಲ (पू).

ಋಷಿಗಳ ವಚನಗಳನ್ನು ನೀನು ಎಂದು ಒಟ್ಟುಗೂಡಿಸಿದಿ (ग्रन्थ्)?

ನೀವು ಭಕ್ತಿಯಿಂದ (ಧರ್ಮಾಚರಣೆಯಿಂದ) ದೇವತೆಗಳನ್ನು ಸಂತೋಷಪಡಿಸಿದರೆ (प्री), ಅವರು ನಿಮಗೆ ವರಗಳನ್ನು ಕೊಡುವರು (अनु + ग्रह्).

ರಾಮನೂ ಲಕ್ಷ್ಮಣನೂ ಸೀತೆಯೊಡನೆ ಈ ಅಡವಿಯಲ್ಲಿ ನಿಂತು, ಫಲ ಮೂಲಗಳನ್ನು ತಿಂದುಕೊಂಡಿದ್ದರು (अश्).

ತುಂಬುಗಳಿಂದ ಹೂವುಗಳನ್ನು ಕೊಯ್ಯಬೇಡೆಂದು ನಾನು ಹೇಳಿದಾಗ್ಯೂ[1] ನೀನು ಅವನ್ನು ಯಾಕೆ ಕೊಯ್ದಿ (विप्र + लू)?

ನಾನು ಗೋವಿಂದನ ಪುಸ್ತಕಗಳನ್ನು ತೆಗೆದುಕೊಂಡರೆ (ग्रह्). ಗುರುಗಳು ಸಿಟ್ಟು ಮಾಡುವರು.

ಪಾಂಡವರು ವಿರಾಟನ ರಾಜ್ಯದಲ್ಲಿ ಒಂದು[2] ವರ್ಷ ಇದ್ದರೆಂಬದು ನಿನಗೆ ಗೊತ್ತಿಲ್ಲವೇ (ज्ञा)?

---

1) ಇಲ್ಲಿ ಸತ್‌ಸಪ್ತಮಿಯ ಪ್ರಯೋಗವನ್ನು ಮಾಡಬೇಕು.

2) ಪುಟ ೨೨, ಟಿಪ್ಪಣಿ ೧ ನೋಡು.

## ಕೋಶ ೬.

### ಧಾತುಗಳು.

वि + क्री [1] (ಆ.) ಮಾರು.

ग्रह् (೯ನೇ ಗ. अनु ಪೂರ್ವಕ) ಸತ್ಕರಿಸು, ದಯ ಮಾಡು.

वि + ग्रह् ಜಗಳ ಮಾಡು.

अभि + ज्ञा ಗೊತ್ತು ಹಿಡಿ.

मन्थ् ಕಡೆ.

मृद् (೯ನೇ ಗ. ಪ.) ತುಂಡುತುಂಡಾಗಿ ಕಡಿ.

---

इन्द्रादि ಇಂದ್ರ ಮೊದಲಾದ ದೇವರು.

उदरंभरि (ವಿ.) [उदर (ನ.) ಹೊಟ್ಟೆ, भृ ತುಂಬು] ಹೊಟ್ಟೆ ಹೊರಕೊಳ್ಳುವವ.

एकाकिन् (ವಿ.) ಒಬ್ಬನೇ.

कष्ट (ಪು.) ಚಾಪೆ.

कार्तिकैकादशी (ಸ್ತ್ರೀ.) ಕಾರ್ತಿಕದ ಏಕಾದಶಿ.

कुण्डिनपुर (ನ.) ವರಾಡದ ಹಳೇ ರಾಜಧಾನಿ.

कोप (ಪು.) ಸಿಟ್ಟು.

चत्वारः (ಪು. ಪ್ರಥಮಾ ಬಹು.) ನಾಲ್ವರು.

दमयन्ती (ಸ್ತ್ರೀ.) ಒಬ್ಬ ಹೆಂಗಸಿನ ಹೆಸರು. ನಲನ ಹೆಂಡತಿ.

नलतुल्याकृति (ವಿ.) [तुल्य ಹಾಗಿರುವ, ಸರಿಯಾದ, आकृति (ಸ್ತ್ರೀ.) ರೂಪ] ನಲನಂತೆ ರೂಪವುಳ್ಳ.

नलरूपधारिन् (ವಿ.) ನಲನ ರೂಪ ಧರಿಸಿದ.

पञ्च (ಪು. ಪ್ರಥಮಾ ದ್ವಿತೀಯಾ ಬಹುವಚನ) ಐವರು.

परिचारक (ಪು.) ಸೇವಕ, ಆಳು.

भट (ಪು.) ಬಂಟ, ಕಾದಾಳು.

मरुत्सुत (ಪು.) ವಾಯುಪುತ್ರ, ಮಾರುತಿ.

यत्कृते (ಅ.) ಯಾರ, ಯಾತರ ಸಲುವಾಗಿ.

रङ्ग (ಪು.) ನಾಟಕಸ್ಥಲ, ಸಭಾಸ್ಥಲ.

रङ्गागत (ವಿ.) ನಾಟಕಸ್ಥಲಕ್ಕೆ ಬಂದ.

रूप (ನ.) ಆಕಾರ.

वुवूर्षु (ವಿ.) ವರಿಸಲಿಚ್ಛಿಸುವ.

शस्त्रास्त्र (ನ.) ಉಕ್ಕಿನ ಆಯುಧಗಳೂ ಮಂತ್ರಪ್ರೇರಿತ ಆಯುಧಗಳೂ.

शास्त्रप्रतिषेध (ಪು.) [शास्त्र (ನ.), प्रतिषेध (ಪು.)] ಶಾಸ್ತ್ರದ ಅಡ್ಡಿ.

शुल्क (ಪು. ನ.) ಬೆಲೆಯ ಹಣ, ವಧುವಿನ ತಂದೆತಾಯಿಗಳಿಗೆ ಕನ್ಯೆಯ ಬೆಲೆಗಾಗಿ ಕೊಟ್ಟ ಹಣ.

सन्देह (ಪು.) ಸಂಶಯ.

सार्धम् (ಅ.) ಕೂಡ, (ಇದು ತೃತೀಯಾವಿಭಕ್ತಿಯ ಮೇಲೆ ಬರುತ್ತದೆ).

उप + स्था ಸಮೀಪಕ್ಕೆ ಹೋಗು, ಪೂಜಿಸು, ಸತ್ಕರಿಸು.

स्वयंवरकाल (ಪು.) [स्वयंवर (ಪು.) ಗಂಡನನ್ನು ಆರಿಸುವಿಕೆ, काल (ಪು.) ವೇಳೆ] ಗಂಡನನ್ನು ಆರಿಸುವ ವೇಳೆ.

---

ಬ್ರಾಹ್ಮಣನ ಕೊಲೆ ब्रह्महत्या (ಸ್ತ್ರೀ.).

ಕಡೆಗೋಲು मन्थनदण्ड (ಪು.) [मन्थन (ನ.) ಕಡಿಯೋಣ, दण्ड (ಪು.) ಕೋಲು], मन्थान (ಪು.).

ಸಾಮಾನು गृहोपस्कर (ಪು.).

ಧರ್ಮವಾಸನೆ भक्ति (ಸ್ತ್ರೀ.) देवनिष्ठा (ಸ್ತ್ರೀ.)

ಸಿಟ್ಟುಮಾಡು, ಹಳಿಯು निर् + भर्त्स् (೧೦ನೇ ಗ.), प्रति + आ + दिश् (೬ನೇ ಗ. ಪ.).

---

[1] वि+क्री, परि+क्री, अव+क्री ಧಾತುಗಳು ಆತ್ಮನೇಪದದ ಪ್ರತ್ಯಯಗಳನ್ನೇ ಧರಿಸುತ್ತವೆ.

ಬೇರು, ಗಡ್ಡೆ ಮೂಲ (ನ.). | ವಿರಾಟ (ಒಬ್ಬ ಅರಸು) विराट् (ಪು.).
ಮಾತು वचन (ನ.), शक्ति (ಸ್ತ್ರೀ.). | ವೃತ್ರ (ಇಂದ್ರಶತ್ರುವಾದ ಒಬ್ಬ ಬ್ರಾಹ್ಮಣ) वृत्र (ಪು.).
ತುಂಬು बन्धन (ನ.).

# ೭ನೇ ಪಾಠ.

## ೨ನೇ ಗಣ.

### ವರ್ತಮಾನಕಾಲ.

### ಆಜ್ಞಾರ್ಥಗಳು.

೧. ಎರಡನೇ ಗಣದ ಧಾತುಗಳಿಗೆ ವಿಕರಣವಿಲ್ಲ. ಧಾತುಗಳ ಮೂಲ ರೂಪಕ್ಕೆ ಪ್ರತ್ಯಯಗಳು ಹತ್ತುತ್ತವೆ.

या (೨ನೇ ಗ. ಪ.) ಹೋಗು.

ವರ್ತಮಾನಕಾಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | याति | यातः | यान्ति |
| ಮ. ಪು. | यासि | याथः | याथ |
| ಉ. ಪು. | यामि | यावः | यामः |

ಆಜ್ಞಾರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | यातु | याताम् | यान्तु |
| ಮ. ಪು. | याहि | यातम् | यात |
| ಉ. ಪು. | यानि | याव | याम |

ಇಲ್ಲಿ ಈ ಧಾತುವು ಯಾವ ವಿಕಾರವನ್ನೂ ಹೊಂದುವದಿಲ್ಲ. ಮೂಲರೂಪಕ್ಕೇ ಪ್ರತ್ಯಯಗಳು ಹತ್ತುತ್ತವೆ. स्ना, रा, ला, पा (ರಕ್ಷಿಸು), ख्या, मा, भा, प्सा, श्रा, दा (ಕೊಯ್ಯು) ಧಾತುಗಳು याದಂತೆ ನಡೆಯುತ್ತವೆ.

आಕಾರಾಂತ ಧಾತುಗಳು ಹೊರ್ತಾಗಿ ಈ ಗಣದ ಯಾವತ್ತು ಧಾತುಗಳು ಬಹುತರವಾಗಿ ವಿಕೃತವಾಗುವವು, ಅಂದರೆ ಇವುಗಳ ರೂಪಗಳು ಯಾವದೊಂದು ಸಾಮಾನ್ಯ ನಿಯಮವನ್ನನು ಸರಿಸಿ ಆಗುವದಿಲ್ಲ. ಇವುಗಳಲ್ಲಿ ಕೆಲವನ್ನು ಕೆಳಗೆ ಬರೆಯುತ್ತೇವೆ.

೨. अस् ಧಾತುವಿನ ಮುಂದೆ ದುರ್ಬಲಪ್ರತ್ಯಯಗಳು ಬರಲು, ಧಾತುವಿನ अಕಾರಕ್ಕೆ ಲೋಪ ಬರುತ್ತದೆ. ಉದಾ: अस्+तः =स्तः (ಪ್ರ. ಪು. ದ್ವಿ.), अस् + अन्ति = सन्ति (ಪ್ರ. ಪು. ಬಹು.).

ಅಸ್ (೨ನೇ ಗ. ಪ. ವರ್ತಮಾನಕಾಲ) ಇರು, ಆಗು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अस्ति | स्तः | सन्ति |
| ಮ. ಪು. | असि | स्थः | स्थ |
| ಉ. ಪು. | अस्मि | स्वः | स्मः |

ಈ ಧಾತುವಿನ ಮಧ್ಯಮಪುರುಷೈಕವಚನವು ಮೇಲಿನ ನಿಯಮದ ಮೇರೆಗೆ अस्+सि= अस्सि ಆಗತಕ್ಕದ್ದು. ಆದರೆ ಒಂದು ಸಕಾರವು ಲುಪ್ತವಾಗಿ असि ಎಂದಾಗುತ್ತದೆ.

## ಪರಸ್ಮೈಪದ.

### ಆಜ್ಞಾರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अस्तु | स्ताम् | सन्तु |
| ಮ. ಪು. | एधि | स्तम् | स्त |
| ಉ. ಪು. | असानि | असाव | असाम |

ಉತ್ತಮಪುರುಷಪ್ರತ್ಯಯಗಳು ಸಬಲವಾದದರಿಂದ ಅಕಾರಕ್ಕೆ ಲೋಪ ಬರಲಿಲ್ಲ. एधि ಎಂಬ ಮಧ್ಯಮಪುರುಷೈಕವಚನದ ರೂಪವು ವಿಕೃತವಾದದ್ದು.

ಈ ಧಾತುವು ಸ್ಥಲವಿಶೇಷದಲ್ಲಿ ಆತ್ಮನೇಪದರೂಪಗಳನ್ನು ಹೊಂದುತ್ತದೆ. ಆತ್ಮನೇಪದ ವರ್ತಮಾನಕಾಲದ ರೂಪಗಳು ಕೆಳಗೆ ಬರೆದಂತೆ —

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | स्ते | साते | सते |
| ಮ. ಪು. | से | साथे | ध्वे |
| ಉ. ಪು. | हे | स्वहे | स्महे |

ಯಾವತ್ತು ಪ್ರತ್ಯಯಗಳು ದುರ್ಬಲವಾದದರಿಂದ ಎಲ್ಲ ಕಡೆಗೂ ಅಕಾರಕ್ಕೆ ಲೋಪ ಬರುವದು. ಉತ್ತಮಪುರುಷೈಕವಚನದಲ್ಲಿ ಸಕಾರಕ್ಕೆ ಹಕಾರಾದೇಶವಾಗುವದು; ಮತ್ತು ಕೆಳಗಿನ ನಿಯಮದಂತೆ ध्वे ಪ್ರತ್ಯಯದ ಹಿಂದಿನ ಸಕಾರಕ್ಕೆ ಲೋಪ ಬರುವದು.

(ಕ) ಧಕಾರಾದಿ ಪ್ರತ್ಯಯಗಳ ಹಿಂದಿನ ಸಕಾರಕ್ಕೆ ಲೋಪ ಬರುವದು.

೩. शी (ಮಲಗು) ಧಾತುವಿಗೆ ಆಖ್ಯಾತಪ್ರತ್ಯಯಗಳು ಹತ್ತಲಾಗಿ, ಎಲ್ಲ ಪುರುಷವಚನಗಳಲ್ಲಿ ಈಕಾರಕ್ಕೆ ಗುಣವಾಗುವದು, ಮತ್ತು ಪ್ರಥಮಪುರುಷ ಬಹುವಚನದಲ್ಲಿ ಪ್ರತ್ಯಯದ ಹಿಂದೆ र् ಆಗಮ ಬರುವದು.

ಆತ್ಮನೇಪದ. ವರ್ತಮಾನಕಾಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | शेते | शयाते | शेरते |
| ಮ. ಪು. | शेषे | शयाथे | शेध्वे |
| ಉ. ಪು. | शये | शेवहे | शेमहे |

ಆಜ್ಞಾರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | शेताम् | शयाताम् | शेरताम् |
| ಮ. ಪು. | शेष्व | शयाथाम् | शेध्वम् |
| ಉ. ಪು. | शयै | शयावहै | शयामहै |

शी ಧಾತುವಿನ ಸ್ವರಕ್ಕೆ ಗುಣವಾಗಿ शे ಆಗುತ್ತದೆ; ಮುಂದೆ ಸ್ವರಾದಿ ಪ್ರತ್ಯಯಗಳು ಬರಲು शय् ಆಗುತ್ತದೆ; ಅದರಿಂದ शये, शयाथे ಮೊದಲಾದ ರೂಪಗಳು ಆಗುತ್ತವೆ. ವರ್ತಮಾನಕಾಲದ ಪ್ರ. ಪು. ಬಹುವಚನ शे + अते = शे + र् + अते = शेरते.

೪. ಉಕಾರಾಂತ ಧಾತುಗಳ ಮುಂದೆ ವ್ಯಂಜನಾದಿ ಸಬಲಪ್ರತ್ಯಯಗಳು ಬರಲಾಗಿ, ಉಕಾರಕ್ಕೆ ವೃದ್ಧಿಯಾಗುತ್ತದೆ, ಅಂದರೆ ಔಕಾರವಾಗುತ್ತದೆ.

(ಖ) ಧಾತುಗಳ ಕಡೆಯಲ್ಲಿ इ, ಉಕಾರಗಳು (ಹ್ರಸ್ವವಾಗಲಿ ದೀರ್ಘವಾಗಲಿ) ಇದ್ದು, ಮುಂದೆ ಸ್ವರಾದಿ ದುರ್ಬಲಪ್ರತ್ಯಯಗಳು ಬರಲಾಗಿ इಕಾರಕ್ಕೆ इय्, ಉಕಾರಕ್ಕೆ उव् ಆದೇಶವಾಗುತ್ತದೆ.

नु (೨ನೇ ಗ. ಪ.) ಸ್ತುತಿಸು.

| | ವರ್ತಮಾನಕಾಲ. | | | ಆಜ್ಞಾರ್ಥ. | | |
|---|---|---|---|---|---|---|
| | ಏ. | ದ್ವಿ. | ಬಹು. | ಏ. | ದ್ವಿ. | ಬಹು. |
| ಪ್ರ. ಪು. | नौति | नुतः | नुवन्ति | नौतु | नुताम् | नुवन्तु |
| ಮ. ಪು. | नौषि | नुथः | नुथ | नुहि | नुतम् | नुत |
| ಉ. ಪು. | नौमि | नुवः | नुमः | नवानि | नवाव | नवाम |

ಇಲ್ಲಿ ವ್ಯಂಜನಾದಿ ಸಬಲಪ್ರತ್ಯಯಗಳ ಪೂರ್ವದಲ್ಲಿ ಉಕಾರಕ್ಕೆ ವೃದ್ಧಿಯಾಗಿ नौमि, नौषि ಇತ್ಯಾದಿ ರೂಪಗಳಾಗುವವು. ಆಜ್ಞಾರ್ಥ ಉ. ಪು. ದ ಸ್ವರಾದಿ ಸಬಲಪ್ರತ್ಯಯಗಳು ಪರವಾಗಲು, ೧೪ನೇ ಪುಟದ ೬ನೇ ನಿಯಮಕ್ಕನುಸರಿಸಿ ಉಕಾರಕ್ಕೆ ಗುಣವಾಗಿ नो ಆಯಿತು, ತಿರಿಗಿ ಅದಕ್ಕೆ नव् ಆದೇಶ ಬಂತು (೧ನೇ ಪು., ಪುಟ ೪, ಟಿಪ್ಪಣಿ ನೋಡು). ಆದದರಿಂದ नवानि, नवाव, नवाम ಎಂಬ ರೂಪಗಳು ಸಿದ್ಧವಾದವು. यु (ಜೋಡಿಸು) ಧಾತುವು नुದಂತೆ ನಡೆಯುತ್ತದೆ.

೫. स्तु, रु ಧಾತುಗಳ ಮುಂದೆ ವ್ಯಂಜನಾದಿ ಪ್ರತ್ಯಯಗಳು ಬರಲು, ಆ ಪ್ರತ್ಯಯಗಳ ಪೂರ್ವದಲ್ಲಿ ವಿಕಲ್ಪದಿಂದ ಈ ಆಗಮವು ಬರುತ್ತದೆ.

ಪರಸ್ಮೈಪದ. ವರ್ತಮಾನಕಾಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | स्तौति - स्तवीति | स्तुतः - स्तुवीतः | स्तुवन्ति |
| ಮ. ಪು. | स्तौषि - स्तवीषि | स्तुथः - स्तुवीथः | स्तुथ - स्तुवीथ |
| ಉ. ಪು. | स्तौमि - स्तवीमि | स्तुवः - स्तुवीवः | स्तुमः - स्तुवीमः |

ति ಮುಂತಾದ ವ್ಯಂಜನಾದಿ ಸಬಲಪ್ರತ್ಯಯಗಳ ಪೂರ್ವದಲ್ಲಿ ಉಕಾರಕ್ಕೆ ವೃದ್ಧಿಯಾಗಿ (ಪುಟ ೪೨, ನಿಯಮ ೪) स्तौषि, स्तौति ಇತ್ಯಾದಿ ರೂಪಗಳಾದವು. ಆದರೆ ಈನೇ ನಿಯಮಕ್ಕನುಸರಿಸಿ ಈ ವ್ಯಂಜನಾದಿ ಸಬಲಪ್ರತ್ಯಯಗಳ ಪೂರ್ವದಲ್ಲಿ ಈ ಆಗಮವು ವಿಕಲ್ಪದಿಂದ ಬರಲು, ಆ ಪ್ರತ್ಯಯಗಳು ಸ್ವರಾದಿಯಾಗುತ್ತವೆ. ಅದರಿಂದ ಧಾತುವಿನ ಉಕಾರಕ್ಕೆ ಗುಣವಾಗಿ (ಪುಟ ೧೩, ನಿಯಮ ೬) ತಿರಿಗಿ ಅದಕ್ಕೆ अव् ಆದೇಶ ಬರುವದು. ತರುವಾಯ ಪ್ರತ್ಯಯಗಳನ್ನು ಹಚ್ಚಲು स्तवीति, स्तवीषि ಇತ್ಯಾದಿ ರೂಪಗಳಾಗುವವು. ವ್ಯಂಜನಾದಿ ದುರ್ಬಲಪ್ರತ್ಯಯಗಳ ಪೂರ್ವದಲ್ಲಿ ಈ ಆಗಮ ಬರಲು, ಅದರ ಹಿಂದಿನ ಉಕಾರಕ್ಕೆ उव् ಆದೇಶ ಬರುತ್ತದೆ. (ಪುಟ ೪೨, ನಿಯಮ ೩). ಉದಾ: स्तुवीतः ಪ್ರ. ಪು. ದ್ವಿವಚನ. ಪ್ರ. ಪು. ಬಹುವಚನದ ಪ್ರತ್ಯಯವು ಸ್ವರಾದಿಯಾಗಿರುವದರಿಂದ ಅದರ ಪೂರ್ವದಲ್ಲಿ ಈ ಆಗಮ ಬರುವದಿಲ್ಲ; ಆ ಕಾರಣ ಪ್ರ. ಪು. ಬಹುವಚನಕ್ಕೆ ಒಂದೇ ರೂಪವು.

ಆಜ್ಞಾರ್ಥದ ರೂಪಗಳಾದರೂ ಹೀಗೇ ಆಗುತ್ತವೆ. ಪ್ರ. ಪು. ಏ. स्तौतु–स्तवीतु; ಮ. ಪು. ಏ. स्तुहि–स्तुवीहि; ಉ. ಪು. ಏ: स्तवानि ಉ. ಪು. ದ್ವಿ. स्तवाव ಇತ್ಯಾದಿ.

ಆತ್ಮನೇಪದ ರೂಪಗಳು ಅದೇ ಮೇರೆಗೆ ಆಗುತ್ತವೆ. ಪ್ರ. ಪು. ಏ. स्तुते–स्तुवीते, ದ್ವಿ. स्तुवाते, ಬ. स्तुवते.

रु ಧಾತುವು स्तु ಧಾತುವಿನಂತೆ ನಡೆಯುತ್ತದೆ.

೬. ब्रू ಧಾತುವಿಗೆ ವ್ಯಂಜನಾದಿ ಸಬಲಪ್ರತ್ಯಯಗಳು ಪರವಾಗಲು, ಅವುಗಳ ಹಿಂದೆ ಈ ಆಗಮವು ಬರುತ್ತದೆ.

ವರ್ತಮಾನಕಾಲ.

| | ಪರ. | | | ಆತ್ಮ. | | |
|---|---|---|---|---|---|---|
| | ಏ. | ದ್ವಿ. | ಬಹು. | ಏ. | ದ್ವಿ. | ಬಹು. |
| ಪ್ರ. ಪು. | ब्रवीति | ब्रूतः | ब्रुवन्ति | ब्रूते | ब्रुवाते | ब्रुवते |
| ಮ. ಪು. | ब्रवीषि | ब्रूथः | ब्रूथ | ब्रूषे | ब्रुवाथे | ब्रूध्वे |
| ಉ. ಪು. | ब्रवीमि | ब्रूवः | ब्रूमः | ब्रुवे | ब्रूवहे | ब्रूमहे |

ರೂಪಸಿದ್ಧಿವಿಚಾರ: ब्रू+अन्ति=ब्रुव्+अन्ति (ಪುಟ ೪೨, ನಿಯಮ ೩)=ब्रुवन्ति.

ಆಜ್ಞಾರ್ಥ.

| | ಏ. | ದ್ವಿ. | ಬಹು. | ಏ. | ದ್ವಿ. | ಬಹು. |
|---|---|---|---|---|---|---|
| ಪ್ರ. ಪು. | ब्रवीतु | ब्रूताम् | ब्रुवन्तु | ब्रूताम् | ब्रुवाताम् | ब्रुवताम् |
| ಮ. ಪು. | ब्रूहि | ब्रूतम् | ब्रूत | ब्रूष्व | ब्रुवाथाम् | ब्रूध्वम् |
| ಉ. ಪು. | ब्रवाणि | ब्रवाव | ब्रवाम | ब्रवै | ब्रवावहै | ब्रवामहै |

೭. ನುಡಿ[1] ಎಂಬ ಅರ್ಥವುಳ್ಳ ಕೆಲವು ಕಾಲಗಳಲ್ಲಿ ಮಾತ್ರ ಪ್ರಯೋಗಿಸುವ ಧಾತುವಿಗೆ ವರ್ತಮಾನದಲ್ಲಿ ಐದು ವಿಕೃತರೂಪಗಳುಂಟು; ಅವು ಯಾವವಂದರೆ:

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | आह | आहतुः | आहुः |
| ಮ. ಪು. | आत्थ | आहथुः | |

೮. सू (ಹಡಿ, ಈಯು) ಧಾತುವಿಗೆ ಹತ್ತುವ ಆಜ್ಞಾರ್ಥ ಉತ್ತಮಪುರುಷದ ಪ್ರತ್ಯಯಗಳು ಸಹ ದುರ್ಬಲಪ್ರತ್ಯಯಗಳಂತೆ ವ್ಯವಹರಿಸುವವು. ಆ ರೂಪಗಳು ಹ್ಯಾಗಂದರೆ: ಆತ್ಮ. ವರ್ತಮಾನಕಾಲ--ಪ್ರ. ಪು. ಏ. सूते, ದ್ವಿ. सुवाते, ಬ. सुवते ಇತ್ಯಾದಿ; ಆಜ್ಞಾರ್ಥ—ಮ. ಪು. ಏ. सूष्व, ಉ. ಪು. ಏ. सुवै, ದ್ವಿ. सुवावहै, ಬಹು. सुवामहै.

೯. रुद्, स्वप्, श्वस्, अन्, जक्ष् ಈ ಧಾತುಗಳ ಮುಂದೆ य ಹೊರ್ತಾಗಿ ಉಳಿದ ವ್ಯಂಜನಾದಿಪ್ರತ್ಯಯಗಳು ಬರಲಾಗಿ ಆ ಪ್ರತ್ಯಯಗಳ ಪೂರ್ವದಲ್ಲಿ इ ಆಗಮವು ಬರುತ್ತದೆ. ಉದಾ: रुदिवः, रोदिमि ಇತ್ಯಾದಿ.

ವರ್ತಮಾನಕಾಲ.

रुद् (ಪರ.) ಅಳು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | रोदिति | रुदितः | रुदन्ति |
| ಮ. ಪು. | रोदिषि | रुदिथः | रुदिथ |
| ಉ. ಪು. | रोदिमि | रुदिवः | रुदिमः |

ಆಜ್ಞಾರ್ಥದ ರೂಪಗಳಿಗಾದರೂ ಇದೇ ನಿಯಮವು. ಉದಾ: रोदितु. रुदिहि, रोदानि. ಉಳಿದ ಧಾತುಗಳು रुद्ದಂತೆ ನಡೆಯುವವು. ಆದರೆ जक्ष् ಧಾತುವಿನ ಪ್ರ. ಪು. ಬಹುವಚನದ ಪ್ರತ್ಯಯದೊಳಗಿನ न्ಕಾರಕ್ಕೆ ಲೋಪ ಬರುತ್ತದೆ (ಪಾಠ ೧೯, ನಿಯಮ ೭ ನೋಡು).

---

[1] ಇದು ब्रू ಧಾತುವಿರಬಹುದೆಂದು ವಿದ್ವಾಂಸರ ಮತ ಉಂಟು. ಈ ಧಾತುವಿಗೆ ವರ್ತಮಾನಕಾಲದ ಪ್ರ. ಪು. ದಲ್ಲಿಯೂ, ಮ. ಪು. ಏಕದ್ವಿವಚನಗಳಲ್ಲಿಯೂ, ವಿಕಲ್ಪದಿಂದ ಕೆಲವು ವಿಕೃತರೂಪಗಳು ಆಗುತ್ತವೆ; ಅವನ್ನು ೭ನೇ ನಿಯಮದಲ್ಲಿ ಹೇಳಿರುತ್ತೇವೆ.

೧೦. ಪರಸ್ಮೈಪದ इ (ಹೋಗು) ಧಾತುವಿನ ಮುಂದೆ ಸ್ವರಾದಿ ದುರ್ಬಲ ಪ್ರತ್ಯಯಗಳು ಬರಲು, ಪುಟ ೪೨, ನಿಯಮ ಖಕ್ಕೆ ವಿರುದ್ಧವಾಗಿ इಕಾರಕ್ಕೆ य् ಆದೇಶವಾಗುವದು. ಉದಾ:

ಪರಸ್ಮೈಪದ.

| | ವರ್ತಮಾನಕಾಲ. | | | ಆಜ್ಞಾರ್ಥ. | | |
|---|---|---|---|---|---|---|
| | ಏ. | ದ್ವಿ. | ಬಹು. | ಏ. | ದ್ವಿ. | ಬಹು. |
| ಪ್ರ. ಪು. | एति | इतः | यन्ति | एतु | इताम् | यन्तु |
| ಮ. ಪು. | एषि | इथः | इथ | इहि | इतम् | इत |
| ಉ. ಪು. | एमि | इवः | इमः | अयानि | अयाव | अयाम |

अधि+इ (ಆತ್ಮ.) ಕಲಿ, ಅಭ್ಯಾಸ ಮಾಡು. ವರ್ತಮಾನಕಾಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अधीते | अधीयाते | अधीयते |
| ಮ. ಪು. | अधीषे | अधीयाथे | अधीध्वे |
| ಉ. ಪು. | अधीये | अधीवहे | अधीमहे |

ಇದರಲ್ಲಿ इ ಧಾತುವು ಆತ್ಮನೇಪದಿಯಾದದರಿಂದ इಕಾರಕ್ಕೆ ಪುಟ ೪೨, ಖ ನಿಯಮದಂತೆ इय् ಆದೇಶವಾಗುವದು.

ಈ ಧಾತುವಿನ ಆಜ್ಞಾರ್ಥ ಉತ್ತಮಪುರುಷದ ರೂಪಗಳು ಹ್ಯಾಗಂದರೆ:

अध्ययै, अध्ययावहै, अध्ययामहै.

ಇಲ್ಲಿ इಕಾರಕ್ಕೆ ಗುಣವಾಗಿ ए ಆಗುವದು. ए+ऐ=अय्+ऐ=अयै; अधि+अयै=अध्ययै ಎಂಬ ರೂಪವಾಗುವದು; ಅಥವಾ,

अधि+इ+ऐ=अधि+ए+ऐ (ಪುಟ ೧೩, ನಿ. ೬)=अधि+अय्+ऐ (೧ನೇ ಪುಸ್ತಕದ ಪುಟ ೪, ಟಿಪ್ಪಣಿ ೩)=अध्ययै (೧ನೇ ಪುಸ್ತಕದ ಪುಟ ೨೨, ಟಿಪ್ಪಣಿ ೩).

आस् (ಆತ್ಮ.) ಕೂಡ್ರು (ಆಜ್ಞಾರ್ಥ).

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | आस्ताम् | आसाताम् | आसताम् |
| ಮ. ಪು. | आस्स्व | आसाथाम् | आध्वम् |
| ಉ. ಪು. | आसै | आसावहै | आसामहै |

ಪುಟ ೪೧, ನಿಯಮ ಕದಿಂದ ध्ಕಾರದ ಹಿಂದಿನ सಕಾರಕ್ಕೆ ಲೋಪ ಬರುವದು.

अस्मिञ्जगति ये सन्ति कवयस्तान्नमस्कृत्यैतं ग्रन्थमारभे ।

पृच्छ बालकः किं रोदिति ।

हे कृपानिधे जगदात्मंस्त्वां ब्रह्मादयः सर्वे देवाः स्तुवन्त्यृषयश्च सर्वे ।

ईदृशं त्वां शरणमुपैमि । प्रसीद । पाहि मां नरकाद्घोरात् ।

अस्यां पाठशालायां बालकाः काव्यमधीयते ।

तरुषु मधुरं रुवन्ति पक्षिणो वायुश्च शीतलो वाति तस्माद्रम्यमिदं स्थानम् । अत्रैव वृक्षमूले शिलामध्यासामहै[1] ।

भो भोः पौराः क्व गतोऽस्माकं महाराजः किं ब्रूथ । देव्या सह क्रीडाशैलमध्यास्त इति । एवमस्तु । अहं तत्र गच्छामि सर्वं च वृत्तं कथयामि ।

अकिंचनो वितृष्णाश्च सुखं स्वपिति रात्रौ ।

ये प्राणन्ति जीवन्ति च तेषां जडानां चादिहेतुं मे ब्रूहि ।

वत्से समाश्वसिहि समाश्वसिहि । अयमागतस्तव पुत्रको यं त्वं मृतं मन्यसे ।

गोविन्दः स्मितेनात्मनः कोपमपह्नुते ।
अश्विनौ मदनमपि सौन्दर्येऽतिशयाते ॥
रात्रावुदयते चन्द्रो दिवोदयति भास्करः ।
उदेति स सदैवोग्रं नोदीयन्ते च विद्विषः ॥
प्राणिनामुपकाराय प्राणिति प्रियदर्शनः ।
प्राण्यते पुण्यपुरुषः श्रेयसे यशसे च सः ॥
स स्तौति भास्करं भक्त्या नौति पापहरं हरम् ॥
एधि कार्यकरस्त्वं मे गत्वा प्रवद राघवम् ।
दिदृक्षुर्मैथिली राम पश्यतु त्वाविलम्बितम् ॥
ते जन्मभाजः खलु जीवलोके येषां मनो ध्यायति विश्वनाथम् ।
वाणी गुणान्स्तौति कथां शृणोति श्रोत्रद्वयं ते भवमुत्तरन्ति ॥
धर्मदूषण नूनं त्वं नाजाना नाशृणोरिदम् ।
निराकृत्य यथा बन्धूल्लँघुत्वं यात्यसंशयम् ॥
भूमौ शेते दशग्रीवो महार्हशयनोचितः ।
नेक्षते विह्वलं मां च न मे वाचं प्रयच्छति ॥
समाश्वसिमि केनाहं कथं प्राणिमि दुर्गतः ।
लोकत्रयपतिर्भ्राता यस्य मे स्वपिति क्षितौ ॥

---

[1] अधि ಪೂರ್ವಕ शी, आस्, स्था ಧಾತುಗಳ ಅಧಿಕರಣಕ್ಕೆ ದ್ವಿತೀಯಾವಿಭಕ್ತಿ ಬರುವದು.

रोदिस्यनाथमात्मानं बन्धुना रहितस्त्वया ।
प्रमाणं नोपकाराणामवगच्छामि यस्य ते ॥
आस्ते भग आसीनस्योर्ध्वस्तिष्ठति तिष्ठतः ।
शेते निपद्यमानस्य चराति[1] चरतो भगः ॥
गाधोदके मत्स्य इव सुखं विन्देत कस्तदा ।
अनवाप्तेषु कामेषु मृत्युरभ्येति मानवम् ॥
जातमेवान्तकोऽन्ताय जरा चान्वेति देहिनम् ।
अनुषक्ता ह्यनेनैते भावाः स्थावरजङ्गमाः ॥
निन्दन्तु नीतिनिपुणा यदि वा स्तुवन्तु ।
लक्ष्मीः समाविशतु गच्छतु वा यथेष्टम् ॥
अद्यैव वा मरणमस्तु युगान्तरे वा ।
न्याय्यात्पथः प्रविचलन्ति पदं न धीराः ॥

ನಾವು ಗೋವಿಂದನ ಮಾತು ನಂಬುವದಿಲ್ಲ (वि + श्वस्).

ನಿಂದೆಗೆ ಪಾತ್ರರಾದವರನ್ನು ನೀವು ಹೊಗಳುತ್ತೀರಿ (स्तु).

ಈ ಹಕ್ಕಿಗಳು ಗೋಮತಿಯ ತೀರದಲ್ಲಿ ಮಲಗುತ್ತವೆ (शी).

ಮಗನೇ, ಅಳಬೇಡ (रुद्), ಇಗೋ ನಿನ್ನ ತಾಯಿಯು ಕೈಯಲ್ಲಿ ಮಿಠಾಯಿ ತೆಗೆದುಕೊಂಡು ಬರುತ್ತಾಳೆ (अभि + आ + इ) ನೋಡು.

ಈ ಎರಡು ಆಕಳುಗಳು ವರ್ಷಕ್ಕೊಮ್ಮೆ ಈಯುತ್ತವೆ (सू).

ಜನಕನು ರಾಮನ ಮಾವನೆಂಬದನ್ನು ನೀನರಿಯಾ (अव + इ)?

ಶಾಲೆಯಲ್ಲಿ ನೀನೂ ನಿನ್ನ ಅಣ್ಣನೂ ಯಾವ ವಿಷಯವನ್ನು ಕಲಿಯುತ್ತೀರಿ (अधि + इ)?

ಎತ್ತರವಾದ ಬೆಟ್ಟಗಳ ಶಿಖರಗಳ ಮೇಲೆ ಜನರು ಕಷ್ಟದಿಂದ ಉಸುರಾಡಿಸುತ್ತಾರೆ (नि + श्वस्).

ಇಲ್ಲಿಯ ಜನರು ಬಡವರೆಂದು ನನಗೆ ತೋರುತ್ತದೆ (भा).

ದಿಕ್ಕಿಲ್ಲದವರನ್ನೂ ಬಡವರನ್ನೂ ಕಾಡುವವನು ಯಾವನಾದರೂ ಇರುವನೋ (प्र + अन्)?

ಮೈಗಳ್ಳನು ಬಹಳ ಹೊತ್ತು ಮಲಗುತ್ತಾನೆ (स्वप्).

---

[1] चराति ಇದು ನಿಯಮವನ್ನು ಬಿಟ್ಟು ಮಾಡಿದ ರೂಪವು, चरति ಇರತಕ್ಕದ್ದು; ವೃತ್ತಭಂಗವಾಗಬಾರದೆಂದು चराति ರೂಪವನ್ನು ಇಟ್ಟಿರಬಹುದು.

ಖರೇ ದೇವರನ್ನು ಬಿಟ್ಟು ಅನ್ಯದೇವರನ್ನು ಯಾರು ಪೂಜಿಸುತ್ತಾರೋ (उप + आस्) ಅವರು ಅಕ್ಷಯಸುಖವನ್ನು ಹೊಂದುವದಿಲ್ಲ.

ಕುದುರೆ ಎಂಬ ಪ್ರಾಣಿಯು ಹ್ಯಾಗಿರುತ್ತದೆ ಹೇಳು (ब्रू).

---

## ಕೋಶ ೨.

### ೨ನೇ ಗಣದ ಧಾತುಗಳು.

अन् (ಪ.) ಉಸುರಾಡಿಸು; प्र + अन् ಜೀವಿಸು, ಬದುಕು, ಇರು.

अस्[1] (ಪ.) ಇರು, ಆಗು.

आस् (ಆ.) ಕೂಡ್ರು; अधि + आस् ಕೂಡ್ರು; उप + आस् ಪೂಜಿಸು.

इ (ಪ.) ಹೋಗು; शरणम् + उप + इ ಅಧೀನವಾಗು; अभि + इ ಎದುರಿಗೆ ಹೋಗು, ಕಡೆಗೆ ಹೋಗು; आ + इ ಬರು; अव + इ ಅರಿ; उद् + इ ಮೇಲಕ್ಕೇರು, ಏಳು, ಹುಟ್ಟು; अधि + इ (ಆತ್ಮ.) ಕಲಿ, ಅಭ್ಯಾಸ ಮಾಡು.

ख्या (ಪ.) ಹೇಳು.

जक्ष् (ಪ.) ತಿನ್ನು.

दा (ಪ.) ಕಡಿ, ಕೊಯ್ಯು.

नु (ಪ.) ಸ್ತುತಿಸು, ಹೊಗಳು.

पा (ಪ.) ಕಾಪಾಡು.

प्सा (ಪ.) ತಿನ್ನು, ಭಕ್ಷಿಸು.

ब्रू[1] (ಉ. ಪ.) ನುಡಿ, ಹೇಳು.

भा (ಪ.) ತೋರು, ಹೊಳೆ.

या (ಪ.) ಹೋಗು.

यु (ಪ.) ಕೂಡಿಸು, ಜೋಡಿಸು.

रा (ಪ.) ಕೊಡು.

रु (ಪ.) ಸಪ್ಪಳ ಮಾಡು, ಒದರು.

रुद् (ಪ.) ಅಳು.

ला (ಪ.) ಕೊಡು, ತಕ್ಕೋ.

वस् (ಆತ್ಮ.) ವಸ್ತ್ರ ಧರಿಸು.

वा (ಪ.) ಊದು, ಬೀಸು.

शी (ಆತ್ಮ.) ಮಲಗು, ಅಡ್ಡಾಗು; अति + शी ಹೆಚ್ಚಾಗು, ಮಿಗು.

श्रा (ಪ.) ಅಡು.

श्वस् (ಪ.) ಉಸುರಾಡಿಸು; नि + श्वस् ಉಸುರಾಡಿಸು; वि + श्वस् ನಂಬು; सम् + आ + श्वस् ಧೈರ್ಯ ತಾಳು.

सू (ಆತ್ಮ.) ಹಡಿ, ಈಯು.

स्तु (ಉಭ.) ಹೊಗಳು.

स्ना (ಪ.) ಜಳಕ ಮಾಡು.

स्नु (ಪ.) ಬಸಿ, ಸೋರು.

स्वप् (ಪ.) ಮಲಗು.

ह्नु (ಆತ್ಮ.) ಮುಚ್ಚು { अप + ह्नु / नि + ह्नु } ಕಣ್ಣಿಗೆ ಮರೆ ಮಾಡಿ ಇಡು, ಮುಚ್ಚು.

---

अकिंचन (ವಿ.) [अ ಇಲ್ಲ, किंचन (ನ.) ಏನಾದರೂ] ದರಿದ್ರ.

अण् (೪ನೇ ಗ. ಆ.) ಬದುಕು, ಇರು.

अनाथ (ವಿ.) ದಿಕ್ಕಿಲ್ಲದ, ಗತಿ ಇಲ್ಲದ.

अनुषक्त (ವಿ.) ಒಡಗೂಡಿ ಹೋಗುವ.

अन्त (ಪು.) ನಾಶ, ಕೊನೆ.

अन्तक (ಪು.) ಯಮ.

अय् (೧ನೇ ಗ. ಆ.) उद् + अय् ಏರು, ಮೂಡು.

अविलम्बितम् (ಅ.) ತಡವಿಲ್ಲದೆ.

---

[1] अस् ಮತ್ತು ब्रू ಧಾತುಗಳು ಸಾರ್ವಧಾತುಕ ಆಖ್ಯಾತಪ್ರತ್ಯಯಗಳನ್ನು ಮಾತ್ರ ಧರಿಸುತ್ತವೆ.

आश्विन् (ಪು.) ದೇವತೆಗಳ ವೈದ್ಯರು (ಇದು ದ್ವಿವಚನದಲ್ಲಿ ಮಾತ್ರ ವ್ಯವಹರಿಸುವದು).

असंशयम् (ಅ.) ಖಂಡಿತವಾಗಿ, ನಿಸ್ಸಂದೇಹವಾಗಿ.

आदिहेतु (ಪು.) ಮೂಲ ಕಾರಣ.

आसीन (ವ. ಕೃ. आस् ಧಾತು) ಕೂಡ್ರುವ.

आहव (ಪು.) ಕಾಳಗ.

उद् + इ (೧ನೇ ಗ. ಪ.) ಏರು, ಹುಟ್ಟು, ಏಳು.

उद् + ई (೪ನೇ ಗ. ಆ.) ಏರು, ಹುಟ್ಟು, ಏಳು.

उग्रम् (ಅ.) ಬಲವಾಗಿ, ಭಯಂಕರವಾಗಿ.

उपकार (ಪು.) ಹಿತ, ಒಳಿತು ಮಾಡೋಣ.

ऊर्ध्व (ವಿ.) ಮೇಲಿನ, ನೀಟಾದ.

कार्यकर (ವಿ.) ಎರಡನೆಯವರ ಸಲುವಾಗಿ ಕೆಲಸ ಮಾಡುವ.

काव्य (ನ.) ಕವಿತ್ವ.

नमस् + कृ (೮ನೇ ಗ.) ವಂದಿಸು; निस् + आ + कृ ಜರಿದುಬಿಡು, ಬಿಟ್ಟುಬಿಡು, ತಿರಸ್ಕರಿಸು.

कृपानिधि (ಪು.) [कृपा (ಸ್ತ್ರೀ.) ದಯೆ; निधि (ಪು.) ಸಾಗರ] ಅಂತಃಕರಣವುಳ್ಳವನು.

क्रीडाशैल (ಪು.) [क्रीडा (ಸ್ತ್ರೀ.) ಆಟ, ವಿನೋದ, शैल (ಪು.) ಬೆಟ್ಟ] ಆಡುಂಬೆಟ್ಟ.

क्षिति (ಸ್ತ್ರೀ.) ಭೂಮಿ, ನೆಲ, ಪೃಥ್ವಿ.

खलु (ಅ.) ನಿಶ್ಚಯವಾಗಿ.

गाधोदक (ನ.) [गाध (ವಿ.) ಆಳವಿಲ್ಲದ, उदक (ನ.) ನೀರು] ಆಳವಿಲ್ಲದ ನೀರು.

गोमती (ಸ್ತ್ರೀ.) ಒಂದು ನದಿಯ ಹೆಸರು.

घोर (ವಿ.) ಭಯಂಕರವಾದ.

प्र + वि + चल् ಸರಿ, ಓರೆಯಾಗು.

जगदात्मन् (ಪು.) ವಿಶ್ವರೂಪ.

जड (ವಿ.) ಅಚೇತನ.

जन्मभाज् (ವಿ.) ಹುಟ್ಟುವವ; (ಪು.) ಮನುಷ್ಯ.

जीवलोक (ಪು.) ಭೂಲೋಕ.

दरिद्र (ಪು.) ಬಡ.

दिदृक्षु (ವಿ.) ನೋಡಲಪೇಕ್ಷಿಸುವ.

दिवा (ಅ.) ಹಗಲು, ಹಗಲಿನಲ್ಲಿ.

दुर्गत (ವಿ.) ಕಂಗಾಲ, ದುಃಖಾಕ್ರಾಂತ.

देहिन् (ವಿ.) ಶರೀರವುಳ್ಳವ; (ಪು.) ಮನುಷ್ಯ.

द्वय (ನ.) ಜೋಡು.

धर्मदूषण (ವಿ.) ಧರ್ಮವನ್ನು ಕೆಡಿಸುವವ.

ध्यै (೧ನೇ ಗ. ಪ.) ಧ್ಯಾನಿಸು, ಚಿಂತಿಸು.

नरक (ಪು.) ನಿರಯ.

निपद्यमान (ವಿ.) ಅಡ್ಡಾಗುವ, ಮಲಗುವ.

नीतिनिपुण (ವಿ.) ರಾಜ್ಯವ್ಯವಹಾರಕುಶಲ, ಜಾಣ, ಬುದ್ಧಿವಂತ, ವಿವೇಕವುಳ್ಳ.

नूनम् (ಅ.) ನಿಶ್ಚಯವಾಗಿ, ಖಂಡಿತವಾಗಿ.

न्याय्य (ವಿ.) ತಕ್ಕ, ಉಚಿತ, ನೀತಿಯುಳ್ಳ.

पथः (पथिन् ಶಬ್ದದ ಪಂಚಮೀ) ಹಾದಿಯಿಂದ.

पद (ನ.) ಹೆಜ್ಜೆ, ಅಡಿ.

पापहर (ವಿ.) ಪಾತಕ ಪರಿಹಾರ ಮಾಡುವ.

पुण्यपुरुष (ಪು.) ಧರ್ಮಶೀಲನು, ಪುಣ್ಯವಂತನು.

प्रियदर्शन (ವಿ.) ಚಲುವ, ಸುರೂಪ, ಸುಂದರ.

ब्रह्मन् (ನ.) ಲೋಕದ ದಿವ್ಯ ತತ್ವವು, ಜಗದಾದಿಕಾರಣವು.

ब्रह्मादि (ಪು.) [ब्रह्मन् ಬ್ರಹ್ಮನು, आदि ಮೊದಲುಳ್ಳ] ಬ್ರಹ್ಮನು ಮೊದಲಾದ ದೇವತೆಗಳು.

भग (ಪು.) ದೈವ, ಐಶ್ವರ್ಯ.

भव (ಪು.) ಸಂಸಾರ, ಲೋಕ.

भाव (ಪು.) ಪದಾರ್ಥ, ಒಡವೆ.

भास्कर (ಪು.) ಸೂರ್ಯ.

भिन्न (ವಿ.) ಬೇರೆ ಬೇರೆ.

मधुरम् (ಅ.) ಸವಿಯಾಗಿ, ಇನಿದಾದ.

महाराज (ಪು.) ದೊಡ್ಡ ಅರಸು.

महार्हशयनोचित (ವಿ.) [महार्ह (ವಿ.) ಬೆಲೆಯುಳ್ಳ, शयन (ನ.) ಹಾಸಿಕೆ, उचित (वच् ಧಾ. ಭೂ. ಕೃ.) ಅಭ್ಯಾಸವುಳ್ಳ] ಉತ್ತಮ ಹಾಸಿಕೆಯ ಮೇಲೆ ಮಲಗಿಕೊಳ್ಳುವ ಅಭ್ಯಾಸವುಳ್ಳ.

मानव (ಪು.) ಮನುಷ್ಯ.

मैथिली (ಸ್ತ್ರೀ.) ಮಿಥಿಲಾ ದೇಶದ ಅರಸನ ಮಗಳು, ಸೀತಾದೇವಿ.
यथेष्टम् (ಅ.) ಮನಸ್ಸಿಗೆ ಬಂದಂತೆ, ಬೇಕಾದಷ್ಟು.
युगान्तर (ನ.) [युग (ಪು.) ಕಾಲಾವಧಿ, अन्तर ಬೇರೆ, ಎರಡನೇ] ಎರಡನೇ ಯುಗ.
रम्य (ವಿ.) ಮನೋಹರವಾದ.
रहित (ವಿ.) ಇಲ್ಲದ.
राघव (ಪು.) ರಘುರಾಯನ ವಂಶದವನು.
लोकत्रयपति (ಪು.) ಮೂರು ಲೋಕದ ಒಡೆಯ, ಸ್ವರ್ಗ ಮೃತ್ಯು ಪಾತಾಳಲೋಕಗಳ ಒಡೆಯು.
वत्सा (ಸ್ತ್ರೀ.) ಮಗಳು.
वितृष्ण (ವಿ.) ಆಶೆ ಇಲ್ಲದ, ಲೋಭವಿಲ್ಲದ.

सम् + आ + विश् ಸೇರು, ಹೋಗು.
विश्वनाथ (ಪು.) ದೇವರು, ಲೋಕದ ಒಡೆಯು.
विह्वल (ವಿ.) ಕಳವಳಗೊಂಡ, ದುಃಖಾಕ್ರಾಂತ.
वृक्षमूल (ನ.) ಗಿಡದ ಬೊಡ್ಡಿ, ಬೇರು.
वृत्त (ನ.) ಆದ ಕಾರ್ಯ, ಸಂಗತಿ.
शीतल (ವಿ.) ತಣ್ಣಗಾದ.
श्रोत्रद्वय (ನ.) ಕಿವಿಗಳ ಜೋಡು.
सद् (सीद्) (೧ನೇ ಗ. ಪ.) ಕೊಡು(?).
प्र + सद् (सीद्) ಸಂತುಷ್ಟನಾಗು.
सायम् (ಅ.) ಸಾಯಂಕಾಲದಲ್ಲಿ.
स्थावरजङ्गम (ವಿ.) ಚರಾಚರ.
स्मित (ನ.) ನಗೆ.
हर (ಪು.) ಮಹಾದೇವ.

---

ಕರು वत्स (ಪು.).
ಕಷ್ಟ असौकर्य (ನ.).
ಮಾವ [ಹೆಣ್ಣು ಕೊಟ್ಟ] श्वशुर (ಪು.).
ದಿಕ್ಕಿಲ್ಲದ अनाथ (ವಿ.).
ದೊಡ್ಡ, ಶ್ರೇಷ್ಠವಾದ उच्च (ವಿ.).
ಮೈಗಳ್ಳ अलस (ವಿ.), तन्द्रिल (ವಿ.).

ಕಾಡು अप + कृ, नि + कृ, पीड्
ತಕ್ಕೊಂಡು गृहीत्वा (ಅ.).
ಖರೆ सत्यस्वरूप (ವಿ.).
ದೇವರು परमात्मन् (ಪು.).
ಮಾತು वचः (ನ.), वचन (ನ.).
ಎಂಥ कीदृश (ವಿ.).

## ೮ನೇ ಪಾಠ.

### ೨ನೇ ಗಣ (ಮುಂದೆ ಸಾಗಿದ್ದು).

### ಅನದ್ಯತನಭೂತಕಾಲವೂ ವಿಧ್ಯರ್ಥವೂ.

೧. आಕಾರಾಂತ ಧಾತುಗಳ ಅನದ್ಯತನಭೂತಕಾಲದ ಪ್ರಥಮಪುರುಷ ಬಹುವಚನಪ್ರತ್ಯಯಕ್ಕೆ ವಿಕಲ್ಪದಿಂದ उस् ಆದೇಶವಾಗುತ್ತದೆ. ಈ ಆದೇಶದ ಹಿಂದಿನ आಕಾರಕ್ಕೆ ಲೋಪ ಬರುತ್ತದೆ.

या (೨ನೇ ಗ. ಪ.) ಹೋಗು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अयात् | अयाताम् | अयान्, अयुः |
| ಮ. ಪು. | अयाः | अयातम् | अयात |
| ಉ. ಪು. | अयाम् | अयाव | अयाम |

अया + अन् = अयान्, अन् ಕ್ಕೆ ವಿಕಲ್ಪದಿಂದ उस् ಆದೇಶವಾಗುತ್ತದೆ. ಅದರಿಂದ अया + उस् (ಆದೇಶದ ಹಿಂದಿನ ಆಕಾರಕ್ಕೆ ಲೋಪ ಬರುವದು, ಅದರಿಂದ) अय् + उस् = अयुः.

ವಿಧ್ಯರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | यायात् | यायाताम् | यायुः |
| ಮ. ಪು. | यायाः | यायातम् | यायात |
| ಉ. ಪು. | यायाम् | यायाव | यायाम |

ಪ್ರತ್ಯಯಗಳು ಪಾಠ ೪, ನಿಯಮ ೨ರಲ್ಲಿ ಹೇಳಿದವೇ.

೨. अस् (ಇರು) ಧಾತುವಿಗೆ ಅನದ್ಯತನಭೂತಕಾಲದಲ್ಲಿ स्, त् ಪ್ರತ್ಯಯಗಳು ಪರವಾಗಲು ಆ ಪ್ರತ್ಯಯಗಳ ಹಿಂದೆ ई ಆಗಮ ಬರುತ್ತದೆ.

| | | ಏ. | ದ್ವಿ. | ಬಹು. |
|---|---|---|---|---|
| | ಪ್ರ. ಪು. | आसीत् | आस्ताम् | आसन् |
| | ಮ. ಪು. | आसीः | आस्तम् | आस्त |
| | ಉ. ಪು. | आसम् | आस्व | आस्म |
| ವಿಧ್ಯರ್ಥ. | ಪ್ರ. ಪು. | स्यात् | स्याताम् | स्युः ಇತ್ಯಾದಿ. |

अस् + याम् = स् + याम् (ಪಾಠ ೭, ನಿಯಮ ೨ ನೋಡು) = स्याम्.

೩. रुद्, स्वप्, श्वस्, अन्, जक्ष् ಧಾತುಗಳಿಗೆ ಅನದ್ಯತನಭೂತಕಾಲದ स्, त् ಪ್ರತ್ಯಯಗಳು ಪರವಾಗಲು, ಆ ಪ್ರತ್ಯಯಗಳ ಹಿಂದೆ ई ಅಥವಾ अ ಆಗಮ ಬರುವದು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अरोदीत् / अरोदत् | अरुदिताम् | अरुदन् |
| ಮ. ಪು. | अरोदीः / अरोदः | अरुदितम् | अरुदित |
| ಉ. ಪು. | अरोदम् | अरुदिव | अरुदिम |

ಇದರಲ್ಲಿ ताम्, तम् ಇತ್ಯಾದಿ ಪ್ರತ್ಯಯಗಳ ಪೂರ್ವದಲ್ಲಿ इ ಆಗಮ ಬರುತ್ತದೆ. (ಪುಟ ೪೪, ನಿಯಮ ೮ ನೋಡು.) जक्ष् ಧಾತುವಿನ ಪ್ರ. ಪುರುಷ ಬಹುವಚನದ ರೂಪವು अजक्षुः ಆಗುತ್ತದೆ (ಪಾಠ ೧೦, ನಿಯಮ ೧ ನೋಡು.)

| | | ಏ. | ದ್ವಿ. | ಬಹು. |
|---|---|---|---|---|
| ವಿಧ್ಯರ್ಥ. | ಪ್ರ. ಪು. | रुद्यात् | रुद्याताम् | रुद्युः |

ಶೀ ಮಲಗು.

| | | ಏ. | ದ್ವಿ. | ಬಹು. |
|---|---|---|---|---|
| ಅನದ್ಯತನಭೂತಕಾಲ. | ಪ್ರ. ಪು. | अशेत | अशयाताम् | अशेरत |
| ವಿಧ್ಯರ್ಥ. | ಪ್ರ. ಪು. | शयीत | शयीयाताम् | शयीरन् |

ಪ್ರತ್ಯಯಗಳನ್ನು ಕುರಿತು ಪಾಠ ೩, ನಿಯಮ ೧, ಮತ್ತು ಪಾಠ ೪, ನಿಯಮ ೪ ನೋಡು. ಧಾತುವಿನ ವಿಕಾರಕ್ಕೆ ಪಾಠ ೭, ನಿಯಮ ೩ ನೋಡು.

स्तु (ಉಭ.) ಹೊಗಳು.

ಪರಸ್ಮೈಪದ.

| | | ಏ. | ದ್ವಿ. | ಬಹು. |
|---|---|---|---|---|
| ಅನದ್ಯತನಭೂತಕಾಲ. | ಪ್ರ. ಪು. | अस्तौत्<br>अस्तवीत् | अस्तुताम्<br>अस्तुवीताम् | अस्तुवन् |

ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अस्तुत<br>अस्तुवीत | अस्तुवाताम् | अस्तुवत |

ಪರಸ್ಮೈಪದ.

| | | ಏ. | ದ್ವಿ. | ಬಹು. |
|---|---|---|---|---|
| ವಿಧ್ಯರ್ಥ. | ಪ್ರ. ಪು. | स्तुयात्<br>स्तुवीयात् | स्तुयाताम्<br>स्तुवीयाताम् | स्तुयुः<br>स्तुवीयुः |

ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | स्तुवीत | स्तुवीयाताम् | स्तुवीरन् |

ಉಕಾರಕ್ಕೆ ವೃದ್ಧಿಯಾದದ್ದಕ್ಕೆ ಪಾಠ ೭, ನಿಯಮ ೪, ಪ್ರತ್ಯಯದ ಪೂರ್ವದಲ್ಲಿ ವಿಕಲ್ಪದಿಂದ ಈಕಾರಾಗಮ ಬಂದದ್ದಕ್ಕೆ ಪಾಠ ೭, ನಿಯಮ ೫ ನೋಡು.

ब्रू ಹೇಳು, ನುಡಿ.

ಪರಸ್ಮೈಪದ.

| | | ಏ. | ದ್ವಿ. | ಬಹು. |
|---|---|---|---|---|
| ಅನದ್ಯತನಭೂತಕಾಲ. | ಪ್ರ. ಪು. | अब्रवीत् | अब्रूताम् | अब्रुवन् |

ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अब्रूत | अब्रुवाताम् | अब्रुवत |

ಪರಸ್ಮೈಪದ.

| | | ಏ. | ದ್ವಿ. | ಬಹು. |
|---|---|---|---|---|
| ವಿಧ್ಯರ್ಥ. | ಪ್ರ. ಪು. | ब्रूयात् | ब्रूयाताम् | ब्रूयुः |

ಆತ್ಮನೇಪದ.

| | | ಏ. | ದ್ವಿ. | ಬಹು. |
|---|---|---|---|---|
| ವಿಧ್ಯರ್ಥ. | ಪ್ರ. ಪು. | ब्रुवीत | ब्रुवीयाताम् | ब्रुवीरन् |

इ ಹೋಗು.

| | | ಏ. | ದ್ವಿ. | ಬಹು. |
|---|---|---|---|---|
| ಅನದ್ಯತನಭೂತ. | ಪ್ರ. ಪು. | ऐत् | ऐताम् | आयन् |

ಇದರಲ್ಲಿ ಭೂತಕಾಲದಲ್ಲಿ ಧಾತುಗಳ ಹಿಂದೆ ಬರುವ आ ದ ಮುಂದೆ ಏಕವಚನದಲ್ಲಿ ಏಕಾರವೂ ದ್ವಿಬಹುವಚನಗಳ इ ಕಾರವೂ ಬಂದಾಗ್ಯೂ, ಪೂರ್ವಪರ ಸ್ಥಾನಗಳಲ್ಲಿ ಕೂಡಿ ऐ ಕಾರಾದೇಶವಾಗುತ್ತದೆ. (೧ನೇ ಪುಸ್ತಕದ ೫ನೇ ಆವೃತ್ತಿ, ೭೧ನೇ ಪುಟ ನೋಡು.)

ಪ್ರ. ಪುರುಷ ಬಹುವಚನದಲ್ಲಿ इ + अन् = यन् ಆಗುತ್ತದೆ (ಪಾಠ ೭, ನಿ. ೧೦ ನೋಡು). ಅದರ ಹಿಂದೆ आ ಆಗಮ ಬರಲು आयन् ಎಂಬ ರೂಪವು ಸಿದ್ಧವಾಗುತ್ತದೆ, ಅಥವಾ आ + इ + अन् = ए + अन् (ಪಾಠ ೭, ನಿ. ೧೦) = आ + अयन् = आ + यन् (೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೭೧).

अधि + इ (ಆತ್ಮನೇಪದ) ಕಲಿ.

| | | ಏ. | ದ್ವಿ. | ಬಹು. |
|---|---|---|---|---|
| ಅನದ್ಯತನ. | ಪ್ರ. ಪು. | अध्यैत | अध्यैयाताम् | अध्यैयत |

इ + आताम् = इयाताम् (ಪಾಠ ೭, ನಿಯಮ ಖ ನೋಡು); ಇದರ ಹಿಂದೆ ಭೂತಕಾಲದ ಆಗಮ ಇಡಲು, आ + इयाताम् = ऐयाताम् ಆಗುವದು (೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೭೧ ನೋಡು).

अधि + ऐयाताम् = अध्यैयाताम्; ಅದೇ ಮೇರೆಗೆ अध्यैत, अध्यैयत ರೂಪಗಳಾಗುವವು.

| | | | | |
|---|---|---|---|---|
| ವಿಧ್ಯರ್ಥ. | ಪ್ರ. ಪು. | अधीयीत, | अधीयीयाताम्, | अधीयीरन् |

आस् (ಆ.) ಕೂಡ್ರು.

| | | | | |
|---|---|---|---|---|
| ಅನದ್ಯ. | ಮ. ಪು. | आस्थाः | आसाथाम् | आध्वम् |

ಧ್‌ದ ಹಿಂದಿನ ಸ್‌ದ ಲೋಪಕ್ಕೆ ಪಾಠ ೭, ನಿಯಮ ಕ ನೋಡು.

अहरहः स्नात्वा संध्यामुपासीत ।

दशरथस्य भार्या कौसल्या चैत्रे नवम्यां तिथौ मध्याह्ने पुत्रं रामं प्रासूत ।

पारिक्षितस्य जनमेजयस्य सत्रं सारमेयोऽभ्यैत् ।

तत्र च जनमेजयस्यर्त्विजस्तमताडयन् ।

सोऽरोदीद्रुदंश्च मातरमयात् ।

माताप्रृच्छद्वत्स किं रोदिषि ।

सोऽब्रवीज्जनमेजयस्य सत्रमायं तत्र कोऽपि मां प्राहरन् ।

मातावदत्किं त्वमकरोः किं तानस्पृशः ।

सोऽभाषत नाहं मर्यादामत्यायम् ।

सरमा सत्रभूमिं गत्वोच्चैर्वाचाब्रूत ।

अयं मे पुत्रको न युष्मानस्पृशत्तत्किमेनमनपराधिनमताडयत ।

तां न कोऽपि प्रत्यभाषत । तेन क्रुद्धा सा देवशुनी सरमा जनमेजयं शप्त्वा गृहमयात् ।

द्रोणाच्छस्त्रविद्यामध्यैयत पाण्डवाः कुशलवौ वाल्मीकेरध्यैयाताम् कर्णश्च परशुरामादध्यैत ।

अभिवाद्य गुरुं ब्रूयादधीष्व[1] भगवन्निति ।

अनिषण्णे गुरौ नासीत ।

विदेहानुपयन्तो वयमेकरात्रं गङ्गायास्तीरेऽवसाम तत्र च पूर्वरात्रे नाना रम्याः कथाः कृत्वानंतरमस्वपिम ।

ब्रूयात्क्षमी गभीरोऽस्तीति बत युधिष्ठिरं प्रभुं को न ।

कथमहं बली स्यां कथं मयि प्रजा विश्वस्युः कथं च प्रकृतयो मामुपासीरन्नित्येवं चिन्तयतस्तस्य रात्रिरयात् ।

ततः प्रामुद्यतां वीरौ राघवावरुतां तथा ।
उष्णं च प्राणितां दीर्घमुच्चैर्व्याक्रोशतां तथा ॥
यथा काष्ठं च काष्ठं च समेयातां महोदधौ ।
समेत्य च व्यपेयातां तद्वद्भूतसमागमः ॥

---

[1] अधीष्व ಈ ಧಾತುವನ್ನು ಇಲ್ಲಿ "ಕಲಿಸು" ಎಂಬ ಅರ್ಥದಲ್ಲಿ ಪ್ರಯೋಗಿಸಿರುತ್ತದೆ.

ಧೃತರಾಷ್ಟ್ರನ ಮಕ್ಕಳು ಪಾಂಡುವಿನ ಮಕ್ಕಳೊಡನೆ ಜೂಜಾಡಿ ಅವರ ಆಸ್ತಿಯನ್ನೆಲ್ಲ ಕಸುಕೊಂಡರು. ತರುವಾಯ ಪಾಂಡವರು ಅರಣ್ಯಕ್ಕೆ ಹೋದರು (इ).

ಹಲವು ಬ್ರಾಹ್ಮಣರು ಅಲ್ಲಿಗೆ ಅವರನ್ನು ಹಿಂಬಾಲಿಸಿ ಹೋದರು (अनु+इ)

ಆಗ ಯುಧಿಷ್ಠಿರನು ಅವರಿಗಂದದ್ದೇನಂದರೆ (ब्रू)—"ನೀವು ನಮ್ಮ ಸಂಗಡ ಬರಬೇಡಿರಿ (अनु+इ), ಈಗ ನಾವು ದ್ರವ್ಯಹೀನರಾಗಿ ಇರುವೆವು (अस्), ನಿಮಗೆ ಅನ್ನ ಹಾಕಲಾರೆವು.

ಆಗ ಬ್ರಾಹ್ಮಣರು ಅಂದದ್ದು(ब्रू)—"ನಮ್ಮ ಆಹಾರವನ್ನು ನಾವೇ ಸಂಪಾದಿಸಿಕೊಳ್ಳಲಿಕ್ಕೆ ಸಮರ್ಥರಿದ್ದೇವೆ" (अस्).

ತರುವಾಯ ಯುಧಿಷ್ಠಿರನು ಅವರಿಗೆ ಬೇಡನ್ನಲಿಲ್ಲ (प्रति + आ + ख्या).

ಆದರೆ ಆ ಬ್ರಾಹ್ಮಣರು ತಮ್ಮ ಅಶನದ ಸಲುವಾಗಿ ತಾವೇ ದುಡಿಯಬೇಕೆಂಬದು ಯುಧಿಷ್ಠಿರನ ಇಚ್ಛೆ ಇದ್ದಿಲ್ಲ (न+इष्).

ಆಗಲವನು ತನ್ನ ಪುರೋಹಿತನಿಗೆ ಏನು ಮಾಡಬೇಕೆಂದು ಕೇಳಿದನು. ಅವನು ಸೂರ್ಯನನ್ನು ಪ್ರಾರ್ಥಿಸೆಂದು ಹೇಳಿದನು (स्तु).

ತರುವಾಯ ಯುಧಿಷ್ಠಿರನು ಸೂರ್ಯನನ್ನು ಪ್ರಾರ್ಥಿಸಿದನು (स्तु). ಸೂರ್ಯನು ಸಂತುಷ್ಟನಾಗಲು ಅವನಿಂದ ಯುಧಿಷ್ಠಿರನಿಗೆ ಒಂದು ಅನ್ನದ ಪಾತ್ರೆಯು ದೊರೆಯಿತು. ಅದರಿಂದ ಅವನಿಗೆ ಬೇಕಾದಷ್ಟು ಅನ್ನ ಸಿಕ್ಕಹತ್ತಿತು.

ಸಗರನ ಹೆಂಡರು ಬಹು ಜನ ಮಕ್ಕಳನ್ನು ಹಡೆದರು (सू).

ಕಳೆದ ರಾತ್ರಿಯಲ್ಲಿ ನಾನು ಮಲಗಲಿಲ್ಲ (स्वप्).

ಭಾಗೀರಥಿಯ ನೀರೊಳಗೆ ನೀನು ಎಂದು ಸ್ನಾನ ಮಾಡಿದಿ (स्ना)?

ಕೃಷ್ಣನು ಮಥುರೆಗೆ ಹೋಗುವಾಗ ವೃಜದ ಹೆಂಗಸರು ದೊಡ್ಡ ಧ್ವನಿಯಿಂದ ಅತ್ತರು (रुद्).

ನಾನು ಕಾಶಿಯಲ್ಲಿ ನ್ಯಾಯಶಾಸ್ತ್ರ ಕಲಿತೆನು (अधि +इ).

ನಾನು ಹಸ್ತಿನಾಪುರದಲ್ಲಿದ್ದರೆ (अस्), ಕಪಟದ್ಯೂತದಿಂದ ಪಾಂಡವರ ವಿತ್ತವನ್ನು ಹರಣ ಮಾಡುವದು ಸರಿಯಲ್ಲವೆಂದು ಧೃತರಾಷ್ಟ್ರನಿಗೆ ಹೇಳುತ್ತಿದ್ದೆನು (ब्रू).

ಕೀಳರ ಮಾತುಗಳನ್ನು ಯಾರೂ ನಂಬಬಾರದು (वि+श्वस्).

---

## ಕೋಶ ೮.

अनपराधिन् (ವಿ.) ತಪ್ಪಿಲ್ಲದವ, ತಪ್ಪುಮಾಡದವ.

अनिषण्ण (ವಿ.) ಕೂಡ್ರದಿದ್ದವ.

अहरहः (ಅ.) ದಿನಾಲು.

अव+आप् (೫ನೇ ಗ.) ಗಳಿಸು, ಪಡು.

वि+अप+इ ಬೇರೆಯಾಗು.

सम्+आ+इ ಕೂಡು, ಒಂದಾಗು.

उच्चैः (ಅ.) ದೊಡ್ಡ ಧ್ವನಿಯಿಂದ.

उष्णम् (ಅ.) ಬಿಸಿಯಾಗಿ.

एकरात्र (ನ.) ಒಂದು ರಾತ್ರಿ.

कर्ण (ಪು.) ಒಬ್ಬ ವೀರನ ಹೆಸರು; ಕಿವಿ.

क्षमिन् (ವಿ.) ತಾಳ್ಮೆಯುಳ್ಳ.

कुश }
लव } (ಪು.) ರಾಮನ ಮಕ್ಕಳು.

क्रुश् (वि+आ ಪೂರ್ವಕ) (೧ನೇ ಗ. ಪ.) ಹಲುಬು, ಮರುಗು.

गभीर (ವಿ.) ಆಳವಾದ ಘನವಾದ.

चैत्र (ಪು.) ಒಂದು ತಿಂಗಳ ಹೆಸರು.

जनमेजय (ಪು.) ಪರಿಕ್ಷಿತನ ಮಗ, ಅರ್ಜುನನ ಮರಿಮಗ.

तद्वत् (ಅ.) ಅದರ ಹಾಗೆ, ಅದೇ ಮೇರೆಗೆ.

तिथि (ಪು.) ಮಾಸಾವಯುವವಾದದ್ದೊಂದು ದಿವಸ.

दीर्घम् (ಅ.) ಬಹುಕಾಲ, ಬಹಳ ಹೊತ್ತು (ಎಳದು ಶ್ವಾಸ ಬಿಡೋಣ).

देवशुनी (ಸ್ತ್ರೀ.) ದೇವತೆಗಳ ನಾಯಿ.

द्रोण (ಪು.) ಒಬ್ಬ ಬ್ರಾಹ್ಮಣ ವೀರನ ಹೆಸರು.

नवमी (ಸ್ತ್ರೀ.) ಒಂಭತ್ತನೆಯ ತಿಥಿ.

नाना (ಅ.) ವಿಧವಿಧದ.

पारिक्षित (ಪು.) ಪರಿಕ್ಷಿತನ ಮಗ.

पूर्वरात्र (ಪು.) [पूर्व ಮೊದಲಿನ, रात्रि (ಸ್ತ್ರೀ.) ರಾತ್ರಿಯು] ರಾತ್ರಿಯ ಮೊದಲಿನ ಭಾಗ.

प्रकृति (ಸ್ತ್ರೀ.) ಜನರು, ಪ್ರಜೆ, ಮಂತ್ರಿ ಮಂಡಲ.

बत (ಅ.) ಆಶ್ಚರ್ಯ, ಖೇದದರ್ಶಕ ಅವ್ಯಯ. ಎಲ, ಎಲೇ, ಅಯ್ಯಯ್ಯೋ, ಅಯ್ಯೋ.

भाष् (प्रति ಪೂರ್ವಕ) (೧ನೇ ಗ. ಆ. ಪ.) ಉತ್ತರ ಕೊಡು, ತಿರಿಗಿ ಮಾತಾಡು.

भूतसमागम (ಪು.) ಪ್ರಾಣಿಗಳ ಕೂಡುವಿಕೆ.

मध्याह्न (ಪು.) [मध्य (ನ.) ನಡು, ಮತ್ತು अहन् (ನ.) ಹಗಲು] ನಡುಹಗಲು.

मर्यादा (ಸ್ತ್ರೀ.) ಮಟ್ಟು, ಮೇರೆ.

महोदधि (ಪು.) ದೊಡ್ಡ ಸಮುದ್ರ.

मुह् (प्र ಪೂರ್ವಕ) ಮೈಮರಿ, ಕವಳಿ ಹತ್ತು.

वाल्मीकि (ಪು.) ಒಬ್ಬ ಋಷಿಯ ಹೆಸರು.

विदेह (ಪು. ನಿತ್ಯ ಬಹುವ.) ಒಂದು ದೇಶದ ಹೆಸರು.

शप् (೧ನೇ ಗ. ಆ. ಪ.) ಅನಿಷ್ಟ ನುಡಿ, ಆಣೀ ಮಾಡು, ಶಪಿಸು.

शप्त्वा (ಅ.) ಬೈದು, ಶಾಪ ಕೊಟ್ಟು.

शस्त्रविद्या (ಸ್ತ್ರೀ.) ಯುದ್ಧಶಾಸ್ತ್ರದ ಜ್ಞಾನ.

सत्र (ನ.) ಒಂದು ಪ್ರಕಾರದ ಯಜ್ಞ.

सत्रभूमि (ಸ್ತ್ರೀ.) ಸತ್ರದ ಸ್ಥಳ.

सरमा (ಸ್ತ್ರೀ.) ದೇವತೆಗಳ ಹೆಣ್ಣುನಾಯಿಯ ಹೆಸರು.

संध्या (ಸ್ತ್ರೀ.) ಸಂಧಿಕಾಲ.

सारमेय (ಪು.) सरमा ಎಂಬ ನಾಯಿಯ ಕುನ್ನಿ.

---

ಗಟ್ಟಿಯಾಗಿ, ದೊಡ್ಡ ಧ್ವನಿಯಿಂದ उच्चैः.

ಅನ್ನದ ಪಾತ್ರೆ स्थाली (ಸ್ತ್ರೀ.).

ಕಸುಕೊಳ್ಳು हृ (೧ನೇ ಗ. अप ಪೂರ್ವಕ).

ಕಳ್ಳಬುದ್ಧಿಯುಳ್ಳ, ಅಪ್ರಮಾಣಿಕವಾದ कपट (ವಿ.).

ಜೂಜು द्यूत (ನ.).

ಗಳಿಸು, ಸಂಪಾದಿಸಿಕೊಳ್ಳು अर्ज् (೧ನೇ ಗ. ಪ.).

ಆಹಾರ अन्न (ನ.).

ಜೂಜಾಡು दिव् (೪ನೇ ಗ. ಪ.) दीव्यति ವರ್ತಮಾನಕಾಲದ ಪ್ರ. ಪು. ಏಕವಚನ.

ಕಳದ ರಾತ್ರಿ गता रात्रि (ಸ್ತ್ರೀ.).

ಮಥುರೆ मथुरा (ಸ್ತ್ರೀ.).

ತಕ್ಕ, ಸರಿ युक्त, उचित (ವಿ.).

ಸಗರ, (ಅರಸು) सगर (ಪು.).

ಪುರೋಹಿತ उपाध्याय (ಪು.).

ಇಚ್ಛೆಸಿದಷ್ಟು, ಬೇಕಾದಷ್ಟು अपेक्षित (ವಿ.).
ಕೀಳ, ದುರುಳ शठ (ಪು.), खल (ಪು.), दुरात्मन् (ಪು.).
ಧನಹೀನ धनहीन (ವಿ.).
ಹೆಂಗಸು अङ्गना (ಸ್ತ್ರೀ.).
ದುಡಿ परिश्रमं कृ (೮ನೇ ಗ. ಪ. ಉ.).

## ೯ನೇ ಪಾಠ.

### ೨ನೇ ಗಣ (ಮುಂದೆ ಸಾಗಿದ್ದು).

೭ನೇ ೮ನೇ ಪಾಠಗಳಲ್ಲಿ ಹೇಳಿದ ಧಾತುಗಳ ಹೊರ್ತಾಗಿ ಉಳಿದ ಎರಡನೇ ಗಣದ ಧಾತುಗಳಿಗೆ ಆಗುವ ಸಂಧಿಕಾರ್ಯಗಳನ್ನು ಇನ್ನು ವಿವರಿಸುತ್ತೇವೆ.

(ಗ) ಧಾತ್ವಂತ हಕಾರಕ್ಕೆ ಅನುನಾಸಿಕ ಅರ್ಧಸ್ವರಗಳ ಹೊರ್ತು ಬೇರೆ ವ್ಯಂಜನಗಳು ಪರವಾದಲ್ಲಿಯೂ, ಯಾವ ಅಕ್ಷರವೂ ಪರವಾಗದೆ ಇದ್ದಲ್ಲಿಯೂ[1] ढಕಾರಾದೇಶವಾಗುವದು. लिह् ಧಾತುವಿನ ವರ್ತಮಾನಕಾಲ ಪ್ರ. ಪು. ಏಕವಚನದ ರೂಪವನ್ನು ಸಿದ್ಧ ಮಾಡುವಾ: लिह् + ति = लेह् + ति (ಪುಟ ೧೩, ನಿಯಮ ೬ ನೋಡು) = लेढ् (ಮೇಲಿನ ನಿಯಮದಿಂದ). ಇನ್ನು

(ಘ) हಕಾರಕ್ಕೂ ವರ್ಗಚತುರ್ಥಾಕ್ಷರಕ್ಕೂ ಪರವಾದ ಪ್ರತ್ಯಯಾದಿಯ त्, थ् ಗಳಿಗೆ ध् ಆದೇಶವಾಗುತ್ತದೆ. ಈ ನಿಯಮದಿಂದ लेढ् + ति = लेढ् + धि ಆಗುವದು. ೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೨೪, ಟಿಪ್ಪಣಿ ೧, ಇದರ ಉತ್ತರ ಭಾಗದಲ್ಲಿ ಹೇಳಿದ ನಿಯಮದಿಂದ लेढ् + धिಯು लेढ् + ढि ಆಗುವದು.

(ಙ) ढಕಾರಕ್ಕೆ ढಕಾರ ಪರವಾದರೆ, ಮೊದಲಿನ ढಕಾರಕ್ಕೆ ಲೋಪ ಬರುತ್ತದೆ; ಮತ್ತು ಅದರ ಹಿಂದಿನ अ, इ, उ ಗಳು ದೀರ್ಘವಾಗುತ್ತವೆ.

ಈ ನಿಯಮದಿಂದ लेढ् + ढि = ले + ढि = लेढि ಆಗುವದು. ಇದೇ लिह् ಧಾತುವಿನ ವರ್ತಮಾನಕಾಲ ಪ್ರಥಮಪುರುಷೈಕವಚನದ ರೂಪವು.

ಇದೇ ಮೇರೆಗೆ ಪ್ರಥಮಪುರುಷದ ದ್ವಿವಚನದ ರೂಪವನ್ನು ಮಾಡುವಾ: लिह् + तस् = लिढ्[2] + तस् (ನಿಯಮ ಗ) = लिढ् + धस् (ನಿಯಮ ಘ) = लिढ् + ढस् (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೨೪, ಟಿಪ್ಪಣಿ ೧, ಉತ್ತರ ಭಾಗ ಮತ್ತು ನಿಯಮ ಙ) = लीढः ಇದು ದ್ವಿವಚನದ ರೂಪವು. लिहन्ति ಪ್ರ. ಪು. ಬಹುವಚನವು अन्ति ಪ್ರತ್ಯಯವು ಸ್ವರಾದಿಯಾ

---

[1] ಅಂದರೆ ह्ಕಾರವು ವಾಕ್ಯದ ಕೊನೆಯಲ್ಲಿ ಇದ್ದರೆ ಮಾತ್ರ ಈ ವಿಕಾರವಾಗುತ್ತದೆಂಬದಲ್ಲ, ಪದಾಂತ್ಯವಾಗಿದ್ದರೆ ಸಾಕು, ढ्ಕಾರಾದೇಶವಾಗುತ್ತದೆ.

[2] तस् ಪ್ರತ್ಯಯವು ದುರ್ಬಲವಾದದರಿಂದ ಉಪಾಂತ್ಯ इಕಾರಕ್ಕೆ ಗುಣ ಬರಲಿಲ್ಲ. (ಪುಟ ೧೩, ನಿಯಮ ೪ ನೋಡು.)

ದದ್ದು ದುರ್ಬಲವೂ ಆದದರಿಂದ ಯಾವ ಸಂಧಿಕಾರ್ಯವೂ ಆಗಲಿಲ್ಲ. ಮಧ್ಯಮಪುರುಷೈಕವಚನದ ರೂಪವು–लिह्+सि=लेढ्+सि (ನಿಯಮ ೫). ಇನ್ನು सिಗೆ (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೨೪, ಟಿಪ್ಪಣಿ ೧, ಉತ್ತರ ಭಾಗದಂತೆ) षि ಆದೇಶವಾಗುವ ಪೂರ್ವದಲ್ಲಿ ಮುಂದಿನ (ಚ) ನಿಯಮದಿಂದ ढಕಾರಕ್ಕೆ क्ಕಾರಾದೇಶವಾಗುವದು; ಆ ನಿಯಮವು ಹ್ಯಾಗಂದರೆ:

(ಚ) ढ्, ष्ಗಳಿಗೆ सಕಾರ ಪರವಾದಲ್ಲಿ कಕಾರಾದೇಶವಾಗುತ್ತದೆ. ಇದರಿಂದ लेढ्+सि=लेक्+सि=लेक्+षि (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣಿ ೨)=लेक्षि ಆಗುತ್ತದೆ.

लिह् ಧಾತುವಿನ ವರ್ತಮಾನಕಾಲದ ರೂಪಗಳು ಹ್ಯಾಗಂದರೆ:—

ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | लेढि | लीढः | लिहन्ति |
| ಮ. ಪು. | लेक्षि | लीढः | लीढ |
| ಉ. ಪು. | लेह्मि | लिह्वः | लिह्मः |

ಮಧ್ಯಮಪುರುಷ ದ್ವಿಬಹುವಚನಗಳಲ್ಲಿ ಪ್ರಥಮಪುರುಷ ದ್ವಿವಚನದಂತೆ ಸಂಧಿಕಾರ್ಯಗಳಾಗುತ್ತವೆ. मि, मः ಎಂಬ ಅನುನಾಸಿಕಾದಿ ಪ್ರತ್ಯಯಗಳೂ वः ಎಂಬ ಅರ್ಧಸ್ವರಾದಿ ಪ್ರತ್ಯಯವೂ ಪರವಾಗಲು ಸಂಧಿಕಾರ್ಯಗಳೇನೂ ಆಗುವದಿಲ್ಲ.

ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | लीढे | लिहाते | लिहते |
| ಮ. ಪು. | लिक्षे | लिहाथे | लीढ्वे |
| ಉ. ಪು. | लिहे | लिह्वहे | लिह्महे |

೧. ಅನುನಾಸಿಕಾರ್ಧಸ್ವರಗಳ ಹೊರ್ತು ಬೇರೆ ವ್ಯಂಜನಾಂತ ಅಂಗಗಳ ಮುಂದಿನ हि ಎಂಬ ಆಜ್ಞಾರ್ಥದ ಮಧ್ಯಮಪುರುಷೈಕವಚನದ ಪ್ರತ್ಯಯಕ್ಕೆ धि ಆದೇಶವಾಗುತ್ತದೆ.

ಪರಸ್ಮೈಪದ.

ಆಜ್ಞಾರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | लेढु | लीढाम् | लिहन्तु |
| ಮ. ಪು. | लीढि | लीढम् | लीढ |
| ಉ. ಪು. | लेहानि | लेहाव | लेहाम |

## ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | लीढाम् | लिहाताम् | लिहताम् |
| ಮ. ಪು. | लिक्ष्व | लिहाथाम् | लीढ्वम् |
| ಉ. ಪು. | लेहै | लेहावहै | लेहामहै |

ಪರಸ್ಮೈಪದದಲ್ಲಿ ಉತ್ತಮಪುರುಷಪ್ರತ್ಯಯಗಳೂ ಪ್ರಥಮಪುರುಷೈಕವಚನದ ಪ್ರತ್ಯಯವೂ ಸಬಲ. ಆತ್ಮನೇಪದದಲ್ಲಿ ಉತ್ತಮಪುರುಷಪ್ರತ್ಯಯಗಳಷ್ಟೇ ಸಬಲ.

(ಛ) दಕಾರಾದಿ हಕಾರಾಂತ ಧಾತುಗಳ ಮುಂದೆ ಅನುನಾಸಿಕಾರ್ಧಸ್ವರಗಳ ಹೊರ್ತು ಬೇರೆ ವ್ಯಂಜನಗಳು ಪರವಾದಲ್ಲಿಯೂ ಯಾವ ಅಕ್ಷರವೂ ಪರವಾಗದಿದ್ದಲ್ಲಿಯೂ ह ಕ್ಕೆ घಕಾರಾದೇಶವಾಗುವದು. ಇದರಿಂದ दुह् ಧಾತುವಿನ ವರ್ತಮಾನಕಾಲ ಪ್ರ. ಪು. ಏಕವಚನದ ರೂಪವು दोग्धि ಆಗುವದು; ಹ್ಯಾಗಂದರೆ दुह् + ति = दोह् + ति = दोघ् + धि (ನಿಯಮ ಘ). ಇನ್ನು

(ಜ) ಒಂದು ಶಬ್ದದೊಳಗೆ ಅಥವಾ ಪದದೊಳಗೆ ಇರುವ ಅನುನಾಸಿಕದ ಹೊರ್ತು ಬೇರೆ ವರ್ಗಾಕ್ಷರದ ಮುಂದೆ ಯಾವದೊಂದು ವರ್ಗದಲ್ಲಿ ೩ನೇ ಅಥವಾ ೪ನೇ ವ್ಯಂಜನ ಬಂದರೆ, ಮೊದಲಿನ ವರ್ಗಾಕ್ಷರಕ್ಕೆ ಆ ವರ್ಗದ ೩ನೇ ಅಕ್ಷರವು ಆದೇಶವಾಗುತ್ತದೆ. ಇಂಥ ಪ್ರಸಂಗದಲ್ಲಿ षಕಾರಕ್ಕೆ डಕಾರಾದೇಶವಾಗುವದು.[1]

ಇದರಿಂದ दोघ् + धि = दोग् + धि = दोग्धि ಆಗುವದು; दुग्धः ಎಂಬ ರೂಪವಾದರೂ ಹೀಗೇ ಸಿದ್ಧವಾಗುತ್ತದೆ. ಬಹುವಚನದ दुहन्ति ಇದರಲ್ಲಿ ಸಂಧಿಕಾರ್ಯಗಳೇನೂ ಆಗುವದಿಲ್ಲ.

ಮಧ್ಯಮಪುರುಷ ಏಕವಚನದ ರೂಪವನ್ನು ಸಿದ್ಧಮಾಡುವ ಕ್ರಮವು ಹ್ಯಾಗಂದರೆ: दुह् + सि = दोघ् + सि (ನಿಯಮ ಛ); ಇಲ್ಲಿ ೧ನೇ ಪುಸ್ತಕ, ಪುಟ ೫, ಟಿಪ್ಪಣೆ ೨ರಲ್ಲಿ ಹೇಳಿದ ಕಾರ್ಯವು (घ್ಕ್ಕೆ कಕಾರವು) ಆಗುವದಕ್ಕೂ ಮೊದಲು ಮುಂದಿನ (ಝ) ನಿಯಮದಿಂದ दोಕ್ಕೆ धो ಆಗುವದು. ಈ ನಿಯಮವು ಹ್ಯಾಗಂದರೆ:—

(ಝ) ब, ग, दಕಾರಗಳುಳ್ಳ ಧಾತುಗಳ ಕಡೆಯಲ್ಲಿ ವರ್ಗಚತುರ್ಥಾಕ್ಷರ ಇದ್ದು ಮುಂದೆ स, ध्वಗಳು ಬರಲಾಗಿ, ಅಥವಾ ಏನೂ ಬಾರದಿದ್ದರೆ, बಕಾರಕ್ಕೆ भಕಾರ, गಕಾರಕ್ಕೆ घಕಾರ, दಕಾರಕ್ಕೆ धಕಾರಾದೇಶಗಳಾಗುವವು.

ಇದರಿಂದ दोघ् + सि = धोघ् + सि = धोक् + सि (೧ನೇ ಪುಸ್ತ., ೫ನೇ ಆವೃತ್ತಿ, ಪುಟ ೫, ಟಿಪ್ಪಣೆ ೨ ನೋಡು), धोक् + षि (೧ನೇ ಪು., ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣೆ ೨ ನೋಡು) = धोक्षि ಇಚ್ಛಿತ ರೂಪವು.

---

[1] ಶಬ್ದಮಧ್ಯದಲ್ಲಿಯೂ ಶಬ್ದಾಂತದಲ್ಲಿಯೂ श् ष् स्ಗಳು ಇದ್ದು ಅವುಗಳ ಮುಂದೆ ವರ್ಗೀಯ ವ್ಯಂಜನಗಳಲ್ಲಿ ೩ನೇ ಅಥವಾ ೪ನೇ ವ್ಯಂಜನ ಬಂದರೆ, ಅಥವಾ ಯಾವ ವರ್ಣವೂ ಬಾರದಿದ್ದರೆ, ಅವುಗಳಿಗೆ ಕ್ರಮವಾಗಿ ज्, ड् द् ಆದೇಶಗಳಾಗುತ್ತವೆ; ಅಂದರೆ शಕಾರಕ್ಕೆ जಕಾರ, षಕಾರಕ್ಕೆ डಕಾರ, सಕಾರಕ್ಕೆ दಕಾರ ಆದೇಶಗಳಾಗುತ್ತವೆ.

### दुह् ಧಾತುವಿನ ರೂಪಗಳು.

#### ಪರಸ್ಮೈಪದ.

##### ವರ್ತಮಾನಕಾಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | दोग्धि | दुग्धः | दुहन्ति |
| ಮ. ಪು. | धोक्षि | दुग्धः | दुग्ध |
| ಉ. ಪು. | दोह्मि | दुह्वः | दुह्मः |

##### ಆಜ್ಞಾರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | दोग्धु | दुग्धाम् | दुहन्तु |
| ಮ. ಪು. | दुग्धि | दुग्धम् | दुग्ध |
| ಉ. ಪು. | दोहानि | दोहाव | दोहाम |

#### ಆತ್ಮನೇಪದ.

##### ವರ್ತಮಾನಕಾಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | दुग्धे | दुहाते | दुहते |
| ಮ. ಪು. | धुक्षे | दुहाथे | धुग्ध्वे |
| ಉ. ಪು. | दुहे | दुह्वहे | दुह्महे |

##### ಆಜ್ಞಾರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | दुग्धाम् | दुहाताम् | दुहताम् |
| ಮ. ಪು. | धुक्ष्व | दुहाथाम् | धुग्ध्वम् |
| ಉ. ಪು. | दोहै | दोहावहै | दोहामहै |

೨. (ಅ) हन् ಧಾತುವಿನ ಮುಂದೆ ಅನುನಾಸಿಕಾರ್ಧಸ್ವರಗಳ ಹೊರ್ತು ಬೇರೆ ವ್ಯಂಜನಗಳು ಆದಿಯಲ್ಲಿರುವಂಥ ದುರ್ಬಲಪ್ರತ್ಯಯಗಳು ಬರಲಾಗಿ नಕಾರಕ್ಕೆ ಲೋಪ ಬರುವದು. ಸ್ವರಾದಿ ದುರ್ಬಲಪ್ರತ್ಯಯಗಳು ಬರಲಾಗಿ ಉಪಾಂತ್ಯ अಕಾರಕ್ಕೆ ಲೋಪ ಬರುವದು. ಉದಾ: हतः; घ्नन्ति ಇತ್ಯಾದಿ.

(ಆ) ಈ ಧಾತುವಿನ ಆಜ್ಞಾರ್ಥದ ಮಧ್ಯಮಪುರುಷೈಕವಚನದ ರೂಪವು जहि.

(ಇ) ಈ ಧಾತುವಿನ हದ ಮುಂದೆ नಕಾರ ಬಂದರೆ, हಕಾರಕ್ಕೆ घಕಾರಾದೇಶವಾಗುತ್ತದೆ.

(ಈ) ಒಂದು ಶಬ್ದದೊಳಗೆ ಅಥವಾ ಪದದೊಳಗೆ न, मಕಾರಗಳಿದ್ದು ಅವುಗಳ ಮುಂದೆ ಅನುನಾಸಿಕಗಳ ಹೊರ್ತು ಬೇರೆ ವರ್ಗೀಯ ವ್ಯಂಜನಗಳು ಬಂದರೆ, न्, म्ಗಳಿಗೆ ಮುಂದೆ ಬಂದಿರುವ ವ್ಯಂಜನದ ವರ್ಗದ ಅನುನಾಸಿಕಗಳು ಆದೇಶವಾಗುವವು; श्, ष्, स्, ह्ಗಳು ಬಂದರೆ, ಅನುಸ್ವಾರಾದೇಶವಾಗುವದು.

हन् ಧಾತುವಿನ ವರ್ತಮಾನಕಾಲದ ರೂಪಗಳು.

| | ಪರಸ್ಮೈಪದ.[1] | | | ಆತ್ಮನೇಪದ. | | |
|---|---|---|---|---|---|---|
| | ಏ. | ದ್ವಿ. | ಬಹು. | ಏ. | ದ್ವಿ. | ಬಹು. |
| ಪ್ರ. ಪು. | हन्ति | हतः | घ्नन्ति | हते | घ्नाते | घ्नते |
| ಮ. ಪು. | हंसि | हथः | हथ | हसे | घ्नाथे | हध्वे |
| ಉ. ಪು. | हन्मि | हन्वः | हन्मः | घ्ने | हन्वहे | हन्महे |

हन् + तः = ह + तः (ನಿಯಮ ೧, ಅ) = हतः; ಇದರಂತೆ हन् + थः = हथः; ಮತ್ತು हन् + थ = हथ ಆಗುತ್ತವೆ.

हन् + सि = हं + सि (ನಿಯಮ ಈ) = हंसि.

हन् + अन्ति = ह्न् + अन्ति (ನಿಯಮ ೧ ಅ) = घ्न् + अन्ति (ನಿಯಮ ೧ ಇ) = घ्न् + अन्ति = घ्नन्ति.

ಇದೇ ಪ್ರಕಾರವಾಗಿ ಆತ್ಮನೇಪದದ ರೂಪಗಳು ಸಿದ್ಧವಾಗಿರುತ್ತವೆ.

ಆಜ್ಞಾರ್ಥ.

| | ಪರಸ್ಮೈಪದ. | | | ಆತ್ಮನೇಪದ. | | |
|---|---|---|---|---|---|---|
| | ಏ. | ದ್ವಿ. | ಬಹು. | ಏ. | ದ್ವಿ. | ಬಹು. |
| ಪ್ರ. ಪು. | हन्तु | हताम् | घ्नन्तु | हताम् | घ्नाताम् | घ्नताम् |
| ಮ. ಪು. | जहि | हतम् | हत | हस्व | घ्नाथाम् | हध्वम् |
| ಉ. ಪು. | हनानि | हनाव | हनाम | हनै | हनावहै | हनामहै |

೨. ईश्, ईड् ಈ ಎರಡು ಧಾತುಗಳ ಮುಂದೆ स, ध्व ಆದಿಯಲ್ಲುಳ್ಳ ಪ್ರತ್ಯಯಗಳು ಬರಲಾಗಿ ಆ ಪ್ರತ್ಯಯಗಳ ಪೂರ್ವದಲ್ಲಿ इ ಆಗಮ ಬರುವದು. ಅನದ್ಯತನಭೂತಕಾಲದ ಮಧ್ಯಮಪುರುಷ ಬಹುವಚನದಲ್ಲಿ ಮಾತ್ರ इ ಆಗಮ ಬರುವದಿಲ್ಲ.

---

[1] हन् ಧಾತುವಿನ ಪೂರ್ವದಲ್ಲಿ आ ಉಪಸರ್ಗವು ಬಂದರೆ, ಅದು ಆತ್ಮನೇಪದಪ್ರತ್ಯಯಗಳನ್ನು ಧರಿಸುತ್ತದೆ.

(ಟ) ಶ, ಛಕಾರಾಂತ ಧಾತುಗಳಿಗೂ व्रश्च्, भ्रस्ज्, सृज्, मृज्, यज्, राज् भ्राज् ಧಾತುಗಳಿಗೂ ಅನುನಾಸಿಕ ಅರ್ಧಸ್ವರಗಳ ಹೊರ್ತು ಉಳಿದ ವ್ಯಂಜನಗಳು ಪರವಾದರೆ, ಅಥವಾ ಏನೂ ಪರವಾಗದಿದ್ದರೆ, ಅವುಗಳ ಕಡೆಯ ವ್ಯಂಜನಕ್ಕೆ ಷಕಾರಾದೇಶವಾಗುತ್ತದೆ.

ईश् (ಆ.) ಆಳು.

ವರ್ತಮಾನಕಾಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | ईष्टे | ईशाते | ईशते |
| ಮ. ಪು. | ईशिषे | ईशाथे | ईशिध्वे |
| ಉ. ಪು. | ईशे | ईश्वहे | ईश्महे |

ईश् + ते = ईष् + ते (ಟ ನಿಯಮದಂತೆ) = ईष् + टे (೧ನೇ ಪು., ೫ನೇ ಆವೃತ್ತಿ, ೨೪ನೇ ಪುಟ, ಟಿಪ್ಪಣಿ ೧, ಉತ್ತರ ಭಾಗ) = ईष्टे.

ईश् + से = ईश् + इ + से (ನಿಯಮ ೩) = ईश् + इ + षे (೧ನೇ ಪು., ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣಿ ೨) = ईशिषे.

ईश् + ध्वे = ईश् + इ + ध्वे (ನಿಯಮ ೩) = ईशिध्वे.

ಆಜ್ಞಾರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | ईष्टाम् | ईशाताम् | ईशताम् |
| ಮ. ಪು. | ईशिष्व | ईशाथाम् | ईशिध्वम् |
| ಉ. ಪು. | ईशै | ईशावहै | ईशामहै |

೪. मृज् ಧಾತುವಿಗೆ ಸಬಲಪ್ರತ್ಯಯಗಳು ಪರವಾದರೆ, ಅದರ ಉಪಾಂತ್ಯ ಋಕಾರಕ್ಕೆ ವೃದ್ಧಿ ಆಗುವದು; ಸ್ವರಾದಿ ದುರ್ಬಲಪ್ರತ್ಯಯಗಳು ಪರವಾದರೆ, ವೃದ್ಧಿಯು ವಿಕಲ್ಪವಾಗಿ ಆಗುವದು.

मृज् (ಪ.) ಹಸನ ಮಾಡು, ಸ್ವಚ್ಛ ಮಾಡು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | मार्ष्टि | मृष्टः | मृजन्ति ಅಥವಾ मार्जन्ति |
| ಮ. ಪು. | मार्क्षि | मृष्ठः | मृष्ठ |
| ಉ. ಪು. | मार्ज्मि | मृज्वः | मृज्मः |

ಹ್ಯಾಗಂದರೆ: मृज् + ति = मृष् + ति (ನಿಯಮ ಟ) = मार्ष् + ति (ನಿಯಮ ೪) = मार्ष् + टि = मार्ष्टि ಇದರಂತೆ मृष्टः, मृष्ठः, मृष्ठ ರೂಪಗಳಾಗುತ್ತವೆ.

मृज् + सि = मृष् + सि (ನಿಯಮ ಟ) = मार्ष् + सि (ನಿಯಮ ೪) मार्क् + सि (ಪುಟ ೫೮, ನಿಯಮ ಚ) = मार्क् + षि (೧ನೇ ಪು., ಪುಟ ೧೧೦, ಟಿಪ್ಪಣಿ ೨) = मार्क्षि.

मृज् + अन्ति, ಅಥವಾ मार्ज् + अन्ति (ನಿಯಮ ೪) मृजन्ति ಅಥವಾ मार्जन्ति.

ಆಜ್ಞಾರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | मार्ष्टु | मृष्टाम् | मृजन्तु ಅಥವಾ मार्जन्तु |
| ಮ. ಪು. | मृड्ढि | मृष्टम् | मृष्ट |
| ಉ. ಪು. | मार्जानि | मार्जाव | मार्जाम |

मृज् + हि = मृज् + धि (ಪುಟ ೫೮, ನಿ. ೧) = मृष् + धि (ಪುಟ ೫೪, ನಿ. ೯) = मृष् + ढि (೧ನೇ ಪು., ಪು. ೨೪, ಟಿಪ್ಪಣಿ ೧, ಉತ್ತರ ಭಾಗ) = मृड् + ढि (ಪುಟ ೫೪, ನಿ. ೯) = मृड्ढि.

೫. वश् ಧಾತುವಿನ ಮುಂದೆ ದುರ್ಬಲಪ್ರತ್ಯಯಗಳು ಬರಲಾಗಿ ಅದರ वಕ್ಕೆ उ ಆದೇಶವಾಗುವದು.

वश् (ಪ.) ಇಚ್ಛಿಸು, ಹೊಳೆಯು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | वष्टि | उष्टः | उशन्ति |
| ಮ. ಪು. | वक्षि | उष्टः | उष्ठ |
| ಉ. ಪು. | वश्मि | उश्वः | उश्मः |

ಆಜ್ಞಾರ್ಥ ಮಧ್ಯಮಪುರುಷೈಕವಚನದ ರೂಪವು उड्ढि.

वश् + ति = वष् + ति (ಪುಟ ೬೨, ನಿಯಮ ೮) = वष् + टि (೧ನೇ ಪುಸ್ತಕ, ಪುಟ ೨೪, ಟಿಪ್ಪಣಿ ೧, ಉತ್ತರ ಭಾಗ) = वष्टि.

वश् + सि = वष् + सि (ಪುಟ ೬೨, ನಿಯಮ ೮) = वक् + सि (ಪುಟ ೫೮, ನಿಯಮ ೮) = वक् + षि (೧ನೇ ಪುಸ್ತಕದ ಪುಟ ೧೧೦, ಟಿಪ್ಪಣಿ ೨) = वक्षि ಇತ್ಯಾದಿ.

वश् + हि = वष् + धि (ಪುಟ ೬೨, ನಿ. ೮, ಮತ್ತು ಪುಟ ೫೮, ನಿ. ೧) = उष् + धि (ನಿ. ೫) = उष् + ढि (೧ನೇ ಪು., ಪು. ೨೪, ಟಿಪ್ಪ. ೧, ಉತ್ತರ ಭಾಗ) = उड् + ढि (ಪುಟ ೫೪, ನಿ. ೯) = उड्ढि.

೬. शास् ಧಾತುವಿನ ಮುಂದೆ ವ್ಯಂಜನಾದಿ ದುರ್ಬಲಪರಸ್ಮೈಪದ ಪ್ರತ್ಯಯಗಳು ಪರವಾಗಲು ಈ ಧಾತುವಿನ आಕಾರಕ್ಕೆ इ ಆದೇಶವಾಗುವದು.

೭. शास्, जक्ष्, चकास्, दरिद्रा, जागृ ಧಾತುಗಳ ಪ್ರಥಮಪುರುಷ ಬಹುವಚನದ ಪ್ರತ್ಯಯದೊಳಗಿನ नಕಾರಕ್ಕೆ ಲೋಪ ಬರುತ್ತದೆ.

शास् ಧಾತುವಿನ ಆಜ್ಞಾರ್ಥ ಮಧ್ಯಮ ಪುರುಷೈಕವಚನದ ರೂಪವು शाधि ಆಗುವದು. चकास् ಧಾತುವಿನ ಆಜ್ಞಾರ್ಥ ಮಧ್ಯಮಪುರುಷೈಕವಚನದ ರೂಪಗಳು ವಿಕಲ್ಪದಿಂದ चकाद्धि, चकाधि ಆಗುವವು.

शास् (ಪ.) ಆಳು.

ವರ್ತಮಾನಕಾಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | शास्ति | शिष्टः | शासति |
| ಮ. ಪು. | शास्सि | शिष्ठः | शिष्ठ |
| ಉ. ಪು. | शास्मि | शिष्वः | शिष्मः |

शास्+ तस् = शिस् + तस् (ನಿಯಮ ೬) = शिष्[1] + तस् = शिष् + टस् = शिष्टः;
शास्+ अन्ति = शास् + अति (ನಿಯಮ ೭) = शासति.

जागृ (ಪ.) ಮಲಗದೆ ಇರು, ಎಚ್ಚತ್ತಿರು.

| | | ಏ. | ದ್ವಿ. | ಬಹು. |
|---|---|---|---|---|
| ವರ್ತಮಾನ. | ಪ್ರ. ಪು. | जागर्ति | जागृतः | जाग्रति |
| ಆಜ್ಞಾರ್ಥ. | ಪ್ರ. ಪು. | जागर्तु | जागृताम् | जाग्रतु |
| | ಮ. ಪು. | जागृहि | जागृतम् | जागृत |
| | ಉ. ಪು. | जागराणि | जागराव | जागराम |

೮. दरिद्रा ಧಾತುವಿನ ಮುಂದೆ ಸ್ವರಾದಿ ದುರ್ಬಲಪ್ರತ್ಯಯಗಳು ಬರಲು ಅಂತ್ಯ ಆಕಾರಕ್ಕೆ ಲೋಪ ಬರುವದು; ವ್ಯಂಜನಾದಿ ದುರ್ಬಲಪ್ರತ್ಯಯಗಳು ಪರವಾದರೆ, ಆಕಾರಕ್ಕೆ ಇಕಾರಾದೇಶವಾಗುವದು.

दरिद्रा (ಪ.) ಬಡವಾಗು.

| | | ಏ. | ದ್ವಿ. | ಬಹು. |
|---|---|---|---|---|
| ವರ್ತಮಾನ. | ಪ್ರ. ಪು. | दरिद्राति | दरिद्रितः | दरिद्रति |

೯. विद् ಧಾತುವಿನ ಆಜ್ಞಾರ್ಥದ ರೂಪಗಳಿಗೆ ವಿಕಲ್ಪವಾಗಿ विदाम् + कृ ಧಾತುವಿನ ಆಜ್ಞಾರ್ಥದ ರೂಪಗಳು ವ್ಯವಹರಿಸುವವು.

विद् (ಪ.) ಅರಿ, ತಿಳಿ.

| | ವರ್ತಮಾನಕಾಲ. | ಆಜ್ಞಾರ್ಥ. | | |
|---|---|---|---|---|
| ಪ್ರ. ಪು. | वेत्ति, वित्तः, विदन्ति. | वेत्तु, ಅಥವಾ विदांकरोतु | वित्ताम्, ಅಥವಾ विदांकुरुताम् | विदन्तु ಅಥವಾ विदांकुर्वन्तु |

(೧೦) स, क ಕಾರಗಳು ಆರಂಭದಲ್ಲಿ ಇರುವ ಸಂಯುಕ್ತಾಕ್ಷರಗಳು ಪದಾಂತದಲ್ಲಿದ್ದರೆ, ಅಥವಾ ಆ ಸಂಯೋಗದ ಮುಂದೆ ವರ್ಗದ ಮೊದಲಿನ ನಾಲ್ಕು ಅಕ್ಷರಗಳು, ಅಥವಾ श, ष, स, ह ಗಳು ಬಂದರೆ, ಆ स, क ಕಾರಗಳಿಗೆ ಲೋಪ ಬರುವದು.

ಅದರಿಂದ चक्ष् + ते = चक्ष् + ते = चष् + ते (ನಿಯಮ ೧೦) = चष् + टे (೧ನೇ ಪು., ಪು. ೨೪, ನಿ. ೧) = चष्टे. ಈ ಮೇರೆಗೆ चक्ष् ಧಾತುವಿನ ಪ್ರ. ಪುರುಷೈಕವಚನದ ರೂಪವು ಸಿದ್ಧವಾಗುತ್ತದೆ. चक्ष् + से = चक् + ष् + से = चष् + से (ನಿಯಮ ೧೦) = चक् + से (ಪುಟ ೫೮, ನಿ. ೬) = चक् + षे (೧ನೇ ಪು., ಪು. ೧೧೦, ಟಿ. ೨) = चक्षे; ಇದು चक्ष् ಧಾತುವಿನ ಮಧ್ಯಮ ಪುರುಷೈಕವಚನದ ರೂಪವು. चक्ष् ಧಾತುವಿನ ವರ್ತಮಾನಕಾಲದ ರೂಪಗಳು ಹ್ಯಾಗಂದರೆ —

[1] शास्, वस्, घस् ಧಾತುಗಳ ಉಪಾಂತ್ಯಸ್ವರಕ್ಕೆ ವಿಕಾರವಾದ ಕೂಡಲೆ ಅಂತ್ಯ सಕಾರಕ್ಕೆ षಕಾರ ಆದೇಶವಾಗುವದು.

ಚಕ್ಷ್ (ಆ.) ಮಾತಾಡು, ಸ್ಪಷ್ಟವಾಗಿ ಮಾತಾಡು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | चष्टे | चक्षाते | चक्षते |
| ಮ. ಪು. | चक्षे | चक्षाथे | चड्ढ्वे |
| ಉ. ಪು. | चक्षे | चक्ष्वहे | चक्ष्महे |

ಇದರಲ್ಲಿ ಮಧ್ಯಮಪುರುಷ ಬಹುವಚನದ ರೂಪವು चड्ढ्वे ಆಗುವದು, ಹ್ಯಾಗಂದರೆ: चक्ष्+ध्वे=चक्ष्+ध्वे=चष्+ध्वे (ನಿಯಮ ಠ)=चष्+ढ्वे (೧ನೇ ಪುಸ್ತಕ, ಪುಟ ೨೪, ಟಿಪ್ಪಣಿ ೨, ಉತ್ತರ ಭಾಗ)=चड्+ढ्वे (ಪುಟ ೫೯, ನಿಯಮ ಜ)=चड्ढ्वे.

ಆಜ್ಞಾರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | चष्टाम् | चक्षाताम् | चक्षताम् |

द्विष् (ಪ. ಆ.) ತಿರಸ್ಕರಿಸು.

| | ಏ. | ದ್ವಿ. | ಬಹು. |
|---|---|---|---|
| ವರ್ತಮಾನಕಾಲ ಪ್ರ. ಪು. | द्वेष्टि | द्विष्टः | द्विषन्ति |

दिह् (ಪ.) ಲೇಪ ಮಾಡು

| | ಏ. | ದ್ವಿ. | ಬಹು. |
|---|---|---|---|
| ವರ್ತಮಾನಕಾಲ ಪ್ರ. ಪು. | देग्धि | दिग्धः | दिहन्ति |

सविता वै प्रसवानामीष्टे [1) ।

गोपः सायं धेनूर्दोग्धि [2) पयः ।

अधुनाखिलं भरतवर्षं महाप्रतापा आङ्ग्लभौमाः प्रशासति ।

तस्मिन्पुष्पे भ्रमरौ मधु लीढः ।

अग्निमीडे पुरोहितं यज्ञस्य देवमृत्विजम् ।

योऽस्मान्द्वेष्टि यं च वयं द्विष्मस्तं घ्नन्त्विमान्यस्माभिः पठ्यमानानि मन्त्राक्षराणि ।

हे जगन्नाथाखिलस्यैतस्य वस्तुजातस्य त्वमीशिषे ।

हे दीनबन्धो यद्यन्मे नम्रस्य पापं भवेत्तत्तत्प्रतिजहि ।

शत्रुं हन्तुं शरान्विषेण देग्धि ।

आचक्ष्व क्व मामेकाकिनीमत्र विहायाकरुण यासि ।

---

1) ಈಶ್ ಧಾತುವಿನ ಕರ್ಮಕ್ಕೆ ಷಷ್ಠೀವಿಭಕ್ತಿ ಬರುತ್ತದೆ.

2) ಪುಟ ೪, ಟಿಪ್ಪಣಿ ೨ ನೋಡು.

यं मां धर्ममाचष्टे[1] तमेव प्रत्यहमाचरामि ।

वत्से न युक्तं ते मङ्गलकाले रोदितुं प्रमृड्ढ्यश्रूणि । अथवा सख्यौ प्रमृष्टाम् ।

भाष्यकृत्पतञ्जलिः कात्यायनस्य वचनानि विस्तरतो व्याचष्टे ।

शिष्यस्तेऽहं शाधि मां त्वां प्रपन्नम् ।

शास्त्यरीन् धर्ममाशास्ते कीर्तिमाशंसते पराम् ।
स शंसति सतां वृत्तं विशसत्युत्पथास्थितान् ॥

ईट्टे त्रिविष्टपास्थाने तत्कीर्तिं वासवः स्वयम् ।
ईडयन्ति नरेन्द्राश्च भूमावुद्भूतविस्मयाः ॥

या निशा सर्वभूतानां तस्यां जागर्ति संयमी ।
यस्यां जाग्रति भूतानि सा निशा पश्यतो मुनेः ॥

य एनं[2] वेत्ति हन्तारं यश्चैनं मन्यते हतम् ।
उभौ तौ न विजानीतो नायं हन्ति न हन्यते ॥

करोति पापं योऽज्ञानान्नात्मनो वेत्ति च क्षयम् ।
प्रद्वेष्टि साधुवृत्तांश्च स लोकस्यैति वाच्यताम् ॥

प्राप्य चाप्युत्तमं जन्म लब्ध्वा चेन्द्रियसौष्ठवम् ।
न वेत्त्यात्महितं यस्तु स भवेदात्मघातकः ॥

ಒಂದು ದಿವಸದಲ್ಲಿ ಆಕಳುಗಳನ್ನು ನೀನು ಎಷ್ಟು ಸಾರಿ ಕರೆಸುತ್ತಿ (दुह्)?

ಗುಂಗೀಹುಳವನ್ನು ಹೂವಿನಿಂದ ಓಡಿಸಬೇಡ; ರಸವನ್ನು ನೆಕ್ಕಲಿ (लिह्).

ಅವಿಚಾರದಿಂದ ಪಶುಗಳನ್ನು ಯಾರು ಕೊಲ್ಲುವರೋ (हन्) ಅವರು ಎಂದೂ ಸುಖವನ್ನು ಹೊಂದುವದಿಲ್ಲ.

ಅರಸರು ಪಟ್ಟಣಗಳಿಗೆ ಬಂದಬಂದಾಗ್ಗೆ ಅಲ್ಲಿಯ ಜನರು ಬೀದಿಗಳನ್ನು ಸ್ವಚ್ಛವಾಗಿ ಉಡುಗುತ್ತಾರೆ (सम् + मृज्).

ರಾತ್ರಿಯ ಕಡೆಯ ಜಾವದಲ್ಲಿ ಋಷಿಯ ಶಿಷ್ಯರು ಎದ್ದು (जागृ) ವೇದಗಳನ್ನು ಕಲಿಯುತ್ತಾರೆ (अधि + इ).

ಮಗಧದೇಶದ ರಾಜಧಾನಿಯು ರಾಜಗೃಹವಾಗಿತ್ತೋ ಪಾಟಲಿಪುತ್ರವಾಗಿತ್ತೋ ಎಂಬುದು ನಮಗೆ ಗೊತ್ತಿಲ್ಲ (विद्).

---

1) ಪುಟ ೪, ಟಿಪ್ಪಣಿ ೨ ನೋಡು.

2) एनं ಶಬ್ದದಿಂದ ಆತ್ಮವೆಂದು ತಿಳಿಯತಕ್ಕದ್ದು.

ಸಾಧುಜನರನ್ನು ತಿರಸ್ಕರಿಸಬೇಡ (द्विष्).
ರಾಣಿಯೂ ಆಕೆಯ ವಂಶಜರೂ ನಮ್ಮನ್ನು ಬಹಳ ದಿವಸ ಆಳಲಿ (शास्)
ಗುರುಗಳು ತಾವೇ ಈ ಸೂತ್ರವನ್ನು ವಿವರಿಸಬೇಕು (वि + आ + चक्ष्).

---

## ಕೋಶ F.

### ೨ನೇ ಗಣದ ಧಾತುಗಳು.

ईड् (ಆ.) ಹೊಗಳು.
ईश् (ಆ.) ಆಳು, ಒಡೆಯನಾಗಿರು.
चकास् (ಪ.) ಹೊಳೆಯು.
चक्ष्[1] (ಆ.) ಮಾತಾಡು; आचक्ष् (ಆ.) ಹೇಳು.
व्या + चक्ष् (ಆ.) ವಿವರಿಸು.
जागृ (ಪ.) ಮಲಗದೆ ಇರು, ಎಚ್ಚರು.
दरिद्रा (ಪ.) ಬಡವನಾಗು.
दिह् (ಪ. ಆ.) ಲೇಪ ಮಾಡು, ಪೂಸು, ಸಾರಿಸು.
दुह् (ಪ. ಆ.) ಹಿಂಡು, ಕರೆಯು.
द्विष् (ಪ. ಆ.) ತಿರಸ್ಕರಿಸು, ದ್ವೇಷ ಮಾಡು.
मृज् (ಪ.) ಶುದ್ಧ ಮಾಡು; प्र + मृज् ಒರಸು.
सम् + मृज् ಗುಡಿಸು, ಉಡುಗು.
लिह् (ಪ. ಆ.) ನೆಕ್ಕು.
वश् (ಪ.) ಇಚ್ಛಿಸು, ಹೊಳೆ.
विद्[2] (ಪ.) ಅರಿ, ತಿಳಿ.
शास् (ಪ.) ಆಳು, ನೇಮಿಸು, ಶಿಕ್ಷಿಸು.
आ + शास् (ಆ.) ಇಚ್ಛಿಸು, ಅಪೇಕ್ಷಿಸು. ಕೋರು
हन् (ಪ.) ಕೊಲ್ಲು.

---

अकरुण (ವಿ.) [अ ಇಲ್ಲ, ಮತ್ತು करुणा (ಸ್ತ್ರೀ.)] ನಿರ್ದಯ, ಕ್ರೂರ.
आत्मघातक (ಪು. ನ.) [आत्मन् ತನ್ನ, घातक] ತನ್ನ ನಾಶವನ್ನು ತಾನೇ ಮಾಡಿಕೊಳ್ಳುವವ.
आत्महित (ನ.) ತನ್ನ ಹಿತ, ತನ್ನ ಕಲ್ಯಾಣ.
इन्द्रियसौष्ठव (ನ.) [इन्द्रिय (ನ.) ಅವಯವ, सौष्ठव (ನ.) ಸೌಂದರ್ಯ] ಚಲುವಿಕೆ, ಅವಯವಸೌಂದರ್ಯ, ಶರೀರಲಾವಣ್ಯ.

---

[1] ಆರ್ಧಧಾತುಕ ಪ್ರತ್ಯಯಗಳು ಪರವಾಗಲು चक्ष् ಧಾತುವಿಗೆ ख्या (ಪ. ಆ.) ಆದೇಶವಾಗುತ್ತದೆ. ಪೂರ್ಣ ಭೂತಕಾಲದಲ್ಲಿ ಈ ಆದೇಶವು ವಿಕಲ್ಪವಾಗಿ ಬರುತ್ತದೆ.

[2] ಈ ಧಾತುವಿನ ವರ್ತಮಾನಕಾಲದಲ್ಲಿ ೧೩ನೇ ಪಾಠದಲ್ಲಿ ಹೇಳಿದ ಪೂರ್ಣಭೂತದ ಪ್ರತ್ಯಯಗಳು ವಿಕಲ್ಪದಿಂದ ಹತ್ತಿ ಕೆಲವು ವಿಕೃತ ರೂಪಗಳು ವ್ಯವಹರಿಸುವವು ಹ್ಯಾಗಂದರೆ—

| | | | |
|---|---|---|---|
| ಪ್ರ. ಪು. | वेत्ति ಅಥವಾ वेद | वित्तः ಅಥವಾ विदतुः | विदन्ति ಅಥವಾ विदुः |
| ಮ. ಪು. | वेत्सि ಅಥವಾ वेत्थ | वित्थः ಅಥವಾ विदथुः | वित्थ ಅಥವಾ विद |
| ಉ. ಪು. | वेद्मि ಅಥವಾ वेद | विद्वः ಅಥವಾ विद्व | विद्मः ಅಥವಾ विद्म |

उत्पथास्थित (ವಿ.) [उत्पथ (ಪು.) ಕೆಟ್ಟಹಾದಿ, ಮತ್ತು आ+स्था ಅಂದರೆ ಹಿಡಿಯು, ಇದರ ಭೂ. ಕೃ.] ಕೆಟ್ಟ ಹಾದಿಯನ್ನು ಹಿಡಿದವ.

उद्भूतविस्मय (ವಿ.)(उद्+भू ಅಂದರೆ ಹುಟ್ಟು, ಇದರ ಭೂ. ಕೃ. उद्भूत) ಆಶ್ಚರ್ಯಗೊಂಡ, ಚಕಿತವಾದ.

उभ (ಸ. ನಿತ್ಯದ್ವಿವಚನ) ಇಬ್ಬರು.

कात्यायन (ಪು.) ಒಬ್ಬ ವ್ಯಾಕರಣಕಾರನ ಹೆಸರು.

क्षय (ಪು.) ನಾಶನ.

जगन्नाथ (ಪು.) [जगत् (ನ.) ಲೋಕ ಮತ್ತು नाथ (ಪು.) ಒಡೆಯ] ಲೋಕದ ಒಡೆಯ.

तत्कीर्ति (ಸ್ತ್ರೀ.) ಅವನ ಯಶಸ್ಸು.

त्रिविष्टपास्थान (ನ.) [त्रिविष्टप (ನ.) ಸ್ವರ್ಗ, आस्थान (ನ.) ಸಭೆ] ದೇವತೆಗಳ ಸಭೆ.

दीनबन्धु (ಪು.) [दीन (ವಿ.) ದಿಕ್ಕಿಲ್ಲದವ, ಬಡವ; बन्धु ಅಣ್ಣ ಅಥವಾ ತಮ್ಮ] ಬಡವರ ಹಿತ ಮಾಡುವವ.

देव (ವಿ.) ಹೊಳೆಯುವವ.

नम्र (ವಿ.) ವಿನಯವುಳ್ಳ.

नरेन्द्र (ಪು.) ಅರಸು.

पठ्यमान [पठ् (೧ನೇ ಗ.) ಕರ್ಮಾರ್ಥಕ ವರ್ತಮಾನ ಕೃ.] ಓದಲ್ಪಡುವ, ಅನ್ನಲ್ಪಡುವ.

पतञ्जलि (ಪು.) ಮಹಾಭಾಷ್ಯವೆಂಬ ದೊಡ್ಡ ವ್ಯಾಕರಣದ ಕರ್ತನು.

पुरोहित (ಪು.) ಉಪಾಧ್ಯಾಯ.

प्रपन्न (ವಿ.) ಮರೆಹೊಕ್ಕವ, ಶರಣಾಗತನಾದ.

प्रसव (ಪು.) ಉತ್ಪತ್ತಿ, ಫಲ, ಹುಟ್ಟಿದ್ದು.

भाष्यकृत् (ಪು.) ಭಾಷ್ಯವನ್ನು ಬರೆದವ, ಟೀಕಾಕಾರ.

मङ्गलकाल (ಪು.) [मङ्गल (ನ.) ಮತ್ತು काल] ಶುಭಮುಹೂರ್ತ.

मन्त्राक्षर (ನ.) ವೇದದೊಳಗಿನ ಋಚೆಯ ಅಕ್ಷರ.

वस्तुजात (ನ.) [वस्तु (ನ.) ಮತ್ತು जात (ನ.) ಸಮೂಹ] ಒಡವೆಗಳ ಸಮೂಹ, ಸಂಗ್ರಹ.

वाच्यता (ಸ್ತ್ರೀ.) ಆಕ್ಷೇಪಣಕ್ಕೆ ಯೋಗ್ಯವಾದ ಸ್ಥಿತಿಯು, ವಾಗ್ದಂಡನೆಗೆ ತಕ್ಕಂಥ ಸ್ಥಿತಿಯು.

वासव (ಪು.) ಇಂದ್ರನು.

विस्तरतः (ಅ.) ವಿಸ್ತಾರವಾಗಿ.

विहाय [हा (ಬಿಡು) ಧಾತುವಿನ ಭೂ. ನ್ಯೂ.] ಬಿಟ್ಟು.

शंस् (आ ಪೂರ್ವಕ) (೧ನೇ ಗ. ಆ.) ಕೋರು, ಇಚ್ಛಿಸು.

शस् (೬ನೇ ಗ. ಪ.) (वि ಪೂರ್ವಕ) ಕೊಲ್ಲು, ನಾಶ ಮಾಡು.

संयमिन् (ಪು.) ಇಂದ್ರಿಯಗಳನ್ನು ನಿಗ್ರಹಿಸಿದಂಥ ಪ್ರಾಣಿ, ಸನ್ಯಾಸಿ.

सर्वभूतानि (ಪ್ರಥಮಾ ದ್ವಿತೀಯೆಗಳ ಬಹುವಚನ) ಯಾವತ್ತು ಪದಾರ್ಥಗಳು.

सवितृ (ಪು.) ಸೂರ್ಯ, ನೇಸರು.

साधुवृत्त (ವಿ.) [साधु (ವಿ.) वृत्त (ನ.) ನಡತೆ] ಒಳ್ಳೇ ನಡತೆಯವನು, ಸುಶೀಲನು.

सायम् (ಅ.) ಸಂಜೆ, ಸಂಧ್ಯಾಕಾಲದಲ್ಲಿ.

हन्तृ (ವಿ.) ಕೊಲ್ಲುವವ.

---

ನಿಯಮ (ವ್ಯಾಕರಣದ) सूत्र (ನ.).

ಗುಂಗೀಹುಳ भ्रमर (ಪು.).

ಮುಖ್ಯಪಟ್ಟಣ राजधानी (ಸ್ತ್ರೀ.).

ವಂಶಜ वंश्य (ವಿ.), कुलज (ವಿ.).

ಓಡಿಸು प्र+चुद् (೧೦ನೇ ಗ. ಪ.).

ಎಷ್ಟು ಸಾರಿ कतिकृत्वः (ಅ.).

ಕಡೆಯ चरम (ವಿ.).

ಮಗಧ ದೇಶ, ಮಗಧದ ಜನರು } मगधाः (ನಿತ್ಯ ಬಹುವಚನ.)

ಎಂದಿಗೂ ಇಲ್ಲ न कदा (ಅ.).

ಪಾಟಲಿಪುತ್ರ (ಮಗಧ ದೇಶದೊಳಗಿನ ಒಂದು ಪಟ್ಟಣ) पाटलिपुत्र (ನ.).
ಪ್ರಹರ याम (ಪು.), (तुरीयो भागः).
ರಾಜಗೃಹ (ಮಗಧ ದೇಶದೊಳಗಿನ ಒಂದು ಪಟ್ಟಣ) राजगृह (ನ.).
ಓದು, ಅನ್ನು पठ् (೧ನೇ ಗ. ಪ.).
ಬೀದಿ रथ्या (ಸ್ತ್ರೀ.).
ಅವಿಚಾರದಿಂದ रभसात्, मोहात्.
ಯಾವಾಗ, ಆಗ यदा यदा-तदा तदा.
ತಾವು भगवान्, भवान् (ಪ್ರಥಮೈಕವಚನದ ರೂಪಗಳು).

# ೧೦ನೇ ಪಾಠ.

## ೨ನೇ ಗಣ.

### ಅನದ್ಯತನಭೂತಕಾಲ.

೧. ಮಧ್ಯಮ ಪ್ರಥಮ ಪುರುಷೈಕವಚನಗಳ ಪ್ರತ್ಯಯಗಳಾದ स्, त्‌ಗಳ ಹಿಂದಿನ ಅಂಗವು ವ್ಯಂಜನಾಂತವಾಗಿದ್ದರೆ स्, त्‌ಗಳಿಗೆ ಲೋಪ ಬರುತ್ತದೆ.

೨. ಅನುನಾಸಿಕದ ಹೊರ್ತು ಉಳಿದ ಯಾವದೊಂದು ವರ್ಗೀಯ ವ್ಯಂಜನವು ಪದಾಂತದಲ್ಲಿ ಅಥವಾ ಶಬ್ದಾಂತದಲ್ಲಿದ್ದರೆ, ಅದಕ್ಕೆ ಆ ವರ್ಗದ ಮೊದಲನೇ[1] ವರ್ಣವಾಗಲಿ ಮೂರನೇ[1] ವರ್ಣವಾಗಲಿ ಆದೇಶವಾಗುತ್ತದೆ; ಢ ಇದ್ದರೆ ड ಅಥವಾ ट ಆದೇಶವಾಗುತ್ತದೆ.

(ಅ) लिह् ಧಾತುವಿನ ಅನದ್ಯತನಭೂತಕಾಲದ ಪ್ರ. ಪುರುಷೈಕವಚನದ ರೂಪವನ್ನು ಸಿದ್ಧ ಮಾಡುವ. अलिह् + त् = अलेह् + त् (ಪುಟ ೧೩, ನಿಯಮ ೬) = अलेह् (ಪುಟ ೭೯, ನಿಯಮ ೧) = अलेढ् (ಪುಟ ೫೭, ನಿಯಮ ೪) = अलेड् ಅಥವಾ अलेट् (ಪುಟ ೭೯, ನಿಯಮ ೨). ಮಧ್ಯಮಪುರುಷೈಕವಚನದ ರೂಪವು ಇದೇ ಪ್ರಕಾರವಾಗುತ್ತದೆ. ಹ್ಯಾಗಂದರೆ— अलिह् + स् = अलेह् + स् = अलेढ् = अलेट्-ड्.

ಈ ಧಾತುವಿನ ಅನದ್ಯತನಭೂತಕಾಲದ ರೂಪಗಳು ಹ್ಯಾಗಂದರೆ:—

ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अलेट्-ड् | अलीढाम् | अलिहन् |
| ಮ. ಪು. | अलेट्-ड् | अलीढम् | अलीढ |
| ಉ. ಪು. | अलेहम् | अलिह्व | अलिह्म |

[1] ಈ ಪದದ ಮುಂದೆ ಮೃದುವರ್ಣವು ಅಥವಾ ಸ್ವರವರ್ಣವು ಇದ್ದರೆ ಮೂರನೇ ವರ್ಣವೂ, ಕರ್ಕಶವರ್ಣವಿದ್ದರೆ ಮೊದಲನೇ ವರ್ಣವೂ ಆದೇಶವಾಗುತ್ತವೆ.

अलीढाम् ರೂಪವು लीढः ರೂಪದಂತೆ ಆಗುವದು.

ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अलीढ | अलिक्षाताम् | अलिक्षत |
| ಮ. ಪು. | अलीढाः | अलिक्षाथाम् | अलीढ्वम् |
| ಉ. ಪು. | अलिक्षि | अलिक्षावहि | अलिक्षामहि |

(ಬ) अदुह् + त् = अदोह् + त् = अदोह् = अदोघ् (ಪುಟ ೫೮, ನಿಯಮ ೯) = अधोघ् (ಪುಟ ೫೮, ನಿಯಮ ೩) = अधोक्-ग् (ಪುಟ ೬೮, ನಿಯಮ ೨) ಆಗುತ್ತದೆ. ಇದೇ ಪ್ರಕಾರ अदुह् + स् = अधोक्-ग् ಆಗುತ್ತದೆ.

ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अधोक्-ग् | अदुग्धाम् | अदुहन् |
| ಮ. ಪು. | अधोक्-ग् | अदुग्धम् | अदुग्ध |
| ಉ. ಪು. | अदोहम् | अदुह्व | अदुह्म |

अदुह् + थाः = अदुह् + धाः (ಪುಟ ೫೭, ನಿಯಮ ೪) = अदुघ् + धाः (ಪುಟ ೫೮, ನಿಯಮ ೯) = अदुग् + धाः (ಪುಟ ೬೮, ನಿಯಮ ೨) = अदुग्धाः; अधुग्ध्वम् ರೂಪವು धुग्ध्वे ರೂಪದಂತೆ.

ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अदुग्ध | अदुहाताम् | अदुहत |
| ಮ. ಪು. | अदुग्धाः | अदुहाथाम् | अधुग्ध्वम् |
| ಉ. ಪು. | अदुहि | अदुह्वहि | अदुह्महि |

(ಇ) हन् (ಪ.) ಕೊಲ್ಲು. ಅನದ್ಯತನಭೂತ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अहन् | अहताम् | अघ्नन् |
| ಮ. ಪು. | अहन् | अहतम् | अहत |
| ಉ. ಪು. | अहनम् | अहन्व | अहन्म |

ಇದರಲ್ಲಿ अहन् + त् = अहन् (ಪುಟ ೬೮, ನಿಯಮ ೧), अहन् + ताम् (ಮ. ಪು. ದ್ವಿವಚನ) = अह + ताम् (ಪುಟ ೬೦, ನಿಯಮ ೨ ಅ) = अहताम्. अहन् + अन् (ಪ್ರ. ಪು. ಬಹುವಚನ) = अह्न् + अन् (ಪುಟ ೬೦, ನಿಯಮ ೨ ಅ, ಉತ್ತರ ಭಾಗ) = अघ्न् + अन् (ಪುಟ ೬೧, ನಿಯಮ ೨ ಇ) = अघ्नन्.

ಆತ್ಮನೇಪದದ ರೂಪಗಳು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अहत | अघ्नाताम् | अघ्नत |

(ಉ) मृज् (ಪ.) ಸ್ವಚ್ಛ ಮಾಡು. ಅನದ್ಯತನಭೂತ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अमार्ट्-ड् | अमृष्टाम् | अमृजन् - अमार्जन् |
| ಮ. ಪು. | अमार्ट्-ड् | अमृष्टम् | अमृष्ट |
| ಉ. ಪು. | अमार्जम् | अमृज्व | अमृज्म |

ಪ್ರಥಮಪುರುಷೈಕವಚನದ ರೂಪಸಿದ್ಧಿ ಹ್ಯಾಗಂದರೆ: —

अमृज् + त् = अमार्ज् + त् (ಪುಟ ೬೨, ನಿಯಮ ೪) = अमार्ज् (ಪುಟ ೬೮, ನಿಯಮ ೧) = अमार्ष् (ಪುಟ ೬೨, ನಿಯಮ ೮) = अमार्ट्[1] - ड् (ಪುಟ ೬೮, ನಿಯಮ ೨); ಮಧ್ಯಮ ಪುರುಷೈಕವಚನದ ರೂಪವು ಹೀಗೆ ಆಗುವದು.

(ಕ) विद्, जागृ, शास्, जक्ष्, चकास्, दरिद्रा ಈ ಧಾತುಗಳ ಅನದ್ಯತನಭೂತಕಾಲದ ಪ್ರ. ಪು. ಬಹುವಚನದಲ್ಲಿ अन् ಪ್ರತ್ಯಯಕ್ಕೆ ಬದಲಾಗಿ उस् ಪ್ರತ್ಯಯ ಬರುವದು.

द्विष् ಧಾತುವಿನ अन् ಪ್ರತ್ಯಯಕ್ಕೆ उस् ಪ್ರತ್ಯಯವು ವಿಕಲ್ಪವಾಗಿ ಬರುವದು.

೩. ಅನದ್ಯತನಭೂತಕಾಲದ ಮಧ್ಯಮಪುರುಷೈಕವಚನದಲ್ಲಿ ಧಾತುಗಳ ಅಂತ್ಯ दಕಾರಕ್ಕೆ ವಿಕಲ್ಪದಿಂದ रಕಾರ ಅಥವಾ ವಿಸರ್ಗವು ಆದೇಶವಾಗುವದು. ಉದಾ: अवेद् + स् = अवेत्-द् ಅಥವಾ अवेः

विद् (ಪ.) ಅರಿ, ತಿಳಿ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अवेत् - द् | अवित्ताम् | अविदुः |
| ಮ. ಪು. | अवेत् - द्, अवेः | अवित्तम् | अवित्त |
| ಉ. ಪು. | अवेदम् | अविद्व | अविद्म |

(ಖ) उस् ಪ್ರತ್ಯಯದ ಹಿಂದಿನ ಸ್ವರಕ್ಕೆ ಗುಣವಾಗುತ್ತದೆ. ಉದಾ: अजागृ + उस् = अजागर् + उस् = अजागरुः.

---

[1] ಶಬ್ದಾಂತದಲ್ಲಿರುವ ಸಂಯುಕ್ತವ್ಯಂಜನಗಳ ಮೊದಲನೇ ವರ್ಣವು रಕಾರವಿದ್ದರೆ, ಅದರ ಮುಂದಿನ ಸ್ವದ ಹೊರ್ತು ಉಳಿದ ಯಾವದೊಂದು ವ್ಯಂಜನಕ್ಕೆ ಲೋಪ ಬರುವದಿಲ್ಲ. ಇದು ೧ನೇ ಪುಸ್ತಕದ ಪುಟ ೧೦೯, ಟಿಪ್ಪಣಿ ೧ರಲ್ಲಿ ಹೇಳಿದ ನಿಯಮಕ್ಕೆ ಅಪವಾದವು.

जागृ (ಪ.) ಅನದ್ಯತನಭೂತಕಾಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अजागः | अजागृताम् | अजागरुः |

ಇದರಲ್ಲಿ ಏಕವಚನ ರೂಪಸಿದ್ಧಿಯು ಹ್ಯಾಗಂದರೆ:— अजागृ+त् = अजागर्+त् = अजागर् (ಪುಟ ೬೯, ನಿಯಮ ೧) = अजागः.

೪. ಧಾತ್ವಂತ ಸಕಾರಕ್ಕೆ स् ಪ್ರತ್ಯಯ ಪರವಾಗಲು ವಿಕಲ್ಪದಿಂದ, त् ಪ್ರತ್ಯಯ ಪರವಾಗಲು ನಿತ್ಯವಾಗಿ, तಕಾರ ಆದೇಶವಾಗುತ್ತದೆ. ಈ तಕಾರವು ೨ನೇ ನಿಯಮದಂತೆ त् ಅಥವಾ द् ಆಗುವದು.

शास् (ಪ.) ಆಳು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अशात्-द् | अशिष्टाम् | अशासुः |
| ಮ. ಪು. | अशात्-द्, अशाः | अशिष्टम् | अशिष्ट |
| ಉ. ಪು. | अशासम् | अशिष्व | अशिष्म |

ಪ್ರ. ಪುರುಷೈಕವಚನದ ರೂಪಸಿದ್ಧಿ ಹ್ಯಾಗಂದರೆ:—
अशास्+त् = अशास् (ಪುಟ ೬೯, ನಿಯಮ ೧) = अशात्-द् (ನಿಯಮ ೨).

ईश् (ಆ.) ಆಳು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | ऐष्ट | ऐशाताम् | ऐशत |
| ಮ. ಪು. | ऐष्ठाः | ऐशाथाम् | ऐड्ढ्वम् |
| ಉ. ಪು. | ऐशि | ऐश्वहि | ऐश्महि |

ಮಧ್ಯಮಪುರುಷ ಬಹುವಚನದ ರೂಪಸಿದ್ಧಿ ಹ್ಯಾಗಂದರೆ:—
आ+ईश्+ध्वम् = ऐश्+ध्वम् (ಪುಟ ೬೨, ನಿಯಮ ಟ) = ऐड्+ध्वम् (ಪುಟ ೫೯, ನಿಯಮ ಜ) = ऐड्+ढ्वम् (೧ನೇ ಪುಸ್ತಕ, ಪುಟ ೨೪, ಟಿಪ್ಪಣಿ ೧, ಉತ್ತರ ಭಾಗ) = ऐड्ढ्वम्.

वश् (ಪ.) ಹೊಳೆಯು, ಇಚ್ಛಿಸು.

ಅನದ್ಯತನಭೂತಕಾಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अवट्-ड् | औष्टाम् | औशन् |
| ಮ. ಪು. | अवट्-ड् | औष्टम् | औष्ट |
| ಉ. ಪು. | अवशम् | औश्व | औश्म |

आ+वश्+ताम् (ಪ್ರ. ಪು. ದ್ವಿವಚನ) = आ+उश्+ताम् (ಪುಟ ೬೩, ನಿಯಮ ೫) = औश्+ताम् = औष्+ताम् (ಪುಟ ೬೨, ನಿಯಮ ೬) = औष्+टाम् = औष्टाम्.

ವಿಧ್ಯರ್ಥ.

दुह् (ಪ.).

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | दुह्यात् | दुह्यताम् | दुह्युः |

ಆತ್ಮನೇಪದ.

| | | | |
|---|---|---|---|
| ಪ್ರ. ಪು. | दुहीत | दुहीयाताम् | दुहीरन् |

हन् (ಪ.).

| | | | |
|---|---|---|---|
| ಪ್ರ. ಪು. | हन्यात् | हन्याताम् | हन्युः |

ಆತ್ಮನೇಪದ.

| | | | |
|---|---|---|---|
| ಪ್ರ. ಪು. | घ्नीत | घ्नीयाताम् | घ्नीरन् |

शास् (ಪ.).

| | | | |
|---|---|---|---|
| ಪ್ರ. ಪು. | शिष्यात् | शिष्याताम् | शिष्युः |

सायं प्रातर्धेनुमग्निहोत्रायाधोगृषिः ।

दण्डकायां वसन्तौ रामलक्ष्मणौ रक्षसां सहस्राण्यहताम् ।

चाणक्योऽकिंचनो ब्राह्मणो नन्दानद्वेड्बुद्धिप्रभावाच्च तानहन् । तेषां च राज्यं चन्द्रगुप्तो नाम नृपतिश्चाणक्यस्य शिष्योऽशात् ।

देवानां संदेशं हरन्नलो दमयन्त्या अन्तःपुरं प्राविशत् । प्रविशन्तं च तं देवानां वराद्रक्षितारो नाविदुः ।

केचिद्बटवस्तडागस्य तटमुपगता लोष्टैर्भेकानभ्यघ्नन् ।

स राजा दिग्विजयादारभ्यात्मनः सर्वं वृत्तान्तं गन्धर्वकन्याया आचष्ट ।

यथा पाण्डवा रणे नास्मान्हन्युस्तथा क्रियताम् ।

कश्चित्कुक्कुरो यज्ञमण्डपं गतो हवींष्यवालेट् । तत्रर्त्विजस्तमाघ्नन्सर्वं च समुपाहृतं यज्ञियं द्रव्यं त्यक्त्वा मण्डपं सममार्जन् ।

राजानो धर्मेण वसुधां शिष्युः ।

ನಂದರ ತರುವಾಯ ಮೌರ್ಯರು ಪೃಥ್ವಿಯನ್ನಾಳಿದರು (शास्).

ಕಲಿಂಗರ ಬಂಟರು ನಮಗೆ ಈ ಪ್ರಕಾರವಾಗಿ ಹೇಳಿದರು.

ನಮ್ಮ ಕೂಡ ಬಹು ದಿವಸ ಹಗೆತನ ಮಾಡಿದ (द्विष्) ಅಂಗರು ನಮ್ಮ ರಾಜ್ಯದ ಮೇಲೆ ದಂಡೆತ್ತಿ ಬಂದರು. ಅವರ ಕೂಡ ಕಾಳಗವಾಡಿ ಅವರ ಸೇನಾಪತಿಗಳನ್ನು ನಾವು ಕೊಂದೆವು (हन्). ಅವರ ಅರಸಿಗೆ ಇದು ತಿಳಿಯಲಿಲ್ಲ (विद्). ಅದರಿಂದ ಅವನು ತಾನೇ ಸಮರಾಂಗಣಕ್ಕೆ ಬಂದನು. ಆದರೆ ತನ್ನ ಜನರು ಸತ್ತದ್ದನ್ನು ನೋಡಿ ತನ್ನ ರಾಜ್ಯಕ್ಕೆ ಮರಳಿ ಹೋದನು.

ನಿನ್ನೆ ನೀನು ಆಕಳುಗಳನ್ನು ಹಿಂಡಿಕೊಂಡಿಯೋ (दुह्)?

ಹರಿಯು ವೇದಗಳನ್ನು ಅನ್ನುತ್ತಾ ಇಡಿ ರಾತ್ರಿ ಎಚ್ಚರಿದ್ದನು (जागृ).

ಮನುಷ್ಯನು ದಿನಾಲು ಬೆಳಿಗ್ಗೆ ತನ್ನ ಮೋರೆಯನ್ನು ತೊಳಕೊಳ್ಳಬೇಕು (प्र+मृज्).

---

## ಕೋಶ ೧೦.

अग्निहोत्र (ನ.) ಅಗ್ನಿಗೆ ಕೊಟ್ಟ ಆಹುತಿಯು.
कुक्कुर (ಪು.) ನಾಯಿ.
गन्धर्वकन्या (ಸ್ತ್ರೀ.) ಗಂಧರ್ವನ ಮಗಳು.
चन्द्रगुप्त (ಪು.) ಒಬ್ಬ ಅರಸನ ಹೆಸರು.
चाणक्य (ಪು.) ಒಬ್ಬ ಮನುಷ್ಯನ ಹೆಸರು.
तट (ಪು. ನ.) ದಂಡೆ, ದಡ.
दिग्विजय (ಪು.) [दिश् (ಸ್ತ್ರೀ.) ದಿಕ್ಕು, विजय (ಪು.) ಗೆಲ್ಲುವಿಕೆ] ದಿಕ್ಕುಗಳನ್ನು ಜಯಿಸುವದು, ಯಾವತ್ತು ಪ್ರದೇಶಗಳನ್ನು ಗೆಲ್ಲುವದು.
द्रव्य (ನ.) ಪದಾರ್ಥ, ಒಡವೆ.
नन्द (ಪು.) ಒಂದು ರಾಜವಂಶದ ಹೆಸರು, ಆ ಕುಲದವನೊಬ್ಬನು.
बटु (ಪು.) ಹುಡುಗ.
भेक (ಪು.) ಕಪ್ಪೆ.
मण्डप (ಪು.) ಹಂದರ, ಚಪ್ಪರ, ಪ್ರಾಕಾರ.
यज्ञमण्डप (ಪು.) ಯಜ್ಞಕ್ಕಾಗಿ ಹಾಕಿದ ಚಪ್ಪರ, ಯಜ್ಞದ ಪ್ರಾಕಾರ, ಹಂದರ.
यज्ञिय (ವಿ.) ಯಜ್ಞ ಸಂಬಂಧದ.
रण (ನ.) ಯುದ್ಧ, ಕಾಳಗ.
वसुधा (ಸ್ತ್ರೀ.) ಪೃಥ್ವಿ.
वृत्तान्त (ಪು.) ಸಂಗತಿ, ಇತಿವೃತ್ತ.
समुपाहृत (ವಿ.) ಒಟ್ಟುಗೂಡಿಸಿದ.
सहस्र (ನ.) ಸಾವಿರ.
हन् (ಪ.) ಕೊಲ್ಲು.
अभिहन् (ಪ.), आ+हन् (ಆ.) ಹೊಡಿ, ಬಡಿ.

---

ಅಂಗರು अङ्गाः (ಪು. ನಿತ್ಯ ಬಹುವಚನ).
ದಳವಾಯಿ, ಸೇನಾಪತಿ चमूपति (ಪು.), सेनापति (ಪು.).
ಸಮರಾಂಗಣ रणभूमि (ಸ್ತ್ರೀ.).
ತಾನೇ स्वयम् (ಅ.).
ದಂಡೆತ್ತಿ ಹೋಗು, ಬರು अभि+इ (೧ನೇ ಗ. ಪ).
ಕಲಿಂಗರು कलिङ्गाः (ನಿತ್ಯ ಬಹುವಚನ).
ಮೌರ್ಯ मौर्य (ಪು.) ಒಂದು ಅರಸುಮನೆತನದ ಹೆಸರು, ಆ ವಂಶದವನೊಬ್ಬನು.
ಅನ್ನು पठ् (೧ನೇ ಗ. ಪ.).
ತಿರುಗು, ತಿರಿಗಿ ಹೋಗು नि+वृत् (೧ನೇ ಗ. ಆ.).
ರಾಜ್ಯ विषय (ಪು.).

# ೧೧ನೇ ಪಾಠ.

## ೩ನೇ ಗಣ.

೧. ಈ ಗಣದಲ್ಲಿ ಧಾತುಗಳಿಗೆ ಆಖ್ಯಾತಪ್ರತ್ಯಯಗಳು ಹತ್ತುವ ಪೂರ್ವದಲ್ಲಿ ಅವುಗಳೊಳಗಿನ ೧ನೇ ಸ್ವರಕ್ಕೂ ಆ ಸ್ವರದ ಹಿಂದೆ ವ್ಯಂಜನವಿದ್ದರೆ ಅದಕ್ಕೂ ದ್ವಿತ್ವ ಬರುತ್ತದೆ. ಒಂದು ಧಾತುವಿನೊಳಗೆ ಅನೇಕ ಸ್ವರಗಳಿದ್ದರೆ, ಮೊದಲಿನ ಸ್ವರಕ್ಕೂ ಅದರ ಪೂರ್ವದಲ್ಲಿರುವ ವ್ಯಂಜನಕ್ಕೂ ದ್ವಿತ್ವ ಬರುವದು. ಈ ಕಾರ್ಯದಿಂದುಂಟಾದ ಹೊಸ ಅಕ್ಷರಕ್ಕೆ ಅಭ್ಯಾಸವೆಂಬ ಸಂಜ್ಞೆಯು. ಉದಾ: **निज्** ಧಾತುವು ದ್ವಿತ್ವದಿಂದ **निनिज्** ಆಗುವದು. ಇದರಲ್ಲಿ ಮೊದಲನೇ **नि**ಗೆ ಅಭ್ಯಾಸವೆಂಬ ಸಂಜ್ಞೆಯು, ಈ ದ್ವಿತ್ವದ ಬಗ್ಗೆ ಸಾಮಾನ್ಯ ನಿಯಮಗಳು ಯಾವವಂದರೆ:

೨. ದ್ವಿತ್ವದ ಬಗ್ಗೆ ಸಾಮಾನ್ಯ ನಿಯಮಗಳು:

(ಅ) ಅಭ್ಯಾಸದಲ್ಲಿ ವರ್ಗದ್ವಿತೀಯಾಕ್ಷರವಿದ್ದರೆ ಅದಕ್ಕೆ ಪ್ರಥಮಾಕ್ಷರವೂ, ಚತುರ್ಥಾಕ್ಷರವಿದ್ದರೆ ಅದಕ್ಕೆ ತೃತೀಯಾಕ್ಷರವೂ ಆದೇಶವಾಗುತ್ತವೆ. ಉದಾ: **फल्** ಧಾತುವು ದ್ವಿತ್ವವಾಗಿ **फफल्** ಆಗುತ್ತದೆ (ನಿಯಮ ೧), ತರುವಾಯ ಈ ನಿಯಮದ ಪೂರ್ವಭಾಗದ ಮೇರೆಗೆ **पफल्** ಆಗುವದು; **खा** ಮೊದಲು **खाखा** ಆಗುತ್ತದೆ, ತರುವಾಯ **कखा** ಆಗುವದು (ಇದೇ ನಿಯಮದ ಉತ್ತರಭಾಗ ನೋಡು), ತರುವಾಯ **चखा** ಆಗುವದು (ಪುಟ ೭೬, ನಿಯಮ ೨ ಇ ನೋಡು); **भी-भीभी-बीभी-बिभी.**

(ಬ) ಕಂಠ್ಯವ್ಯಂಜನಕ್ಕೆ ಯಥಾಸುಕ್ರಮ ತಾಲವ್ಯವ್ಯಂಜನಾದೇಶವಾಗುವದು. (ಮೇಲಿನ ನಿಯಮ ಹತ್ತುವಲ್ಲಿ ಈ ನಿಯಮದಿಂದ ಬಾಧೆ ಬರಲಾರದು). **ह**ಕಾರಕ್ಕೆ **ज**ಕಾರಾದೇಶವಾಗುವದು. ಉದಾ: **खन्-खखन्** (ನಿಯಮ ೧)—**छखन्** (ನಿಯಮ ೨ ಬ)—**चखन्** (ನಿಯಮ ೨ ಅ).

**हा-हाहा** (ನಿಯಮ ೧)—**हहा** (ನಿಯಮ ೨ ಇ)—**जहा** (ನಿಯಮ ೨ ಬ, ಉತ್ತರ ಭಾಗ).

(ಕ) ಧಾತುಗಳ ಆದಿಯಲ್ಲಿ ಸಂಯುಕ್ತವ್ಯಂಜನಗಳಿದ್ದರೆ, ಮೊದಲಿನ ವ್ಯಂಜನಕ್ಕೆ ಮತ್ತು ಅದರ ಮುಂದಿನ ಸ್ವರಕ್ಕೆ ಮಾತ್ರ ದ್ವಿತ್ವ ಬರುತ್ತದೆ. ಉದಾ: **ह्री**--**हीह्री** (ನಿಯಮ ೨ ಕ)—**जीह्री** (ನಿಯಮ ೨ ಬ)—**जिह्री** (ನಿಯಮ ೨ ಇ).

(ಡ) ಅಪವಾದ.—ಆ ಸಂಯುಕ್ತವ್ಯಂಜನಗಳ ಆದಿಯಲ್ಲಿ ಊಷ್ಮವರ್ಣಗಳಲ್ಲೊಂದಿದ್ದು ಎರಡನೇದು ಕರ್ಕಶವರ್ಣವಿದ್ದರೆ, ಆ ಕರ್ಕಶವರ್ಣ ಹಾಗೂ ಅದರ ಮುಂದಿನ ಸ್ವರ ಇವುಗಳಿಗೆ ಮಾತ್ರ ದ್ವಿತ್ವ ಬರುವದು. ಉದಾ: **स्पर्ध्-पस्पर्ध्.**

10*

(ಇ) ಅಭ್ಯಾಸದೊಳಗಿನ ದೀರ್ಘಸ್ವರವು ಹ್ರಸ್ವವಾಗುವದು, ಮತ್ತು ऋಕ್ಕೆ अ ಆದೇಶವಾಗುವದು. ಉದಾ: ह्री-जिह्री, कृ-चकृ.

೩. ಮೂರನೇ ಗಣದ ಧಾತುಗಳು ಹೊಂದುವ ಕೆಲವು ವಿಶಿಷ್ಟ ವಿಕಾರಗಳು:—मा ಅಳಿ, हा ಹೋಗು, भृ ತಾಳು, ಹೊರು, पृ ಅಥವಾ पॄ ತುಂಬು, ऋ ಹೋಗು, ಈ ಧಾತುಗಳ ಅಭ್ಯಾಸಸ್ವರಕ್ಕೆ इಕಾರಾದೇಶವಾಗುವದು. निज्, विज्, विष् ಧಾತುಗಳ ಅಭ್ಯಾಸದೊಳಗಿನ ಸ್ವರಕ್ಕೆ ಗುಣವಾಗುತ್ತದೆ. निज्-निनिज्-नेनिज् ಇತ್ಯಾದಿ.

೪. ऋ ಧಾತುವಿನ ಅಭ್ಯಾಸದೊಳಗಿನ इಕಾರಕ್ಕೆ ಅಸಮಸ್ವರವು ಪರವಾಗಲು ನಡುವೆ यಕಾರಾಗಮ ಬರುತ್ತದೆ (ಪಾಠ ೧೩, ನಿಯಮ ೮).

೫. ಪ್ರಥಮಪುರುಷ ಬಹುವಚನದ ಪರಸ್ಮೈಪದ ಆತ್ಮನೇಪದ ಪ್ರತ್ಯಯಗಳೊಳಗಿನ न्‌ಕ್ಕೆ ಲೋಪ ಬರುತ್ತದೆ.

೬. ಈ ಗಣದಲ್ಲಿ ಅನದ್ಯತನಭೂತಕಾಲದ ಪ್ರಥಮಪುರುಷ ಬಹುವಚನ ಪರಸ್ಮೈಪದ ಪ್ರತ್ಯಯವು उस्. ಈ ಪ್ರತ್ಯಯದ ಹಿಂದಿನ ಧಾತ್ವಂತ आಕಾರಕ್ಕೆ ಲೋಪ ಬರುವದು, ಮತ್ತು ಧಾತ್ವಂತ इ, ई, उ, ऊ, ऋ, ॠ ಗಳಿಗೆ ಗುಣವಾಗುವದು.

भृ (ಪ.) ಪಾಲಿಸು, ಸಹಿಸು.

ವರ್ತಮಾನಕಾಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | बिभर्ति | बिभृतः | बिभ्रति |
| ಮ. ಪು. | बिभर्षि | बिभृथः | बिभृथ |
| ಉ. ಪು. | बिभर्मि | बिभृवः | बिभृमः |

ಅನದ್ಯತನಭೂತಕಾಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अबिभः | अबिभृताम् | अबिभरुः |
| ಮ. ಪು. | अबिभः | अबिभृतम् | अबिभृत |
| ಉ. ಪು. | अबिभरम् | अबिभृव | अबिभृम |

ಆಜ್ಞಾರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | बिभर्तु | बिभृताम् | बिभ्रतु |
| ಮ. ಪು. | बिभृहि | बिभृतम् | बिभृत |
| ಉ. ಪು. | बिभराणि | बिभराव | बिभराम |

ವಿಧ್ಯರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | बिभृयात् | बिभृयाताम् | बिभृयुः |
| ಮ. ಪು. | बिभृयाः | बिभृयातम् | बिभृयात |
| ಉ. ಪು. | बिभृयाम् | बिभृयाव | बिभृयाम |

भृ-भृभृ (ನಿಯಮ ೧) — ब्भृ (ನಿಯಮ ೨ ಅ) बिभृ (ನಿಯಮ ೪) — बिभृ + ति = बिभर् + ति (ಪಾಠ ೨, ನಿಯಮ ೬) = बिभर्ति.

बिभृ + अति = बिभ्रति (ಪುಟ ೭೬, ನಿಯಮ ೫).

ಅನದ್ಯತನಭೂತಕಾಲದ ಪ್ರ. ಪುರುಷೈಕವಚನದ ರೂಪಸಿದ್ಧಿ ಹ್ಯಾಗಂದರೆ:— अबिभृ + त् = अबिभर् + त् (ಪಾಠ ೨, ನಿಯಮ ೬) = अबिभर् (ಪುಟ ೬೯, ನಿ. ೧) = अबिभः ಇಷ್ಟೈತರೂಪವು.

ಪ್ರ. ಬಹುವಚನ. अबिभृ + उस् = अबिभर् + उस् (ಪಾಠ ೨, ನಿಯಮ ೬) = अबिभरुः; अबिभृ + स् = अबिभर् + स् (ಪಾಠ ೨, ನಿಯಮ ೬) = अबिभर् (ಪುಟ ೬೯, ನಿಯಮ ೧) = अबिभः

ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ವರ್ತಮಾನಕಾಲ ಪ್ರ. ಪು. | बिभृते | बिभ्राते | बिभ्रते |
| ಅನ. ಭೂತಕಾಲ ಪ್ರ. ಪು. | अबिभृत | अबिभ्राताम् | अबिभ्रत |

ह्री (ಪ.) ನಾಚಿಕೊಳ್ಳು.

| | ಏ. | ದ್ವಿ. | ಬಹು. |
|---|---|---|---|
| ವರ್ತಮಾನಕಾಲ ಪ್ರ. ಪು. | जिह्रेति | जिह्रीतः | जिह्रियति (ಪು. ೪೨, ನಿ. ೫.) |
| ಅನ. ಭೂತಕಾಲ ಪ್ರ. ಪು. | अजिह्रेत् | अजिह्रीताम् | अजिह्रयुः (ಪು. ೭೬, ನಿ. ೬). |

೭. मा, हा (ಹೋಗು) ಧಾತುಗಳಿಗೆ ವ್ಯಂಜನಾದಿ ದುರ್ಬಲಪ್ರತ್ಯಯಗಳು ಪರವಾಗಲು, ಆಕಾರಕ್ಕೆ ಈಕಾರಾದೇಶವಾಗುವದು; ಸ್ವರಾದಿ ದುರ್ಬಲಪ್ರತ್ಯಯ ಪರವಾದರೆ, ಆಕಾರಕ್ಕೆ ಲೋಪ ಬರುವದು.

मा (ಆ.) ಅಳೆ.

| | ಏ. | ದ್ವಿ. | ಬಹು. |
|---|---|---|---|
| ವರ್ತಮಾನಕಾಲ ಪ್ರ. ಪು. | मिमीते | मिमाते | मिमते |
| ಅನ. ಭೂತಕಾಲ. ಪ್ರ. ಪು. | अमिमीत | अमिमाताम् | अमिमत |

हा (ಆ.) ಹೋಗು.

| | | ಏ. | ದ್ವಿ. | ಬಹು. |
|---|---|---|---|---|
| ವರ್ತಮಾನಕಾಲ | ಪ್ರ. ಪು. | जिहीते | जिहाते | जिहते |
| ಅನ. ಭೂತಕಾಲ | ಪ್ರ. ಪು. | अजिहीत | अजिहाताम् | अजिहत |

ಪ್ರ. ಪುರುಷೈಕವಚನದ ರೂಪಸಿದ್ಧಿಯು ಹ್ಯಾಗಂದರೆ: मिमा (ಪುಟ ೭೬, ನಿಯಮ ೩)+ ते = मिमीते (ಪುಟ ೭೭, ನಿಯಮ ೭).

ಪ್ರ. ಪುರುಷ ಬಹುವಚನದ ರೂಪಸಿದ್ಧಿಯು ಹ್ಯಾಗಂದರೆ: मिमा + अते = मिम् + अते (ಪುಟ ೭೭, ನಿಯಮ ೭) = मिमते.

೮. हा (ಬಿಡು) ಧಾತುವಿನ आಕಾರಕ್ಕೂ ಇವೇ ವಿಕಾರಗಳು ಆಗುತ್ತವೆ; ಆದರೆ ೭ನೇ ನಿಯಮದಲ್ಲಿ ಹೇಳಿದ ईಕಾರಾದೇಶವು ವಿಕಲ್ಪದಿಂದ ಹ್ರಸ್ವವಾಗುವದು. यಕಾರವು ಆದಿಯಲ್ಲುಳ್ಳ ವಿಧ್ಯರ್ಥಕ ಪ್ರತ್ಯಯಗಳ ಪೂರ್ವದಲ್ಲಿ आಕಾರಕ್ಕೆ ಲೋಪ ಬರುವದು. ಆಜ್ಞಾರ್ಥದ ಮಧ್ಯಮಪುರುಷೈಕವಚನದ ಪ್ರತ್ಯಯದ ಪೂರ್ವದಲ್ಲಿ आಕಾರವು ವಿಕಲ್ಪದಿಂದ ಉಳಿಯುವದು; ಆದರಿಂದ ಆ ವಚನದಲ್ಲಿ ಮೂರು ರೂಪಗಳಾಗುವವು. ಯಾವವಂದರೆ: जहाहि, जहिहि, जहीहि.

हा (ಪ.) ಬಿಡು.

| | | ಏ. | ದ್ವಿ. | ಬಹು. |
|---|---|---|---|---|
| ವರ್ತಮಾನಕಾಲ | ಪ್ರ. ಪು. | जहाति | जहीतः, जहितः | जहति |
| | ಮ. ಪು. | जहासि | जहीथः, जहिथः | जहीथ, जाहिथ |
| | ಉ. ಪು. | जहामि | जहीवः, जहिवः | जहीमः, जहिमः |
| ಅನ. ಭೂತಕಾಲ | ಪ್ರ. ಪು. | अजहात् | अजहीताम्, अजहिताम् | अजहुः |
| ಆಜ್ಞಾರ್ಥ | ಪ್ರ. ಪು. | जहातु | जहीताम्, जहिताम् | जहतु |
| ವಿಧ್ಯರ್ಥ | ಪ್ರ. ಪು. | जह्यात् | जह्याताम् | जह्युः |

೯. ವ್ಯಂಜನಾದಿ ದುರ್ಬಲಪ್ರತ್ಯಯಗಳು ಪರವಾಗಲು, भी ಧಾತುವಿನ ईಕಾರಕ್ಕೆ ವಿಕಲ್ಪದಿಂದ इಕಾರಾದೇಶವಾಗುವದು.

(ಅ) ಅಂಗದಲ್ಲಿ ಒಂದಕ್ಕಿಂತ ಹೆಚ್ಚು ಅಕ್ಷರಗಳಿದ್ದು ಧಾತ್ವಂತ इ, ईಕಾರಗಳ ಪೂರ್ವದಲ್ಲಿ ಸಂಯುಕ್ತವ್ಯಂಜನವಿರದಿದ್ದರೆ, ಆ इ, ईಕಾರಗಳ ಮುಂದೆ ಸ್ವರಾದಿ ದುರ್ಬಲಪ್ರತ್ಯಯಗಳು ಬರಲಾಗಿ ಅವುಗಳಿಗೆ यಕಾರಾದೇಶವಾಗುವದು.

ಶಾಂತ ಕುಮಾರ್ [illegible]



ಉದಾ: बिभी + अति = बिभ्यति; ಆದರೆ जिह्री + अति = जिह्रियति ಇದರಲ್ಲಿ ಈಕಾರದ ಹಿಂದೆ ಸಂಯುಕ್ತವ್ಯಂಜನವಿದ್ದದರಿಂದ ಈಕಾರಕ್ಕೆ इय् ಆದೇಶವಾಯಿತು (ಪಾಠ ೭, ನಿಯಮ ೩ ನೋಡು).

**भी (ಪ.) ಅಂಜು.**

| | | ಏ. | ದ್ವಿ. | ಬಹು. |
|---|---|---|---|---|
| ವರ್ತಮಾನಕಾಲ | ಪ್ರ. ಪು. | बिभेति | बिभीतः / बिभितः | बिभ्यति |
| ಅನ. ಭೂತಕಾಲ | ಪ್ರ. ಪು. | अबिभेत् | अबिभीताम् / अबिभिताम् | अबिभयुः |
| ಆಜ್ಞಾರ್ಥ | ಪ್ರ. ಪು. | बिभेतु | बिभीताम् / बिभिताम् | बिभ्यतु |
| | ಉ. ಪು. | बिभयानि | बिभयाव | बिभयाम |

೧೦. दा, धा ಧಾತುಗಳ ಮುಂದೆ ದುರ್ಬಲಪ್ರತ್ಯಯಗಳು ಬರಲು, ಅವುಗಳ ಅಂತ್ಯಸ್ವರಕ್ಕೆ ಲೋಪ ಬರುವದು. धा ಧಾತುವಿನ ಮುಂದೆ स्, ध्, त्, थ् ಗಳು ಬರಲಾಗಿ ಅದರ ಅಂಗಕ್ಕೆ धत् ಆದೇಶವಾಗುವದು. ಈ ಧಾತುಗಳ ಪರಸ್ಮೈಪದ ಆಜ್ಞಾರ್ಥ ಮಧ್ಯಮಪುರುಷೈಕವಚನದ ರೂಪಗಳು देहि, धेहि ಎಂದು ಆಗುತ್ತವೆ.

**धा (ವ. ಉ.) ಹಾಕು, ಇಡು, ಮಾಡು, ಹಿಡಿ.**

| | | ಪರಸ್ಮೈಪದ. ಏ. | ದ್ವಿ. | ಬಹು. | ಆತ್ಮನೇಪದ. ಏ. | ದ್ವಿ. | ಬಹು. |
|---|---|---|---|---|---|---|---|
| ವರ್ತಮಾನಕಾಲ | ಪ್ರ. ಪು. | दधाति | धत्तः | दधति | धत्ते | दधाते | दधते |
| | ಮ. ಪು. | दधासि | धत्थः | धत्थ | धत्से | दधाथे | धद्ध्वे |
| | ಉ. ಪು. | दधामि | दध्वः | दध्मः | दधे | दध्वहे | दध्महे |
| ಅನ. ಭೂತಕಾಲ | ಪ್ರ. ಪು. | अदधात् | अधत्ताम् | अदधुः | अधत्त | अदधाताम् | अदधत |
| | ಮ. ಪು. | अदधाः | अधत्तम् | अधत्त | अधत्थाः | अदधाथाम् | अधद्ध्वम् |
| | ಉ. ಪು. | अदधाम् | अदध्व | अदध्म | अदधि | अदध्वहि | अदध्महि |
| ಆಜ್ಞಾರ್ಥ | ಪ್ರ. ಪು. | दधातु | धत्ताम् | दधतु | धत्ताम् | दधाताम् | दधताम् |
| | ಮ. ಪು. | धेहि | धत्तम् | धत्त | धत्स्व | दधाथाम् | धद्ध्वम् |
| | ಉ. ಪು. | दधानि | दधाव | दधाम | दधै | दधावहै | दधामहै |
| ವಿಧ್ಯರ್ಥ | ಪ್ರ. ಪು. | दध्यात् | दध्याताम् | दध्युः | दधीत | दधीयाथाम् | दधीरन् |
| | ಮ. ಪು. | दध्याः | दध्यातम् | दध्यात | दधीथाः | दधीयाथाम् | दधीध्वम् |
| | ಉ. ಪು. | दध्याम् | दध्याव | दध्याम | दधीय | दधीवहि | दधीमहि |

ಚಕ್ಷ್ಮ ಇತ್ಯಾದಿ ರೂಪಗಳಲ್ಲಿ ತ್ ಕ್ಕೆ ಕ್ಷ ಬಂತು; ಯಾಕಂದರೆ ಅವುಗಳ ಮುಂದೆ ಅನುನಾಸಿಕೇತರಮೃದುವ್ಯಂಜನ ಬಂದಿರುವದು; ಮತ್ತು अचक्षा + तस् = अचक्ष् + तस् (ಪುಟ ೭೬, ನಿಯಮ ೬) = अचक्षुः ಆಯಿತು. ಆಜ್ಞಾರ್ಥದ ಉತ್ತಮಪುರುಷದಲ್ಲಿ ಗೆ ಹೊರತು ಉಳಿದ ಪ್ರತ್ಯಯಗಳ ಆದಿಯಲ್ಲಿ आ ಇರುತ್ತದೆಂಬದನ್ನು ಲಕ್ಷ್ಯದಲ್ಲಿಡಬೇಕು.

ಚಾ ಧಾತುವು ಖಾ ಧಾತುವಿನಂತೆ ನಡೆಯುವದು.

೧೧. ಈ ಗಣದಲ್ಲಿ ಸ್ವರಾದಿ ಸಬಲಪ್ರತ್ಯಯಗಳು ಪರವಾದಾಗ್ಗೆ ಉಪಾಂತ್ಯ ಹ್ರಸ್ವಸ್ವರಕ್ಕೆ ಗುಣವಾಗುವದಿಲ್ಲ. ಉದಾ: नेनिज् + आनि = नेनिजानि ಆಜ್ಞಾರ್ಥ ಉ. ಪು. ಏಕವಚನ.

### निज् (ಪ. ಆ.)

| | ಪರಸ್ಮೈಪದ. | | | ಆತ್ಮನೇಪದ. | | |
|---|---|---|---|---|---|---|
| | ಏ. | ದ್ವಿ. | ಬಹು. | ಏ. | ದ್ವಿ. | ಬಹು. |
| ವರ್ತ. ಪ್ರ. ಪು. | नेनेक्ति | नेनिक्तः | नेनिजति | नेनिक्ते | नेनिजाते | नेनिजते |

ति ಪ್ರತ್ಯಯದ ಹಿಂದಿನ ज಼ಕಾರಕ್ಕೆ क಼ಕಾರಾದೇಶವಾಗುವದು (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣಿ ೧ ನೋಡು).

| | ಏ. | ದ್ವಿ. | ಬಹು. | ಏ. | ದ್ವಿ. | ಬಹು. |
|---|---|---|---|---|---|---|
| ಅನದ್ಯ. ಉ. ಪು. | अनेनिजम् | अनेनिज्व | अनेनिज्म | अनेनिजि | अनेनिज्वहि | अनेनिज्महि |
| ಆಜ್ಞಾ. ಉ. ಪು. | नेनिजानि | नेनिजाव | नेनिजाम | नेनिजै | नेनिजावहै | नेनिजामहै |

### हु (ಪ.) ಯಜ್ಞ ಮಾಡು, ಬಲಿ ಕೊಡು.

| | | ಏ. | ದ್ವಿ. | ಬಹು. |
|---|---|---|---|---|
| ವರ್ತಮಾನಕಾಲ | ಪ್ರ. ಪು. | जुहोति | जुहुतः | जुह्वति |
| ಅನದ್ಯತನಭೂತಕಾಲ | ಪ್ರ. ಪು. | अजुहोत् | अजुहुताम् | अजुहवुः |
| ಆಜ್ಞಾರ್ಥ | ಮ. ಪು. | जुहुधि | जुहुतम् | जुहुत |

ಈ ಧಾತುವಿನ ಆಜ್ಞಾರ್ಥ ಮ. ಪು. ಏಕವಚನದಲ್ಲಿ हि ಪ್ರತ್ಯಯ ಬರಲು ಅದಕ್ಕೆ ಅಪವಾದದಿಂದ धि ಆದೇಶವಾಗುವದು.

हु ಧಾತುವಿನ ಮುಂದೆ ಸ್ವರಾದಿ ದುರ್ಬಲಪ್ರತ್ಯಯಗಳು ಬರಲು, (ಪುಟ ೪೨, ನಿಯಮ ಖದಲ್ಲಿ ಹೇಳಿದಂತೆ) उಕಾರಕ್ಕೆ उव् ಆದೇಶವಾಗುವದಕ್ಕೆ ಬದಲಾಗಿ व् ಆದೇಶವಾಗುವದು.

### मा (ಆ.) ಅಳೆ.

| | ವರ್ತಮಾನ. | | | ಅನದ್ಯತನಭೂತ. | | |
|---|---|---|---|---|---|---|
| | ಏ. | ದ್ವಿ. | ಬಹು. | ಏ. | ದ್ವಿ. | ಬಹು. |
| मा (ಪ್ರ. ಪು.) | मिमीते | मिमाते | मिमते | अमिमीत | अमिमाताम् | अमिमत |

(ಪುಟ ೭೭, ನಿಯಮ ೭ ನೋಡು.)

| | ಏ. | ದ್ವಿ. | ಬಹು. | ಏ. | ದ್ವಿ. | ಬಹು. |
|---|---|---|---|---|---|---|
| हा (ಆ.) ಹೋಗು. | जिहीते | जिहाते | जिहते | अजिहीत | अजिहाताम् | अजिहत |
| पृ (ಪ.) ತುಂಬು. | पिपर्ति | पिपृतः | पिप्रति | अपिपः | अपिपृताम् | अपिपरुः |
| पॄ (ಪ.) ತುಂಬು. | पिपर्ति | पिपूर्तः | पिपुरति | अपिपः | अपिपूर्ताम् | अपिपरुः |
| ऋ (ಪ.) ಹೋಗು. | इयर्ति | इयृतः | इय्रति | ऐयः | ऐयृताम् | ऐयरुः |

पॄ ಧಾತುವಿನ ॠಕಾರಕ್ಕೆ उर् ಆದೇಶವಾಗುತ್ತದೆ (ಪಾಠ ೧, ನಿಯಮ ೯). ऋ ಧಾತುವಿನ ರೂಪಸಿದ್ಧಿ ಹ್ಯಾಗಂದರೆ: ऋ ಧಾತುವು ದ್ವಿತ್ವವನ್ನು ಹೊಂದಿ ऋऋ (ಪಾಠ ೧೧, ನಿಯಮ ೧) ಆಗುವದು. ऋऋ = इऋ (ಪಾಠ ೧೧, ನಿಯಮ ೩) = इयृ (ಪಾಠ ೧೧, ನಿಯಮ ೪). आ (ಅನದ್ಯತನಭೂತದ ಆಗಮ) + इयृ = ऐयृ.

विज् (ಪ. ಆ.). विष् (ಪ. ಆ.).

ಪರಸ್ಮೈಪದ.

| | ಏ. | ದ್ವಿ. | ಬಹು. | ಏ. | ದ್ವಿ. | ಬಹು. |
|---|---|---|---|---|---|---|
| ವ. ಪ್ರ. ಪು. | वेवेक्ति | वेविक्तः | वेविजति | वेवेष्टि | वेविष्टः | वेविषति |
| ಅ. ಉ. ಪು. | अवेविजम् | अवेविज्व | अवेविज्म | अवेवेट्-ड् | अवेविष्टाम् | अवेविषुः |

ಆತ್ಮನೇಪದ.

| | ಏ. | ದ್ವಿ. | ಬಹು. | ಏ. | ದ್ವಿ. | ಬಹು. |
|---|---|---|---|---|---|---|
| ವ. ಪ್ರ. ಪು. | वेविक्ते | वेविजाते | वेविजते | वेविष्टे | वेविषाते | वेविषते |
| ಅ. ಪ್ರ. ಪು. | अवेविक्त | अवेविजाताम् | अवेविजत | अवेविष्ट | अवेविषाताम् | अवेविषत |

धान्यं मिमीते कुडवेन ।

अग्नौ समिधो जुहोत्यध्वर्युः ।

यथा मे पिता धर्मं न प्रजहातु तथा मे वरं देहि ।

येभ्यः[1] सर्वे लोका अबिभयुस्ताचाक्षसानरण्ये रामोऽहन् ।

भर्त्रा सह पितुः समीपं गच्छन्ती जिह्रेमीत्यवदच्छकुन्तला ।

कृष्णश्चक्रमबिभरर्जुनो[2] गाण्डीवं दुर्योधनभीमसेनौ गदामबिभृता मन्ये सर्वे योधाः साधारणं धनुरबिभरुः ।

---

[1] "ಅಂಜಿಕೆ", "ಭಯದಿಂದ ರಕ್ಷಣೆ" ಎಂಬ ಅರ್ಥದ ಧಾತುಗಳ ಯೋಗವಿದ್ದಲ್ಲಿ ಯಾರಿಂದ ಭಯವುಂಟೋ ಅವರನ್ನು ಹೇಳುವ ನಾಮಪದಗಳಿಗೆ ಪಂಚಮೀವಿಭಕ್ತಿ ಬರುವದು.

[2] अबिभः + अर्जुनो = अबिभरर्जुनो (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೧೯, ಟಿಪ್ಪಣಿ ೨ ನೋಡು).

ब्राह्मणोऽब्राह्मणो वा यः कोऽपि निर्धनोऽशक्तश्च भवेत्तस्मै धनं दत्त ।

रामभार्यां जहाहि जहिहि जहीहीति त्रिर्बिभीषणो रावणमुपादिशत् ।

यस्मिन्कन्यामलंकृत्य वरमाहूय तस्मै तां ददति स ब्राह्मो विवाह उत्तमफलकः ।

हरिचरणयोः प्रक्षिप्तोऽयं पुष्पाणामञ्जलिर्नः कल्याणं विधत्ताम् ।

पुरोहितास्तेषां गृहं गत्वा प्रथमं पादानवानेनिजुः पश्चात्समन्त्रकं कर्म व्यदधुः ।

ददाति द्रविणं भूरि दाति दारिद्र्यमर्थिनाम् ।
सोऽवदायति कीर्तिं च शिरोऽवद्यति विद्विषाम् ॥
संदधाति धनुर्ज्यायां यदैवेषून् रुषान्वितः
तदैव तं भयाक्रान्ताः संधियन्ति धराधिपाः ॥
न जहाति सदाचारं स सदा चारणस्तुतः ।
उज्जिहीते जगज्जित्वा तस्य कीर्तिः सुरालयम् ॥
न क्लाम्यति दिनं कृत्स्नं ददानोऽपि धनं बहु ।
न च क्लामति संग्रामे निघ्नन् गजघटाशतम् ॥

न्यायप्रवृत्तो नृपतिरात्मानमपि च प्रजाः ।
त्रिवर्गेणोपसंधत्ते निहन्ति ध्रुवमन्यथा ॥
अधर्मान्नात्रसः पाप लोकवादान्न चाविभेः ॥
दैवाद्बिभीहि काकुत्स्थ जिह्रीहि त्वं तथा जनात् ।
मिथ्या [1] मामभिसंक्रुध्यन्नवशां शत्रुणा हताम् ॥
आनन्दं ब्रह्मणो विद्वान्न बिभेति कदाचन ॥
यद्ददासि विशिष्टेभ्यो यच्चाश्नासि दिनेदिने ।
तत्ते वित्तमहं मन्ये शेषं कस्यापि रक्षसि ॥
न बिभेति यदा चायं यदा चास्मान्न बिभ्यति ।
यदा नेच्छति न द्वेष्टि ब्रह्म संपद्यते तदा ॥

---

[1] क्रुध्, द्रुह् ಧಾತುಗಳ ಹಿಂದೆ ಉಪಸರ್ಗ ಇದ್ದಲ್ಲಿ ಅವುಗಳ ಕರ್ಮಕ್ಕೆ ದ್ವಿತೀಯಾವಿಭಕ್ತಿ ಬರುವದು.

ಧೃತರಾಷ್ಟ್ರನ ಮಕ್ಕಳು ಆಕಳುಗಳನ್ನು ಬಿಟ್ಟು (हा) ಯುದ್ಧಭೂಮಿಯಿಂದ ಓಡಿದರು.

ರಾಮನು ಈಶ್ವರನ ಧನುವನ್ನು ಮಣಿಸಿದ್ದರಿಂದ ಜನಕನು ಅವನಿಗೆ ತನ್ನ ಮಗಳಾದ ಸೀತೆಯನ್ನು ಕೊಟ್ಟನು (दा).

ಶೂರರು ಶತ್ರುಗಳಿಗೆ ಹೆದರುವದಿಲ್ಲ (भी).

ಅರಸನ ಜನರು ನನ್ನ ಹಣವನ್ನು ತೆಗೆದುಕೊಳ್ಳಬಾರದೆಂದು ನಾನು ಅದನ್ನು ಆ ಮನೆಯಲ್ಲಿ ಇಟ್ಟೆನು (नि+धा).

ನಿಮ್ಮ ದೇಶವೆಲ್ಲ ಹಾಳಾಗಬಾರದೆಂಬದಾಗಿ ನೀವು ಬಲಾಢ್ಯರಾದ ಹಗೆಗಳ ಕೂಡ ಒಡಂಬಡಿಕೆಯ ಮಾಡಿರಿ (सम्+धा).

ಬತ್ತಲೆ ತಿರುಗುವದಕ್ಕೆ ನಿನಗೆ ನಾಚಿಕೆ (ह्री) ಬರುವದಿಲ್ಲವೋ?

ಸ್ಮೃತಿಗಳು ವಿಧವೆಯರ ಪುನರ್ವಿವಾಹಕ್ಕೆ ಆಜ್ಞೆ ಕೊಡುತ್ತವೆ (वि+धा).

ಗೋವಿಂದನು ಕಥೆ ಹೇಳುವಾಗ ನೀನು ಕಿವಿ ಯಾಕೆ ಮುಚ್ಚಿದಿ (पि+धा)?

ಹೆಂಗಸರು ಮೈಮೇಲೆ ಆಭರಣಗಳನ್ನು ಇಟ್ಟುಕೊಳ್ಳುತ್ತಾರೆ (परि+धा).

ಸ್ವಾಭಿಮಾನಕ್ಕೂ ಉದ್ಧಟತನಕ್ಕೂ ಏನು ಭೇದವುಂಟೆಂಬದನ್ನು ಎಲ್ಲರು ತಿಳುಕೊಳ್ಳ ತಕ್ಕದ್ದು (वि+विज्).

ಕೈಕಾಲುಗಳನ್ನು ತೊಳಕೊಂಡು (अव+निज्) ಸಂಧ್ಯಾವಂದನವನ್ನು ಆರಂಭಿಸಿರಿ.

ಅರಸನ ಸೇವಕರು ಭೂಮಿಯ ಉದ್ದಳತೆಯನ್ನು ಅಳೆದರು (मा).

ಸನ್ಯಾಸಿಗಳು ಕೆರೆಯಲ್ಲಿ ತಮ್ಮ ಸೋರೆಗಳನ್ನು ನೀರಿನಿಂದ ತುಂಬಿಕೊಳ್ಳುತ್ತಾರೆ (पृ ಅಥವಾ पॄ).

---

## ಕೋಶ ೧೧.

### ೩ನೇ ಗಣದ ಧಾತುಗಳು.

दा (ಪ. ಆ.) ಕೊಡು.
धा (ಪ. ಆ.) ಹಿಡಿ, ಇಡು, ಹಾಕು.
वि+धा ನೆರವೇರಿಸು, ಮಾಡು, ಆಜ್ಞಾಪಿಸು (ಧರ್ಮಗ್ರಂಥಗಳಲ್ಲಿ ಹೇಳಿದಂತೆ).
परि+धा ಹೊದ್ದುಕೊಳ್ಳು, ತೊಟ್ಟುಕೊಳ್ಳು.
सम्+धा ಒಡಂಬಡಿಕೆ ಮಾಡು.
उप+सम्+धा ದೊರಕಿಸಿ ಕೊಡು.

अपि+धा, पि+धा } ಮುಚ್ಚು.
नि+धा ಇಡು.
अव+धा ಲಕ್ಷ್ಯಕೊಡು.
निज् (ಪ. ಆ.) ಶುದ್ಧ ಮಾಡು.
अव+निज् ತೊಳೆ.
पृ ಅಥವಾ पॄ (ಪ.) ತುಂಬು.

भी (ಪ.) ಅಂಜು.

भृ (ಪ. ಆ.) ಸಂರಕ್ಷಿಸು, ಹೊಟ್ಟೆಗೆ ಹಾಕು, ಸಹಿಸು.

मा (ಆ.) ಅಳೆ, ಅಳತೆ ಮಾಡು.

विज् (ಪ. ಆ.) ಅಥವಾ वि+विज् ವಿಂಗಡಿಸು, ಬೇರೆ ಮಾಡು, ಭೇದ ತಿಳುಕೊಳ್ಳು.

विष् (ಪ. ಆ.) ಸುತ್ತುಗಟ್ಟು, ಸುತ್ತಿಕೊಳ್ಳು.

हा (ಆ.) ಹೋಗು.

उद्+हा (ಆ.) ಏರು, ಮೇಲಕ್ಕೆ ಹೋಗು.

हा (ಪ.) ಬಿಡು.

ह्री (ಪ.) ನಾಚಿಕೊಳ್ಳು, ಲಜ್ಜೆ ಪಡು.

हु (ಪ.) ಹೋಮ ಮಾಡು, ಯಜ್ಞ ಮಾಡು.

---

अञ्जलि (ಪು.) ಬೊಗಸೆ.

अन्यथा (ಅ.) ಇಲ್ಲದಿದ್ದರೆ.

अन्वित (अनु+इ ಧಾತುವಿನ ಕರ್ಮಾರ್ಥಕ ಭೂ. ಕೃ.) ಹಿಂಬಾಲಿಸಿದ, ತುಂಬಿದ.

अर्थिन् (ವಿ.) ಭಿಕ್ಷುಕ.

अवश (ವಿ.) ದಿಕ್ಕಿಲ್ಲದ, ನಿರಾಧಾರವಾದ.

अशक्त (ವಿ.) ಅಸಮರ್ಥ.

उत्तमफलक (ವಿ.), [उत्तम (ವಿ.), फल (ನ.), ಮತ್ತು क ಪ್ರತ್ಯಯ] ಒಳ್ಳೇ ಪರಿಣಾಮವುಳ್ಳ.

काकुत्स्थ (ಪು.) ಕಕುತ್ಸ್ಥನ ವಂಶದವ.

कुडव (ಪು.) ಧಾನ್ಯ ಅಳೆಯುವ ಒಂದು ಮಾಪು.

कृ (अलम् ಪೂರ್ವಕ) ಭೂಷಿಸು, ಶೃಂಗರಿಸು.

कृत्स्न (ವಿ.) ಎಲ್ಲ, ಇಡಿ, ಯಾವತ್ತು.

क्रुध् (अभि+सम् ಪೂರ್ವಕ) ಸಿಟ್ಟಾಗು.

गजघटाशत (ನ.) [घटा ಸಂಘ, ಹಿಂಡು, ವ್ಯೂಹ, शत (ನ.)] ಆನೆಗಳ ಹಿಂಡಿನ ಒಂದು ನೂರು.

गदा (ಸ್ತ್ರೀ.) ದೊಣ್ಣೆ.

गाण्डीव (ನ.) ಅರ್ಜುನನ ಬಿಲ್ಲಿನ ಹೆಸರು.

चारणस्तुत (ವಿ.) [चारण (ಪು.) ಭಟ್ಟಂಗಿ] ಭಟ್ಟಂಗಿಗಳಿಂದ ಸ್ತುತಿಸಲ್ಪಟ್ಟ.

त्रिः (ಅ.) ಮೂರು ಸಾರೆ.

त्रिवर्ग (ಪು.) ಮೂವರ ಸಮೂಹ; ಧರ್ಮ (ಪುಣ್ಯ), ಅರ್ಥ (ದ್ರವ್ಯ), ಕಾಮ (ಇಚ್ಛಾಸಿದ್ಧಿ) ಇವುಗಳ ಸಮೂಹ.

दिनेदिने (ಅ.) ಪ್ರತಿ ದಿವಸ.

दुर्योधनभीमसेनौ (ಪು. ದ್ವಿ.) ದುರ್ಯೋಧನ ಭೀಮಸೇನರು.

दै (೧ನೇ ಗ. ಪ.) (अव ಪೂರ್ವಕ) ಶುದ್ಧ ಮಾಡು, ಸಾಫ ಮಾಡು.

दो [अव ಪೂರ್ವಕ (೪ನೇ ಗ. ಪ.)] ಕಡಿ, ಕತ್ತರಿಸು.

द्रविण (ನ.) ಹಣ, ದ್ರವ್ಯ.

धनुर्ज्या (ಸ್ತ್ರೀ.) [ज्या (ಸ್ತ್ರೀ.) ಹೆದೆ] ಬಿಲ್ಲಿನ ಹೆದೆ.

धराधिप (ಪು.) [धरा (ಸ್ತ್ರೀ.) ಭೂಮಿ, अधिप ಒಡೆಯ] ಅರಸು.

धि (೬ನೇ ಗ. ಪ.) (सम् ಪೂರ್ವಕ) ಒಡಂಬಡಿಕೆ ಮಾಡು.

ध्रुवम् (ಅ.) ನಿಶ್ಚಯವಾಗಿ.

निर्धन (ವಿ.) ಧನಹೀನ, ಬಡವ.

न्यायप्रवृत्त (ವಿ.) [न्याय (ಪು.) ಸತ್ಯ, प्रवृत्त ಇದು प्र+वृत् ಅಂದರೆ ಸಾಗು, ಇದರ ಭೂ. ಕೃ.] ಸನ್ಮಾರ್ಗದಿಂದ ನಡೆಯುವವ, ಪ್ರಮಾಣಿಕತನದಿಂದ ನಡೆಯುವವ.

पद् [सम् ಪೂರ್ವಕ (೪ನೇ ಗ. ಆ.)] ಆಗು.

प्रादुः (ಅ.) (ಉಪಸರ್ಗದಂತೆ ವ್ಯವಹರಿಸುವದು) ಪ್ರಕಟ, ತೋರುವ.

बिभीषण (ಪು.) ರಾವಣನ ತಮ್ಮನ ಹೆಸರು.

ब्राह्म (ಪು.) ಬ್ರಾಹ್ಮಣರಲ್ಲಿ ನಡೆಯುವ ಲಗ್ನದ ವಿಧವು.

भयाक्रान्त (ವಿ.) (आक्रान्त ಇದು आ+क्रम् ಅಂದರೆ ವ್ಯಾಪಿಸಿಕೊಳ್ಳು, ಇದರ ಭೂ. ಕೃ.) ಅಂಜಿಕೆಯಲ್ಲಿ ಮುಳುಗಿದ.

मिथ्या (ಅ.) ಸುಳ್ಳೇ.
रामभार्या (ಸ್ತ್ರೀ.) ರಾಮನ ಹೆಂಡತಿ, ಸೀತಾ.
रुष् (ಸ್ತ್ರೀ.) ಸಿಟ್ಟು.
लोकवाद (ಪು.) ಜನರ ನಿಂದೆ.
विद्वस् (विद् ಧಾತುವಿನ ವರ್ತಮಾನ ಕೃ.) ಬಲ್ಲವ.
विशिष्ट (ವಿ.) ಸಂಭಾವಿತ, ಪೂಜ್ಯ (ಜನರು).
व्यास (ಪು.) ಮಹಾಭಾರತವನ್ನು ರಚಿಸಿದ ಕವಿಯ ಹೆಸರು.
शकुन्तला (ಸ್ತ್ರೀ.) ದುಷ್ಯಂತರಾಜನ ಹೆಂಡತಿಯ ಹೆಸರು.
शेष (ಪು. ನ.) ಉಳಿದದ್ದು, ಉಳಿದವರೆಲ್ಲ.
समन्त्रकम् (ಅ.) ಮಂತ್ರಗಳಿಂದ ಸಹಿತವಾದ.
समिध् (ಸ್ತ್ರೀ.) ಹೋಮದಲ್ಲಿ ಹಾಕತಕ್ಕ ಅತ್ತಿಗಿಡದ ಕಟ್ಟಿಗೆಯ ಚೂರುಗಳು.
साधारण (ವಿ.) ವಾಡಿಕೆಯಾದ, ನಿತ್ಯದ.
सुरालय (ಪು.) [सुर (ಪು.) ಒಬ್ಬ ದೇವತಾ, आलय (ಪು.) ವಾಸಸ್ಥಾನ] ದೇವರ ವಾಸಸ್ಥಾನ, ಸ್ವರ್ಗ.
हन् (नि ಪೂರ್ವಕ) ಕೊಲ್ಲು, ನಾಶ ಮಾಡು.

---

ಯುದ್ಧಭೂಮಿ रणभूमि (ಸ್ತ್ರೀ.)
ಮಣಿಸಲ್ಪಟ್ಟ नामित (ವಿ.), नम् ಧಾತುವಿನ ಪ್ರಯೋಜಕ ಕರ್ಮಾರ್ಥ ಭೂ. ಕೃ.
ಶಿವಧನುಷ್ಯವನ್ನು ರಾಮನು ಮಣಿಸಿದ್ದರಿಂದ शिवधनुषि रामेण नामिते.
ಹಾಳುಮಾಡಿದ ध्वस्त, ध्वंस् ಇದರ ಭೂ. ಕೃ.; उच्छिन्न (ವಿ.), उद् + छिद् ಇದರ ಕರ್ಮಾರ್ಥಕ ಭೂ. ಕೃ.
ಓಡು परा + अय् = पला + अय् (೧ನೇ ಗ. ಆ.).
ಸೋರೆ कमण्डलु (ಪು.).
ಸನ್ಯಾಸಿ वानप्रस्थ (ಪು.), यति (ಪು.)
ಉದ್ಧಳತೆ आयाम (ಪು.).
ಬತ್ತಲೆ नग्न (ವಿ.).
ಮೈ शरीर (ನ.), देह (ಪು.).
ಪುನರ್ವಿವಾಹ पुनरुद्वाह (ಪು.).
ಅಡ್ನಾಡಿತನ, ಉದ್ಧಟತನ अविनय (ಪು.).
ಸಂಧ್ಯಾವಂದನ संध्यावन्दन (ನ.).
ಸ್ವಾಭಿಮಾನ स्वाभिमान (ಪು.).

## ೧೨ನೇ ಪಾಠ.

### ೭ನೇ ಗಣ.

೧. ಈ ಗಣದಲ್ಲಿ ದುರ್ಬಲಪ್ರತ್ಯಯಗಳು ಪರವಾಗಲಾಗಿ न ವಿಕರಣವೂ, ಸಬಲಪ್ರತ್ಯಯಗಳು ಪರವಾಗಲಾಗಿ न ವಿಕರಣವೂ ಧಾತುವಿನ ಸ್ವರಕ್ಕೂ ಧಾತ್ವಂತ ವ್ಯಂಜನಕ್ಕೂ ನಡುವೆ ಬರುವವು. ಧಾತುಗಳಿಗೆ ಪ್ರತ್ಯಯಗಳನ್ನು ಹಚ್ಚುವಾಗ, ೯ನೇ ೧೦ನೇ ಪಾಠಗಳಲ್ಲಿ ಹೇಳಿದ ಸಂಧಿಕಾರ್ಯಗಳಾಗುತ್ತವೆ.

೨. ಧಾತುಗಳೊಳಗಿನ ಅನುನಾಸಿಕಕ್ಕೆ ಲೋಪ ಬರುವದು.

೩. ರುಧ ಧಾತುವಿನ ಮುಂದೆ ವ್ಯಂಜನಾದಿ ಸಬಲಪ್ರತ್ಯಯಗಳು ಬರಲಾಗಿ ನ ವಿಕರಣಕ್ಕೆ ನ ಆದೇಶವಾಗುವದು.

ರುಧ್ ಅಡ್ಡಿ ಮಾಡು.

ಪರಸ್ಮೈಪದ. ವರ್ತಮಾನಕಾಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | रुणद्धि | रुन्द्धः | रुन्धन्ति |
| ಮ. ಪು. | रुणत्सि | रुन्द्धः | रुन्द्ध |
| ಉ. ಪು. | रुणध्मि | रुन्ध्वः[1] | रुन्ध्मः |

ರೂಪಸಿದ್ಧಿವಿಚಾರ:— रुध् + ति = रुनध् + ति (ಪುಟ ೮೫, ನಿಯಮ ೧) = रुणध् + ति (೧ನೇ ಪುಸ್ತಕದ ಪುಟ ೧೭, ಟಿಪ್ಪಣಿ ೪) = रुणध् + धि (ಪುಟ ೫೭, ನಿಯಮ ಘ) = रुणद् + धि ಅಥವಾ रुणद्धि (ಪುಟ ೫೮, ನಿಯಮ ಜ). ಇದರಂತೆ रुन्द्धः. रुध् + सि = रुनध् + सि = रुणध् + सि = रुणत् + सि (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೫, ಟಿಪ್ಪಣಿ ೨) = रुणत्सि.

ಅನದ್ಯತನಭೂತಕಾಲ.

ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अरुणत्-द् | अरुन्द्धाम् | अरुन्धन् |
| ಮ. ಪು. | अरुणत्-द्-अरुणः | अरुन्द्धम् | अरुन्द्ध |
| ಉ. ಪು. | अरुणधम् | अरुन्ध्व | अरुन्ध्म |

ರೂಪಸಿದ್ಧಿವಿಚಾರ:— ಪ್ರ. ಏ. अरुध् + त् = अरुनध् + त् = अरुणध् + त् = अरुणध् (ಪುಟ ೬೮, ನಿಯಮ ೧) = अरुणत्-द् (ಪುಟ ೬೮, ನಿಯಮ ೨). ಮ. ಏ. अरुणध् + स् = अरुणत्-द् ಅಥವಾ अरुणः (ಪುಟ ೭೧, ನಿಯಮ ೩). अरुन्द्धाम्, रुणद्धि ರೂಪದಂತೆ ಆಗುವದು.

ಆಜ್ಞಾರ್ಥ.

ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | रुणद्धु | रुन्द्धाम् | रुन्धन्तु |
| ಮ. ಪು. | रुन्द्धि | रुन्द्धम् | रुन्द्ध |
| ಉ. ಪು. | रुणधानि | रुणधाव | रुणधाम |

(ಪಾಠ ೨, ನಿಯಮ ೪; ಪುಟ ೫೮, ನಿಯಮ ೧ ನೋಡು.)

---

[1] न्-ಕ್ಕೆ ದಂತ್ಯವರ್ಣಗಳು ಪರವಾಗಲಾಗಿ ण् ಆದೇಶ ಬರುವದಿಲ್ಲ. ಉದಾ: क्रुर्वन्ति रुन्ध्वः (೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೧೭, ಟಿಪ್ಪಣಿ ೪ ನೋಡು).

ವಿಧ್ಯರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | रुन्ध्यात् | रुन्ध्याताम् | रुन्ध्युः |
| ಮ. ಪು. | रुन्ध्याः | रुन्ध्यातम् | रुन्ध्यात |
| ಉ. ಪು. | रुन्ध्याम् | रुन्ध्याव | रुन्ध्याम |

ಆತ್ಮನೇಪದ.

ವರ್ತಮಾನಕಾಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | रुन्द्धे | रुन्धाते | रुन्धते |
| ಮ. ಪು. | रुन्त्से | रुन्धाथे | रुन्द्ध्वे |
| ಉ. ಪು. | रुन्धे | रुन्ध्वहे | रुन्ध्महे |

ಅನದ್ಯತನ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अरुन्द्ध | अरुन्धाताम् | अरुन्धत |
| ಮ. ಪು. | अरुन्द्धाः | अरुन्धाथाम् | अरुन्द्ध्वम् |
| ಉ. ಪು. | अरुन्धि | अरुन्ध्वहि | अरुन्ध्महि |

ಆಜ್ಞಾರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | रुन्द्धाम् | रुन्धाताम् | रुन्धताम् |
| ಮ. ಪು. | रुन्त्स्व | रुन्धाथाम् | रुन्द्ध्वम् |
| ಉ. ಪು. | रुणधै | रुणधावहै | रुणधामहै |

ವಿಧ್ಯರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | रुन्धीत | रुन्धीयाताम् | रुन्धीरन् |
| ಮ. ಪು. | रुन्धीथाः | रुन्धीयाथाम् | रुन्धीध्वम् |
| ಉ. ಪು. | रुन्धीय | रुन्धीवहि | रुन्धीमहि |

अञ्ज् (ಪ.) ಪೂಸು, ಎಣ್ಣೇಹಚ್ಚು.

ವರ್ತಮಾನ. ಪ್ರ. ಪು. अनक्ति अङ्क्तः अञ्जन्ति

अञ्ज् + ति = अज् + ति (ಪುಟ ೮೫, ನಿಯಮ ೨) = अनज् + ति = अनक् + ति (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣಿ ೧ ನೋಡು).

| | | ಏ. | ದ್ವಿ. | ಬಹು. |
|---|---|---|---|---|
| ಅನದ್ಯತನ. | ಪ್ರ. ಪು. | आनक्-ग् | आंक्ताम् | आञ्जन् |
| ಅಜ್ಞಾರ್ಥ | ಮ. ಪು. | अङ्ग्धि | अंक्तम् | अंक्त |

पिष् (ಪ.) ಪುಡಿ ಮಾಡು, ಜಜ್ಜು.

| | | | | |
|---|---|---|---|---|
| ವರ್ತಮಾನ | ಪ್ರ. ಪು. | पिनष्टि | पिंष्टः | पिंषन्ति |

पिष् + ति = पिनष् + ति = पिंनष् + टि (೧ನೇ ಪುಸ್ತಕ, ಪುಟ ೨೪, ಟಿಪ್ಪಣಿ ೧, ಉತ್ತರ ಭಾಗ) = पिनष्टि.

| | | | | |
|---|---|---|---|---|
| ಅನದ್ಯತನ. | ಪ್ರ. ಪು. | अपिनट्-ड् | अपिंष्टाम् | अपिंषन् |

अपिष् + त् = अपिनष् + त् = अपिनष् (ಪುಟ ೬೮, ನಿಯಮ ೧) = अपिनट्-ड् (ಪುಟ ೬೮, ನಿಯಮ ೨).

| | | | | |
|---|---|---|---|---|
| ಅಜ್ಞಾರ್ಥ. | ಮ. ಪು. | पिण्ड्ढि | पिंष्टम् | पिंष्ट |

पिष् + धि (ಪುಟ ೫೫, ನಿಯಮ ೧) = पिन्ष् + धि (ಪುಟ ೮೫, ನಿಯಮ ೧) = पिन्ष् + ढि (೧ನೇ ಪುಸ್ತಕ, ಪುಟ ೨೪, ಟಿಪ್ಪಣಿ ೧, ಉತ್ತರಭಾಗ) = पिन्ड् + ढि (ಪುಟ ೫೮, ನಿಯಮ ೫) = पिण्ड् + ढि (ಪುಟ ೬೧, ನಿಯಮ ೫).

रिच् (ಪ.) ತೆರವು ಮಾಡು, ರಚಿಸು.

| | | | | |
|---|---|---|---|---|
| ವರ್ತಮಾನ | ಪ್ರ. ಪು. | रिणक्ति | रिंक्तः | रिंचन्ति |

रिच् + ति = रिनच् + ति = रिणच् + ति (೧ನೇ ಪುಸ್ತಕ, ಪುಟ ೧೭, ಟಿಪ್ಪಣಿ ೧) = रिणक् + ति (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣಿ ೧) = रिणक्ति.

| | | | | |
|---|---|---|---|---|
| ಅನದ್ಯತನ. | ಪ್ರ. ಪು. | अरिणक्-ग् | अरिंक्ताम् | अरिंचन् |
| ಅಜ್ಞಾರ್ಥ | ಮ. ಪು. | रिङ्ग्धि | रिंक्तम् | रिंक्त |

भिद् (ಪ.) ಸೀಳು, ಒಡೆ.

| | | | | |
|---|---|---|---|---|
| ವರ್ತಮಾನ | ಪ್ರ. ಪು. | भिनत्ति | भिंत्तः | भिन्दन्ति |
| ಅನದ್ಯತನ. | ಪ್ರ. ಪು. | अभिनत्-द् | अभिंत्ताम् | अभिन्दन् |
| | ಮ. ಪು. | अभिनत्-द्, अभिनः | अभिंत्तम् | अभिंत्त |
| ಅಜ್ಞಾರ್ಥ | ಮ. ಪು. | भिंद्धि | भिंत्तम् | भिंत्त |

हिंस् (ಪ.) ಕೊಲ್ಲು.

| | | | | |
|---|---|---|---|---|
| ವರ್ತಮಾನ | ಪ್ರ. ಪು. | हिनंस्ति | हिंस्तः | हिंसन्ति |
| ಅನದ್ಯತನ. | ಪ್ರ. ಪು. | अहिनत्-द् | अहिंस्ताम् | अहिंसन् |
| | ಮ. ಪು | अहिनत्-द्, अहिनः | अहिंस्तम् | अहिंस्त |

अ+हिंस्+स्=अ+हिनस्+स्=अ+हिनस् (ಪುಟ ೮೫, ನಿಯಮ ೧)= अहिनत्-द् (ಪುಟ ೭೨, ನಿಯಮ ೪).

ಆಜ್ಞಾರ್ಥ ಮ. ಪು. ಏ. हिंस्+धि=हिं+धि (ಪುಟ ೪೧, ನಿಯಮ ಕ)=हिंधि.

| | | | | |
|---|---|---|---|---|
| ಆಜ್ಞಾರ್ಥ | ಮ. ಪು. | हिन्धि | हिंस्तम् | हिंस्त |

तृह् (ಪ.) ಕೊಲ್ಲು, ಕೊಂದುಹಾಕು.

| | | | | |
|---|---|---|---|---|
| ವರ್ತಮಾನ | ಪ್ರ. ಪು. | तृणेढि | तृण्ढः | तृंहन्ति |
| | ಮ. ಪು. | तृणेक्षि | तृण्ढः | तृण्ढ |
| | ಉ. ಪು. | तृणेह्मि | तृंह्वः | तृंह्मः |

ರೂಪಸಿದ್ಧಿವಿಚಾರ:—तृह्+ति=तृनेह्+ति (ಪುಟ ೮೬, ನಿಯಮ ೩)=तृणेह्+ति (೧ನೇ ಪುಸ್ತಕ, ಪುಟ ೧೭, ಟಿಪ್ಪಣಿ ೪)=तृणेढ्+ति (ಪುಟ ೫೭, ನಿಯಮ ಗ)=तृणेढ्+धि (ಪುಟ ೫೭, ನಿಯಮ ಘ) = तृणेढ्+ढि (೧ನೇ ಪುಸ್ತಕ, ಪುಟ ೨೪, ಟಿಪ್ಪಣಿ ೧, ಉತ್ತರ ಭಾಗ) =तृणे+ढि (ಪುಟ ೫೭, ನಿಯಮ ಜ)=तृणेढि. तृह्+तः तृन्ह्+तः (ಪುಟ ೮೫, ನಿಯಮ ೧) = तृण्ढ्+तः (ಪುಟ ೫೭, ನಿಯಮ ಗ) तृण्ढ्+धः (ಪುಟ ೫೭, ನಿಯಮ ಘ)=तृण्ढ्+ढः=तृन्+ढः (ಪುಟ ೫೭, ನಿಯಮ ಜ)=तृण्+ढः (೧ನೇ ಪುಸ್ತಕ, ಪುಟ ೧೭, ಟಿಪ್ಪಣಿ ೪) = तृण्ढः; तृह्+अन्ति=तृन्ह्+अन्ति=तृंहन्ति (ಪುಟ ೬೧, ನಿಯಮ ಜ).

| | | | |
|---|---|---|---|
| ಅನದ್ಯತನ. | अतृणेट्-ड् | अतृण्ढाम् | अतृंहन् |

दीनाय याचमानाय धनं ददतं मां मा रुन्द्धि पापमेव तस्मात्त्वामाश्रयेत् ।

किर्मीरस्य शरीरं चूर्णवदपिनड्भीमसेनः ।

रिपोः करिणां गण्डस्थलान्यभिन्दत वीराः ।

अद्यप्रभृतित्वां कोशागारे नियुनज्मि तदात्मनोऽधिकारेऽप्रमत्तो भव ।

तस्यां तवानुरागमस्माकं पुरो व्यर्थं किं व्यनक्षि किं तेन लभेथाः । तामेव गच्छ ।

अरण्ये केचित्पशवोऽन्यान्हिंसन्त्यतस्तान्हिंस्रान्ब्रुवन्ति ।

रेरे पान्था जाले निपतितोऽहम् । अत्रागत्य मे पाशांश्छिन्त्त ।

यत्किंचिल्लभसे तद्भुञ्जीथाः । अन्यस्य कस्यचिद्धनं मा गृध्य ।

न हिंस्यात्सर्वाणि भूतानीत्येतं विधिमक्षरशो जैना अनुसरन्ति ।

स्वगृहमागतमर्थिनं रघुः कियद्दास्यिष्यते त्वयेत्यन्वयुंक्त ।

रात्रौ नाभुञ्जि मह्यं किंचिद्भक्षयितुं देहि ।

वेत्ति सर्वाणि शास्त्राणि गर्वस्तस्य न विद्यते ।

विन्ते धर्मं सदा सद्भिस्तेषु पूजां च विन्दति ॥
वृणक्ति वृजिनैः सङ्गं वृक्ते च वृषलैः सह ।
वर्जत्यनार्जवोपेतैः स वर्जयति दुर्जनैः ॥
न संपृणक्ति कृपणैः संपृक्ते न पृथग्जनैः ।
संपर्चति सदाचारैः संपर्चयति पण्डितैः ॥
नियुंक्ते गुल्मपालान् स नियोजति नियोगिनः ॥
नियोजयत्यनीकस्थान् स्वयं चात्मनि युज्यते ॥
न हिनस्ति वृथा जन्तूंस्तृणान्यपि न हिंसति ।
तमेव हिंसयत्येकं यस्तदाज्ञां विलङ्घते ॥
खिद्यतेऽसौ न भृत्येषु याचकेषु न खिन्दति ।
खिन्त्ते तेष्वेव ये द्रव्यं दीयमानं न गृह्णते ॥
प्रणिंक्ते दक्षिणीयानां विप्राणां चरणौ च सः ।
यत्पादौ मुकुटज्योत्स्नाजलैर्नेनेक्ति राजकम् ॥
छिनत्ति संशयं शास्त्रे विदुषां सूक्तिभिस्सदा ।
छेदयत्यसिधाराभिर्विद्विषां मस्तकं च सः ॥
मनो नोद्विजते तस्य ददतोऽर्थमहर्निशम् ।
उद्विनक्ति तु संसारादसारात्तत्त्ववेदिनः ॥

केचिद्द्युम्नाय धावन्ति प्रद्युम्नाय च केचन ।
नोद्युंक्ते कोऽपि धर्माय सर्वाभिप्रेतहेतवे ॥
पीडाकरममित्राणां कर्तव्यमिति शक्रजित् ।
अब्रवीत् खड्गकृष्टश्च तस्या मूर्धानमच्छिनत्[1] ॥
तृणेह्मि देहमात्मीयं त्वं वाचं न ददासि चेत् ॥
कामान्दुग्धे विप्रकर्षत्यलक्ष्मीं कीर्तिं सूते दुष्कृतं या हिनस्ति ।
तां चाप्येतां मातरं मंगलानां धेनुं धीराः सूनृतां वाचमाहुः ॥

---

[1] ಸ್ವರದ ಮುಂದೆ ಛಕಾರ ಬರಲು, ನಡುವೆ ಚ್ ಆಗಮ ಬರುವದು. ಸ್ವರವು ಶಬ್ದಾಂತದಲ್ಲಿ ಅಥವಾ ಪದಾಂತದಲ್ಲಿ ಇದ್ದು ದೀರ್ಘವಾಗಿದ್ದರೆ, ಈ ಆಗಮವು ವಿಕಲ್ಪದಿಂದ ಬರುವದು. ಆದರೆ ನಿಷೇಧಾರ್ಥಕ मा ಮತ್ತು ಉಪಸರ್ಗ आ ಇವುಗಳ ಮುಂದೆ ಛ್ ಬರಲು, ಚಕಾರಾಗಮ ನಿತ್ಯವಾಗಿ ಬರುವದು. ಉದಾ: वृक्ष + छाया = वृक्षच्छाया; अ + छिनत् = अच्छिनत्; लक्ष्मी + छाया = लक्ष्मीच्छाया ಅಥವಾ लक्ष्मीछाया, आ + छादयति = आच्छादयति; मा + छिंद्धि = माच्छिंदि.

ಹರಿಯು ನನಗೆ ಅಡ್ಡಿಯ ಮಾಡದಿದ್ದರೆ (रुध्), ನಾನು ಮರದ ಕೊಂಬೆಯನ್ನು ಕಡಿಯುವೆನು (छिद्).

ಅವನು ಬೇನೆಯವನಾದ ತನ್ನ ತಮ್ಮನಿಗೆ ಕೊಡುವದಕ್ಕೋಸ್ಕರ ಔಷಧಗಳನ್ನು ಕುಟ್ಟಿದನು (क्षुद्).

ಬ್ರಾಹ್ಮಣಜಾತಿಯ ಅರಸರಲ್ಲಿ ಕಡೆಯವನಾದ ಬಾಜೀರಾಯನ ಸಂಗಡ ಹಲ ಜನರು ಬ್ರಾಹ್ಮಣರು ವಿಶ್ರಾಮಬಾಗದ ವಾಡೆಯಲ್ಲಿ ದಿನಾಲು ಉಣ್ಣುವರು (भुज्).

ಸುಟ್ಟರಗಾಳಿಯು ಮರಗಳನ್ನೂ ಮನೆಗಳನ್ನೂ ಮುರಿಯುತ್ತದೆ (भञ्ज्).

ನನ್ನ ದುಃಖವನ್ನು ನಾನು ಅವನೆದುರಿಗೆ ಪ್ರಕಟಿಸಲಾಗಿ (वि+अञ्ज्) ಅವನ ಅಂತಃಕರಣವು ಕರಗಿತು.

ಅವನನ್ನು ದಳವಾಯಿಯ ಕೆಲಸಕ್ಕೆ ಒಡೆಯರು (ತಾವು) ನೇಮಿಸಲಿ (नि+युज्); ಅವನು ಶೂರನೂ ಚತುರನೂ ಇರುತ್ತಾನೆ.

ನೀನು ನನಗೆ ಕಾಶಿಗೆ ಹೋಗುವದಕ್ಕೆ ಯಾಕೆ ಅಡ್ಡಿ ಮಾಡುತ್ತೀ (रुध्)?

ವಾಡಿಕೆಯಾಗಿ ಎಲ್ಲಿ ಯಾವಾಗ ಉಣ್ಣುತ್ತೀ (भुज्)?

ಹಿಂದು ದೇಶದಲ್ಲಿ ನಾವು (ನಮ್ಮ) ಕಾಳುಗಳನ್ನು ಕೈಯಿಂದ ಬೀಸುತ್ತೇವೆ (पिष्), ಇಂಗ್ಲಂಡದಲ್ಲಿ ಯಂತ್ರಗಳಿಂದ ಬೀಸುತ್ತಾರೆ.

ಮಂತ್ರಿಯ ಕೆಲಸಕ್ಕೆ ನಾನು ಯಾರನ್ನು ನೇಮಿಸಲಿ (नि+युज्)?

ಪಶುಜಾತಿಗಳ ಬೇರೆ ಬೇರೆ ವರ್ಗಗಳನ್ನು ನಾನು ಇನ್ನು ವಿವರ ಮಾಡಿ ಹೇಳುತ್ತೇನೆ (वि+शिष्).

ಅವನ ಘನತೆಯ ಆಶೆಯನ್ನೆಲ್ಲ ಮುರಿಯಬೇಡ (भञ्ज्).

ಯವನರು ಸಾಕೇತಕ್ಕೆ ಮುತ್ತಿಗೆ ಹಾಕಿದರು (रुध्).

---

## ಕೋಶ ೧೨.

### ೭ನೇ ಗಣದ ಧಾತುಗಳು.

अञ्ज् (ಪ.) ಪೂಸು, ಎಣ್ಣೀ ಹಚ್ಚು.

वि+अञ्ज् ಪ್ರಕಟ ಮಾಡು, ಬಹಿರಂಗಕ್ಕೆ ಇಡು.

इन्ध् (ಆ.) ಹೊತ್ತಿಸು, ಪ್ರಜ್ವಲಿಸು.

क्षुद् (ಪ. ಆ.) ಕುಟ್ಟು, ಜಜ್ಜು, ಪುಡಿ ಮಾಡು.

खिद् (ಆ.) ತ್ರಾಸಗೊಳ್ಳು, ಖತಿಗೊಳ್ಳು, ಸಿಟ್ಟಾಗು.

छिद् (ಪ. ಆ.) ಕೊಯ್ಯು, ಕಡಿ, ತುಂಡು ಮಾಡು.

तृह् (ಪ.) ಕೊಲ್ಲು, ನಾಶ ಮಾಡು.

पिष् (ಪ.) ಕುಟ್ಟು, ಹಿಟ್ಟು ಮಾಡು.

पृच् (सम् ಪೂರ್ವಕ, ಪ.) ಮುಟ್ಟು, ಸ್ಪರ್ಶ ಮಾಡು, ಸಂಗತಿ ಹಿಡಿ.

भञ्ज् (ಪ.) ಮುರಿ, ನಾಶ ಮಾಡು, ಕೆಡಿಸು.

भिद् (ಪ. ಆ.) ಸೀಳು, ಒಡೆ.
भुज् (ಪ.) ಭೋಗಿಸು, ಸುಖ ಪಡು.
भुज् (ಆ.) ತಿನ್ನು, ಉಣ್ಣು.
युज् (ಪ. ಆ.) ಕೂಡಿಸು, ಹತ್ತಿಕೊಳ್ಳು.
युज् (अनु ಪೂರ್ವಕ) ಕೇಳು, ಪ್ರಶ್ನೆಮಾಡು.
नि+युज् ನೇಮಿಸು.
उद्+युज् ಪ್ರಯತ್ನ ಮಾಡು, ಶ್ರಮ ಬಡು.
रिच् (ಪ. ಆ.) ಬರಿದು ಮಾಡು, ತೆರವು ಮಾಡು, ಬಿಡು.
रुध् (ಪ. ಆ.) ಅಡ್ಡಿ ಮಾಡು, ತಡೆ, ಮುತ್ತಿಗೆ ಹಾಕು.
विज् [उद् ಪೂರ್ವಕ (ಪ.)] ಅಂಜು, ನಡುಗು, ಬೇಸರಗೊಳ್ಳು.
विद् (ಆ.) ತರ್ಕಿಸು, ವಿವಾದಿಸು.
वृज् (ಪ.) ತಪ್ಪಿಸು, ದೂರಾಗು.
शिष् (ಪ.) ಹೆಸರಿಗೆ ತರು, ಹೆಸರಿಗೆ ಬರು.
वि+शिष् ವಿವರ ಮಾಡಿ ಹೇಳು, ವಿಂಗಡಿಸು.
हिंस् (ಪ.) ಕೊಲ್ಲು, ಧ್ವಂಸ ಮಾಡು.

---

अक्षरशः (ಅ.) ಅಕ್ಷರಗಳಿಗೆ ಸರಿಯಾಗಿ.
अगार (ನ.) ಮನೆ.
अद्यप्रभृति (ಅ.) (अद्य ಈ ಹೊತ್ತು, प्रभृति ಇಂದ) ಈ ಹೊತ್ತಿನಿಂದ, ಇನ್ನು ಮೇಲೆ.
अधिकार (ಪು.) ಉದ್ಯೋಗ, ಕೆಲಸ.
अनार्जवोपेत (ವಿ.) [आर्जव (ನ.) ಪ್ರಾಮಾಣಿಕತನ] ಅಪ್ರಾಮಾಣಿಕವಾದ, ಪ್ರಾಮಾಣಿಕತನವಿಲ್ಲದ.
अनीकस्थ (ಪು.) [अनीक (ನ.) ಸೇನೆ] ಸಿಪಾಯಿ, ಬಂಟ, ವೀರ.
अन्य (ನ.) ಎರಡನೆಯವ.
अप्रमत्त (ವಿ.) ಕಾಳಜಿಯುಳ್ಳ, ಎಚ್ಚರಿಕೆಯುಳ್ಳ.
अर्थिन् (ಪು.) ದೈನ್ಯದಿಂದ ಬೇಡುವವ, ವಿನಯದಿಂದ ಬೇಡುವವ.
अलक्ष्मी (ಸ್ತ್ರೀ.) ದುರ್ದೈವ, ದುರ್ಭಾಗ್ಯ, ಬಡತನ.
असार (ವಿ.) (सार ಸತ್ವ) ಹುರುಡಿಲ್ಲದ, ನಿಷ್ಪ್ರಯೋಜಕ.
असिधारा (ಸ್ತ್ರೀ.) ಕತ್ತಿಬಾಯಿ.
अहर्निशम् (ಅ.) ಹಗಲಿರುಳು.
आत्मीय (ವಿ.) ಸ್ವಂತ, ತನ್ನ.
काम (ಪು.) ಇಚ್ಛೆ, ಆಶೆ, ಲವಲವಿಕೆ.
कियत् (ವಿ.) ಎಷ್ಟು.
किर्मीर (ಪು.) ಒಬ್ಬ ರಾಕ್ಷಸನ ಹೆಸರು.
कृपण (ವಿ.) ಜೀನ, ಕೀಳ ಮನಸ್ಸಿನವ.
कृष् (೧ನೇ ಗ. ಪ.) ಎಳೆ, ಹಿರಿ.
विप्र+कृष् ಕೆಡಿಸು, ಕಡಿಮೆ ಮಾಡು, ವಂಚಿಸು, ಅಗಲಿಸು.
कोशागार (ನ.) ಬೊಕ್ಕಸದ ಸ್ಥಲ, ಭಾಂಡಾರಖಾನೆ.
खड्गकृष्ट (ವಿ.) ಹತ್ಯಾರ ಹಿರಿದವ.
खिद् (೪ನೇ ಗ. ಆ. ೬ನೇ ಪ.) ಖತಿಗೊಳ್ಳು, ಸಿಟ್ಟಾಗು, ಬೇಸರ ಪಡು.
गण्डस्थल (ನ.) ಆನೆಗಳ ಮೆಣಕು, ಕಣತಲೆ.
गुल्मपाल (ಪು.) [गुल्म (ಪು.) ಕೋಟೆ] ಕಿಲ್ಲೆದಾರ, ಕೋಟೆಯ ರಕ್ಷಕ.
गृध् (೪ನೇ ಗ. ಪ.) ಬಯಸು, ಆಶಿಸು, ಲೋಭಿಸು.
चूर्ण (ಪು. ನ.) ಹುಡಿ, ಹಿಟ್ಟು; चूर्णवत् ಹುಡಿಯಂತೆ.
चेत् (ಅ.) ಆದರೆ, ಪಕ್ಷದಲ್ಲಿ.
छिद् (೧೦ನೇ ಗ.) ಕಡಿ, ತುಂಡು ಮಾಡು.
जैन (ಪು.) ಜಿನ ಮತದವ.
तत्ववेदिन् (ವಿ.) ತತ್ವಜ್ಞಾನವುಳ್ಳ.
दक्षिणीय (ವಿ.) ದಕ್ಷಿಣೆಯನ್ನು ತೆಗೆದುಕೊಳ್ಳಲಿಕ್ಕೆ ಯೋಗ್ಯನಾದವ.

दीन (ಪು.) ಬಡ.

दुष्कृत (ನ.) ಕೆಟ್ಟ ಕೆಲಸ, ನೀಚ ಕೆಲಸ, ಪಾಪ.

द्युम्न (ನ.) ದ್ರವ್ಯ, ಹಣ.

निञ्ज् (೨ನೇ ಗ. ಆ., प्र ಪೂರ್ವಕ) ತೊಳೆ, ತೊಳಕೊಳ್ಳು.

नियोगिन् (ಪು.) ಮಂತ್ರಿ, ಕಾರಭಾರಿ.

पान्थ (ಪು.) ಹಾದಿಕಾರ.

पाश (ಪು.) ಬಲೆ.

पीडाकर (ವಿ.) ದುಃಖದಾಯಕ, ತೊಂದರೆ ಕೊಡುವ.

पृच् (सम् ಪೂರ್ವಕ, ೧ನೇ ಗ. ಪ., ೨ನೇ ಗ. ಆ., ೧೦ನೇ ಗ.) ಸ್ಪರ್ಶಮಾಡು, ಮುಟ್ಟು, ಸಂಗತಿ ಹಿಡಿ.

पृथग्जन (ಪು.) ಕೀಳು ಮನುಷ್ಯ, ನೀಚ.

प्रद्युम्न (ಪು.) ಕಾಮ.

मंगल (ನ.) ಕಲ್ಯಾಣ, ಊರ್ಜಿತ ಸ್ಥಿತಿ, ಶುಭ ಕಾರ್ಯ.

मस्तक (ಪು. ನ.) ತಲೆ.

मुकुटज्योत्स्नाजल (ನ.) [मुकुट (ನ.) ಕಿರೀಟ] ಕಿರೀಟಗಳ ಕಾಂತಿ ಎಂಬ ನೀರು.

मूर्धन् (ಪು.) ತಲೆ, ಶಿರಸ್ಸು.

यत्पाद (ಪು.) ಯಾವನ ಕಾಲು.

युज् (೪ನೇ ಗ. ಆ.) ಮನೋನಿಗ್ರಹ ಮಾಡು.

युज् (೧ನೇ ಗ. ಪ., ೧೦ನೇ ಗ) ಕೂಡಿಸು. ಜೋಡಿಸು.

नि+युज् ನೇಮಿಸು.

राजक (ನ.) ಅರಸರ ಸಮೂಹ, ಯಾವತ್ತು ಅರಸರು.

विज् (उद् ಪೂರ್ವಕ, ೧ನೇ ಗ. ಆ.) ಅಂಜು ನಡುಗು, ಬೇಸರಗೊಳ್ಳು.

विप्र (ಪು.) ಬ್ರಾಹ್ಮಣ.

वृज् (೧ನೇ ಗ. ಪ., ೨ನೇ ಗ. ಆ., ೧೦ನೇ ಗ.) ತಪ್ಪಿಸು, ದೂರಾಗು, ಬಿಡು.

वृजिन (ಪು.) ದುರುಳ, ದುರಾತ್ಮ.

वृथा (ಅ.) ವ್ಯರ್ಥವಾಗಿ, ಉಪಯೋಗವಿಲ್ಲದೆ, ಬರಿದೆ.

वृषल (ಪು.) ಶೂದ್ರ, ಪಾಪಿ, ಚಾಂಡಾಲ, ದುರುಳ.

शक्रजित् (ಪು.) ರಾವಣನ ಮಗ, ಇಂದ್ರನನ್ನು ಗೆದ್ದವ.

श्रि (आ ಪೂರ್ವಕ, ೧ನೇ ಗ. ಪ., ಆ.) ಅಂಟಿಕೊಳ್ಳು, ಆಶ್ರಯಿಸು.

सदाचार (ವಿ.) [सत् (ವಿ.), आचार (ಪು.)] ಒಳ್ಳೆ ನಡತೆಯುಳ್ಳ.

सर्वाभिप्रेतहेतु (ಪು.) अभि+प्र+इ ಇದರ ಕರ್ಮಾರ್ಥಕ ಭೂ. ಕೃ., अभिप्रेत ಅಂದರೆ ಅಪೇಕ್ಷಿಸಿದ] ಅಪೇಕ್ಷಿಸಿದ ಯಾವತ್ತು ವಸ್ತುಗಳ ಮೂಲ.

सूनृत (ವಿ.) ಮನೋಹರ, ಹಿತಕರ, ಇಂಪಾದ, ಸತ್ಯತೆಯುಳ್ಳ.

सूक्ति (ಸ್ತ್ರೀ.) ಸವಿ ಮಾತು, ಸರಿಯಾದ ವಿವರ.

हिंस् (೧ನೇ ಗ. ಪ., ೧೦ನೇ ಗ.) ಕೊಲ್ಲು, ನಾಶಮಾಡು.

हिंस्र (ವಿ.) ಕೊಲ್ಲುವ, ಕ್ರೂರ, ಹಿಂಸಕ, ಮಾಂಸಭಕ್ಷಕ.

---

ಬ್ರಾಹ್ಮಣಜಾತಿಯ ಅರಸು ब्राह्मणराज (ಪು.)

ಕೊಂಬೆ शाखा (ಸ್ತ್ರೀ.).

ಪಶು मृग (ಪು.).

ಆಲೋಚನೆ ಹೇಳುವವ, ಮಂತ್ರಿ धीसचिव (ಪು.), मंत्रिन् (ಪು.).

ತರತರದ विविध (ವಿ.).

ಬೇನೆಯುಳ್ಳ रुग्ण (ವಿ.).

ಔಷಧಕ್ಕೆ ಬರುವ ಮೂಲಿಕೆ औषधि (ಸ್ತ್ರೀ.).

ಕೆಲಸ, ಉದ್ಯೋಗ, ಅಧಿಕಾರ अधिकार (ಪು.).

ಅಂತಃಕರಣ, ಕನಿಕರ दया (ಸ್ತ್ರೀ.).

ಅವನ ಅಂತಃಕರಣವು ಕರಗಿತು स दयार्द्रो ऽभवत्.
ಹುದ್ದೆ पद (ನ.).
ಸಾಕೇತ साकेत (ನ.).
ಜಾಣ चतुर (ವಿ.), कुशल (ವಿ.).
ವಾಡಿಕೆಯಾಗಿ प्रायेण (ಅ.), प्रायः (ಅ.).
ವಿಶ್ರಾಮವಾಡೆ विश्रामप्रासाद (ಪು.).
ಸುಟ್ಟರಗಾಳಿ चक्रवात (ಪು.), झंझावात (ಪು.).

~~~~~~~~~~

## ೧೩ನೇ ಪಾಠ.

### ವಿಕರಣರಹಿತವಾದ ಕಾಲಾರ್ಥಗಳು.

#### ಪೂರ್ಣಭೂತ.

ಸಾಮಾನ್ಯ ನಿಯಮಗಳು:—೧. (ಒಂದು ಕಾಗುಣಿತಾಕ್ಷರವುಳ್ಳಂಥ) ಕೆಲವು ಸಿದ್ಧ[1] ಧಾತುಗಳ ಮುಂದೆ य್ ಹೊರ್ತಾಗಿ ಬೇರೆ ವ್ಯಂಜನಗಳು ಆದಿಯಲ್ಲುಳ್ಳ ಆರ್ಧಧಾತುಕ ಪ್ರತ್ಯಯಗಳು ಬರಲಾಗಿ ಆ ಪ್ರತ್ಯಯಗಳ ಪೂರ್ವದಲ್ಲಿ इ ಆಗಮವು ಬರುತ್ತದೆ. ಈ ಧಾತುಗಳಿಗೆ सेट् (स+इट्) ಧಾತುಗಳೆಂತಲೂ ಉಳಿದವುಗಳಿಗೆ अनिट् (अन्+इट्) ಧಾತುಗಳೆಂತಲೂ ಹೆಸರುಗಳುಂಟು. सेट् ಧಾತುಗಳು अनिट् ಧಾತುಗಳಿಗಿಂತ ಬಹಳ ಉಂಟು. ಆದರೆ अनिट्[2] ಧಾತುಗಳು ಹೆಚ್ಚು ಮಹತ್ವವುಳ್ಳವುಗಳೂ ಬಹಳವಾಗಿ ಪ್ರಯೋಗಿಸಲ್ಪಡುವಂಥವುಗಳೂ ಇರುವವು.

---

[1] ಸಂಸ್ಕೃತ ಧಾತುಗಳಲ್ಲಿ ಸಿದ್ಧ-ಸಾಧಿತವೆಂಬ ಎರಡು ವರ್ಗಗಳುಂಟು. ಸಾಧಿತಧಾತುಗಳು ಅಂದರೆ ೧೦ನೇ ಗಣದ ಧಾತುಗಳು, ಪ್ರಯೋಜ್ಯಧಾತುಗಳು, ನಾಮಧಾತುಗಳು सेट् ಉಂಟು. ಇದೇ ಮೇರೆಗೆ ಒಂದಕ್ಕಿಂತ ಹೆಚ್ಚು ಕಾಗುಣಿತಾಕ್ಷರಗಳುಳ್ಳ ಸಿದ್ಧ ಧಾತುಗಳೂ सेट् ಇರುವವು. ಸಾರಾಂಶ ಒಂದಕ್ಕಿಂತ ಹೆಚ್ಚು ಕಾಗುಣಿತಾಕ್ಷರಗಳುಳ್ಳ ಸಿದ್ಧ ಧಾತುಗಳ ಮತ್ತು ಯಾವತ್ತು ಸಾಧಿತ ಧಾತುಗಳ ಮುಂದೆ य್ದ ಹೊರ್ತು ಬೇರೆ ವ್ಯಂಜನಗಳು ಆದಿಯಲ್ಲುಳ್ಳಂಥ ಆರ್ಧಧಾತುಕ ಪ್ರತ್ಯಯಗಳು ಬರಲಾಗಿ ಆ ಪ್ರತ್ಯಯಗಳ ಪೂರ್ವದಲ್ಲಿ इ ಆಗಮವು ಬರುತ್ತದೆ.

[2] ಈ ಕೆಳಗಿನ ಶ್ಲೋಕಗಳಲ್ಲಿ सेट्, अनिट् ಧಾತುಗಳು ಬೇರೆಬೇರೆಯಾಗಿ ಹೇಳಲ್ಪಟ್ಟವೆ. ಅವುಗಳನ್ನು ವಿದ್ಯಾರ್ಥಿಗಳು ಪಾಠ ಮಾಡತಕ್ಕದ್ದು. ಧಾತುಗಳ ಉದ್ದುದ್ದ ಪಟ್ಟಿಗಳನ್ನು ನೋಡಿಕೊಂಡು ಧ್ಯಾನದಲ್ಲಿಡುವದಕ್ಕಿಂತ ಈ ಎರಡು ಶ್ಲೋಕಗಳನ್ನು ಧ್ಯಾನದಲ್ಲಿಡುವದು ಸುಲಭವಾಗಿರುವದು; ऊदृदन्तैर्यौतिरुक्ष्णुशीङ्स्नुनुक्षुश्विडीङ्श्रिभिः । वृङ्वृञ्भ्यां च विनैकाचोऽजन्तेषु निहताः स्मृताः ॥ ಅಂದರೆ ಊಕಾರಾಂತ ಋಕಾರಾಂತ ಧಾತುಗಳೂ यु, रु, क्ष्णु, शी, स्नु, नु, क्षु, श्वि, डी, श्रि, वृ (೯ನೇ ಗ. ಆ.), वृ (೫ನೇ ಗ. ಪ.) ಧಾತುಗಳೂ ಹೊರ್ತಾಗಿ ಉಳಿದ ಒಂದು ಕಾಗುಣಿತಾಕ್ಷರವುಳ್ಳ ಸ್ವರಾಂತ ಧಾತುಗಳೆಲ್ಲ अनिट् ಧಾತುಗಳಾಗುತ್ತವೆ.
~~~~~~~~~~

೨. ಪೂರ್ಣಭೂತಕಾಲದ ಪ್ರತ್ಯಯಗಳು ಯಾವವಂದರೆ:

ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अ | अतुस् | उस् |
| ಮ. ಪು. | थ | अथुस् | अ |
| ಉ. ಪು. | अ | व | म |

೩. ಇವುಗಳಲ್ಲಿ इ ಆಗಮ ಬರುವಂಥ थ, व, म ಈ ಮೂರೇ ಪ್ರತ್ಯಯಗಳುಂಟು.

(ಅ) ಆದರೆ कृ, सृ, भृ, वृ, स्तु, द्रु, स्रु, श्रु ಧಾತುಗಳಿಗೆ ಈ ಆಗಮವು ಬರುವದಿಲ್ಲ.

(ಬ) ಉಳಿದ ಯಾವತ್ತು ಧಾತುಗಳಿಗೆ थ, व, म ಪ್ರತ್ಯಯಗಳ ಪೂರ್ವದಲ್ಲಿ इ ಆಗಮವು ನಿತ್ಯವಾಗಿ ಬರುವದು.

---

शक्लृ पच्, मुचि रिच् वच् विच् सिच् प्रच्छि त्यज् निजिर् भजः । भञ्ज् भुज् भ्रस्ज् मस्जि यज् युज् रुज् रञ्ज् विजिर् स्वञ्जि सञ्ज् सृजः ॥ अद् क्षुद् खिद् छिद् तुदि नुदः पद्य भिद् विद्यतिर् विनद् । शद् सदी स्विद्यतिः स्कन्दि हदी क्रुध् क्षुधि बुध्यती । बन्धिर् युधि रुधी राधि व्यध् शुधः साधि सिध्यती ॥ मन्य हन् आप् क्षिप् छुपि तप् तिपस्तृप्याति दृप्यती ॥ लिप् लुप् वप् शप् स्वप् सृपि यभ् रभ् लभ् गम् नम् यमो रमिः ॥ क्रुशिर् दंशि दिशी दृश् मृश् रिश् रुश् लिश् विश् स्पृशः कृषिः ॥ त्विष् तुष् द्विष् दुष् पुष्य पिष् विष् शिष् शुष् श्लिष्यतयो घसिः । वसतिर् दह् दिहि दुहो नह् मिह् रुह् लिह् वहिस्तथा । अनुदात्ता हलन्तेषु धातवो ह्यधिकम् शतम् ॥ १ ॥

ಈ ಎರಡೂ ಶ್ಲೋಕಗಳೊಳಗಿನ ಧಾತುಗಳೆಲ್ಲ अनुदात्त ಅಂದರೆ अनिट् ಧಾತುಗಳುಂಟು. ಈ ವ್ಯಂಜನಾಂತ ಧಾತುಗಳಿಗೆ ಕೆಲಕೆಲವು ಕಡೆಯಲ್ಲಿ ವೃತ್ತಪೂರ್ತಿಯಾಗಿ इकार ಸೇರಿಸಿರುತ್ತದೆ. ಕೆಲಕೆಲವು ಕಡೆಯಲ್ಲಿ ಅವುಗಳ ಪ್ರ. ಪುರುಷೈಕವಚನದ ರೂಪಗಳನ್ನು ಬರೆದಿರುತ್ತದೆ.

ಈ ಎರಡು ಶ್ಲೋಕಗಳಲ್ಲಿ ಹೇಳಿದ ಅನಿಟ್ (अनिट्) ಧಾತುಗಳ ಮುಂದೆ ಆರ್ಧಧಾತುಕ ಪ್ರತ್ಯಯಗಳು ಬರಲಾಗಿ ವಾಡಿಕೆಯಾಗಿ इकारಾಗಮವು ಬರುವದಿಲ್ಲ. ಆದರೆ ಪ್ರಸಂಗೋಪಾತ್ತಾಗಿ ಈ सेट् अनिट्ಗಳಲ್ಲಿ ಕೆಲವು ಹೆಚ್ಚುಕಡಿಮೆಯಾಗುವದುಂಟು. ಅದನ್ನು ಆಯಾ ಪಾಠದಲ್ಲಿ ಎವರಿಸುವೆವು.

विज् (೭ನೇ ಗ.), विद् (೪ನೇ ೭ನೇ ಗ.), वुध् (೪ನೇ ಗ.), मन् (೪ನೇ ಗ.), वस् (೧ನೇ ಗ.), दुह् (೨ನೇ ಗ.) ಧಾತುಗಳು ಮಾತ್ರ अनिट्; ಬೇರೆ ಗಣಕ್ಕೆ ಸೇರಿದ ಇವೇ ಧಾತುಗಳು सेट्ಇರುವವು.

ಧಾತುಗಳು सेट् ಅಥವಾ अनिट् ಎಂಬದನ್ನು ತಿಳುಕೊಳ್ಳಬೇಕಾದರೆ, ಧಾತುವು ಸ್ವರಾಂತ ಎದ್ದರೆ ೧ನೇ ಶ್ಲೋಕವನ್ನೂ, ವ್ಯಂಜನಾಂತಎದ್ದರೆ ೨ನೇ ಶ್ಲೋಕವನ್ನೂ ನೋಡಿ ತಿಳುಕೊಳ್ಳಬೇಕು.

(ಕ) ऋಕಾರಾಂತ अनिट् ಧಾತುಗಳ ಮುಂದೆ थ ಪ್ರತ್ಯಯ ಬರಲಾಗಿ ಅದರ ಪೂರ್ವದಲ್ಲಿ इ ಆಗಮ ಬರುವದಿಲ್ಲ.

(ಡ) ಆದರೆ ऋ ದ ಹೊರ್ತು ಉಳಿದ ಸ್ವರಾಂತ ಅಥವಾ अ ಸ್ವರವುಳ್ಳ अनिट् ಧಾತುಗಳ ಮುಂದೆ थ ಬರಲು ಅದರ ಪೂರ್ವದಲ್ಲಿ इಕಾರಾಗಮವು ವಿಕಲ್ಪವಾಗಿ ಬರುವದು.

ಆತ್ಮನೇಪದಪ್ರತ್ಯಯಗಳು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | ए | आते | इरे |
| ಮ. ಪು. | से | आथे | ध्वे |
| ಉ. ಪು. | ए | वहे | महे |

೪. ಇವುಗಳಲ್ಲಿ, ಪ್ರಥಮ ಪುರುಷದ ಏಕವಚನ ಬಹುವಚನ ಪ್ರತ್ಯಯಗಳ ಹೊರ್ತಾಗಿ ಉಳಿದ ಪ್ರತ್ಯಯಗಳೆಲ್ಲ ೨ನೇ ವರ್ಗದ ಧಾತುಗಳ ವರ್ತಮಾನ ಕಾಲದ ಪ್ರತ್ಯಯಗಳೇ ಉಂಟೆಂಬದು ಸಹಜವು. इಕಾರಾಗಮ ಬಾರದಂಥ ಪ್ರಸಂಗದಲ್ಲಿ ध्वे ಪ್ರತ್ಯಯದ ಹಿಂದೆ अ, आ ಸ್ವರಗಳ ಹೊರ್ತು ಉಳಿದ ಯಾವದೊಂದು ಸ್ವರವಿದ್ದರೆ, ಅದಕ್ಕೆ ढ्वे ಆದೇಶವಾಗುವದು. ಈ ಆದೇಶವು इಕಾರಾಗಮ ಬಂದಾಗ ವಿಕಲ್ಪದಿಂದ ಆಗುವದು, ಆದರೆ ಆ ಆಗಮದ ಪೂರ್ವದಲ್ಲಿ य्, र्, ल्, व्, ह्ಗಳಲ್ಲಿ ಯಾವದೊಂದು ವರ್ಣವಿರಲಿಕ್ಕೇ ಬೇಕು.

೫. ಮೇಲೆ ಹೇಳಿದ ೮ ಧಾತುಗಳು ಹೊರ್ತಾಗಿ ಉಳಿದ ಧಾತುಗಳ ಮುಂದೆ से, ध्वे, वहे, महे ಪ್ರತ್ಯಯಗಳು ಬರಲಾಗಿ इಕಾರಾಗಮವು ಬರುತ್ತದೆ.

೬. ವಿಕರಣರಹಿತವಾದ ಕಾಲಾರ್ಥಗಳಲ್ಲಿ ವಿಕಲ್ಪವಾಗಿ सेट् ಇರುವ गुप्, त्रप्, सिध् (೧ನೇ ಗ. ಉತ್ತಮ ಫಲ ಕೊಡು, ಆಯಕಟ್ಟು ಮಾಡು, ಸುಕ್ರಮಕ್ಕೆ ತರು), क्षम्[1], मृज्, क्लिद्, अञ्ज्. स्यन्द्. क्लृप्, गुह्, गाह्, रध्, नश्, तृप्, दृप्, मुह्, स्नुह्, स्निह्, अश् (ವ್ಯಾಪಿಸು) ಮುಂತಾದ ಧಾತುಗಳು ಪೂರ್ಣ ಭೂತಕಾಲದಲ್ಲಿ ಸಹ ವಿಕಲ್ಪವಾಗಿ सेट्, ಅಂದರೆ वेट्, ಇರುತ್ತವೆ. स्वृ[2], सू, धू ಧಾತುಗಳು

---

[1] ಈ ಧಾತುವಿಗೆ इ ಆಗಮವು ಬಾರದಿದ್ದಲ್ಲಿ ಇದರ ಉ. ಪುರುಷದ ದ್ವಿಬಹುವಚನಗಳ ರೂಪಗಳು चक्षण्वहे, चक्षण्महे ಎಂದು ಆಗುತ್ತವೆ, ಅಂದರೆ म् ಹೋಗಿ ण् ಬರುತ್ತದೆ. ಈ ಸಂಬಂಧದಿಂದ ಇರುವ ನಿಯಮವೇನಂದರೆ—व्, मಕಾರಗಳ ಪೂರ್ವದಲ್ಲಿ ಬರುವ ಧಾತುಗಳ ಅಂತ್ಯ म्ದ ಬದಲಾಗಿ न् ಬರುವದು.

[2] ಎರಡನೇ ಭವಿಷ್ಯತ್ಕಾಲದಲ್ಲಿಯೂ ಸಂಕೇತಾರ್ಥದಲ್ಲಿಯೂ स्वृ ಧಾತುವು ನಿತ್ಯವಾಗಿ सेट् ಇರುವದು.

चेत् ಇದ್ದಾಗ್ಯೂ ಅವುಗಳ ಮುಂದೆ थದ ಹೊರ್ತು ಉಳಿದ ಪ್ರತ್ಯಯಗಳು ಬರಲಾಗಿ इ ಆಗಮವು ನಿತ್ಯವಾಗಿ ಬರುತ್ತದೆ.

೭. ಈ ಕಾಲದಲ್ಲಿ ಅಂಗವನ್ನು ಸಿದ್ಧ ಮಾಡುವ ಕ್ರಮವು—೧೧ನೇ ಪಾಠದಲ್ಲಿ ಹೇಳಿದ ನಿಯಮಗಳನ್ನನುಸರಿಸಿ ಧಾತುವಿನ ಆದ್ಯ ಕಾಗುಣಿತಾಕ್ಷರಕ್ಕೆ ದ್ವಿತ್ವ ಬರುತ್ತದೆ. ಧಾತುವು ಸ್ವರಾದಿಯಿದ್ದರೆ, ಆದ್ಯಸ್ವರಕ್ಕೊಂದಕ್ಕೆ ದ್ವಿತ್ವ ಬರುತ್ತದೆ.

೮. ಅಭ್ಯಾಸದ इ, उಕಾರಗಳಿಗೆ ಅಸಮಸ್ವರವು ಪರವಾಗಲಾಗಿ, ಕ್ರಮದಿಂದ इय्, उव् ಆದೇಶಗಳು ಆಗುತ್ತವೆ; ಗುಣ ಅಥವಾ ವೃದ್ಧಿಯಾಗದೆ ಸಮಸ್ವರಗಳು ಉಳಿದಲ್ಲಿ, ಸವರ್ಣದೀರ್ಘಸಂಧಿಯಿಂದ ಕ್ರಮವಾಗಿ ई, ऊಕಾರಗಳಾಗುತ್ತವೆ. इ ಧಾತುವಿನ ಅಭ್ಯಾಸದ इಕಾರವು ಪೂರ್ಣಭೂತದ ದುರ್ಬಲಪ್ರತ್ಯಯಗಳು ಮುಂದೆ ಬರಲು ದೀರ್ಘವಾಗುತ್ತದೆ.

ಈ ನಿಯಮದಿಂದ उष् ಧಾತುವಿಗೆ ದ್ವಿತ್ವವಾಗಿ उउष् (ನಿಯಮ ೭) ಆಗುತ್ತದೆ; ಅದಕ್ಕೆ ಮುಂದಿನ ೯ನೇ ನಿಯಮದ ಪ್ರಕಾರ उओष्ವಾಗಿ, ೮ನೇ ನಿಯಮದ ಪ್ರಕಾರ उवोष् ಎಂಬ ರೂಪ ಸಿದ್ಧವಾಗುತ್ತದೆ. ಅದೇ ಮೇರೆಗೆ इष् ಧಾತುವಿನ इइष्-इएष इयेष् ಎಂಬ ರೂಪವಾಗುತ್ತದೆ. ದುರ್ಬಲಪ್ರತ್ಯಯಗಳು ಪರವಾಗಲಾಗಿ ಗುಣವಾಗದೆ ಅಭ್ಯಾಸದ ಮುಂದಿನ ಸ್ವರವೂ ಅಭ್ಯಾಸದ ಸ್ವರವೂ ಸಮವಾದ ಕಾರಣ ಸವರ್ಣದೀರ್ಘಸಂಧಿಯಾಗುತ್ತದೆ. ಉದಾ: उष्-उउष्= ऊषुः; इष्-इइष्=ईषुः इ-इइ-ईइ (ನಿಯಮ ೮) ಆಗುವದು. ಈ ईइ ಅಂಗದ ಅಂತ್ಯ इಕಾರಕ್ಕೆ य् ಆದೇಶ ಬರುವದು (ಪುಟ ೪೪, ನಿಯಮ ೧೦). ಅದಕ್ಕೆ अतुः, उः ಪ್ರತ್ಯಯಗಳು ಹತ್ತಿ ईयतुः, ईयुः ಎಂಬ ರೂಪಗಳಾಗುತ್ತವೆ.

೯. ಈ ಕಾಲದಲ್ಲಿ ಪರಸ್ಮೈಪದೈಕವಚನಪ್ರತ್ಯಯಗಳು ಸಬಲ, ಉಳಿದ ಪರಸ್ಮೈಪದಪ್ರತ್ಯಯಗಳೂ ಯಾವತ್ತೂ ಆತ್ಮನೇಪದಪ್ರತ್ಯಯಗಳೂ ದುರ್ಬಲ ಇರುತ್ತವೆ.

(ಅ) ಸಬಲಪ್ರತ್ಯಯಗಳು ಪರವಾಗಲಾಗಿ ಅಂಗದ ಉಪಾಂತ್ಯ ಹ್ರಸ್ವ ಸ್ವರಕ್ಕೆ ಗುಣವಾಗುವದು.

(ಬ) ಪರಸ್ಮೈಪದಪ್ರಥಮಪುರುಷೈಕವಚನದ ಪ್ರತ್ಯಯವು ಪರವಾಗಲು ಅಂಗದ ಅಂತ್ಯ ಸ್ವರಕ್ಕೂ ಉಪಾಂತ್ಯ अಕಾರಕ್ಕೂ ವೃದ್ಧಿಯಾಗುವದು. ಪರಸ್ಮೈಪದ ಉತ್ತಮಪುರುಷೈಕವಚನಪ್ರತ್ಯಯವು ಪರವಾಗಲು ವೃದ್ಧಿಯು ವಿಕಲ್ಪದಿಂದ ಆಗುವದು.

(ಕ) ಪರಸ್ಮೈಪದ ಮಧ್ಯಮಪುರುಷೈಕವಚನಪ್ರತ್ಯಯಗಳು ಪರವಾಗಲು ಅಂಗದ ಅಂತ್ಯಸ್ವರಕ್ಕೆ ಗುಣವಾಗುವದು. ಉಪಾಂತ್ಯ अಕಾರವು ಹಾಗೇ ಉಳಿಯುವದು, ಅಂದರೆ ವಿಕಾರ ಹೊಂದುವದಿಲ್ಲ.

### बुध्.

| | परस्मैपद. ಏ. | ದ್ವಿ. | ಬಹು. | ಆತ್ಮನೇಪದ. ಏ. | ದ್ವಿ. | ಬಹು. |
|---|---|---|---|---|---|---|
| ಪ್ರ. ಪು. | बुबोध | बुबुधतुः | बुबुधुः | बुबुधे | बुबुधाते | बुबुधिरे |
| ಮ. ಪು. | बुबोधिथ | बुबुधथुः | बुबुध | बुबुधिषे | बुबुधाथे | बुबुधिध्वे |
| ಉ. ಪು. | बुबोध | बुबुधिव | बुबुधिम | बुबुधे | बुबुधिवहे | बुबुधिमहे |

बुध्-बुबुध् (ಪುಟ ೯೭, ನಿಯಮ ೭)–बुबोध् (ಪುಟ ೯೭, ನಿಯಮ ೯ ಅ)–बुबोध; बुबुधिव (ಪುಟ ೯೫, ನಿಯಮ ೩ ಬ ನೋಡು).

### कृ ಮಾಡು.

#### ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | चकार | चक्रतुः | चक्रुः |
| ಮ. ಪು. | चकर्थ | चक्रथुः | चक्र |
| ಉ. ಪು. | चकार–चकर | चकृव | चकृम |

ರೂಪಸಿದ್ಧಿವಿಚಾರ:— कृ–कृकृ (ಪಾಠ ೧೧, ನಿಯಮ ೨ ಬ)–चकृ (ಪಾಠ ೧೧, ನಿಯಮ ೨ ಬ ಹಾಗು ಅದೇ ಪಾಠದ ನಿಯಮ ೨ ಇ)–चकर–चकार (ಪುಟ ೯೭, ನಿಯಮ ೯ ಬ); चकृव (ಪುಟ ೯೫, ನಿಯಮ ೩ ಅ); चकर्थ (ಪುಟ ೯೭, ನಿಯಮ ೯ ಅ).

#### ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | चक्रे | चक्राते | चक्रिरे |
| ಮ. ಪು. | चकृषे | चक्राथे | चकृढ्वे |
| ಉ. ಪು. | चक्रे | चकृवहे | चकृमहे |

ರೂಪಸಿದ್ಧಿವಿಚಾರ: कृ–कृकृ–चकृ; चकृ + ध्वे = चकृढ्वे (ಪುಟ ೯೬, ನಿಯಮ ೪).

### नी ಒಯ್ಯು, ನಡಿಸು.

#### ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | निनाय | निन्यतुः | निन्युः |
| ಮ. ಪು. | निनयिथ<br>निनेथ | निन्यथुः | निन्य |
| ಉ. ಪು. | निनाय<br>निनय | निन्यिव | निन्यिम |

ರೂಪಸಿದ್ಧಿವಿಚಾರ: नी-नीनी (ಪುಟ ೯೭, ನಿಯಮ ೬); निनी (ಪಾಠ ೧೧, ನಿಯಮ ೨ ಇ); निनै (ಪುಟ ೯೭, ನಿಯಮ ೯ ಬ); निनै + अ = निनाय (ಪ್ರ. ಪು. ಏಕವಚನ); निनी + अतुः = निन्यतुः (ಪುಟ ೭೮, ನಿಯಮ ಅ).

निनी + थ = निने + इथ ಅಥವಾ थ = निनयिथ ಅಥವಾ निनेथ (ಪುಟ ೯೬, ನಿಯಮ ೩ ಡ ಮತ್ತು ಪುಟ ೯೭, ನಿಯಮ ೯ ಕ ನೋಡು.

ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | निन्ये | निन्याते | निन्यिरे |
| ಮ. ಪು. | निन्यिषे | निन्याथे | निन्यिध्वे-ढ्वे |

निनी + ध्वे = निनी + इध्वे (ಪುಟ ೯೪, ನಿಯಮ ೧) = निन्य् + इध्वे (ಪುಟ ೭೮, ನಿ. ೯ ಅ) ಅಥವಾ निन्य् + इढ्वे (ಪುಟ ೯೬, ನಿಯಮ ೪) = निन्यिध्वे ಅಥವಾ निन्यिढ्वे.

| | | | |
|---|---|---|---|
| ಉ. ಪು. | निन्ये | निन्यिवहे | निन्यिमहे |

गद् ಮಾತಾಡು, ಹೇಳು.

ಪ್ರ. ಪು. जगाद जगदतुः जगदुः (ಇತ್ಯಾದಿ).

೧೦. ಋಕಾರಾಂತ ಧಾತುಗಳಲ್ಲಿ ಋಕಾರದ ಹಿಂದೆ ಸಂಯುಕ್ತವ್ಯಂಜನವಿದ್ದರೆ, ಅದಕ್ಕೂ ೠಕಾರಾಂತ ಧಾತುಗಳ ೠಕಾರಕ್ಕೂ ಜಾಗೃ ಮತ್ತು ಋ ಧಾತುಗಳ ಅಂತ್ಯ ಋಕಾರಕ್ಕೂ ದುರ್ಬಲಪ್ರತ್ಯಯಗಳು ಪರವಾದಾಗ್ಯೂ, ಗುಣ (ಅಂದರೆ अर्) ಆಗುವದು. शॄ, दॄ, पॄ ಧಾತುಗಳ ೠಕಾರಕ್ಕೆ ವಿಕಲ್ಪದಿಂದ ಗುಣವಾಗುವದು; ಆದರೆ ಗುಣವಾಗದಾಗ ೠಕಾರಕ್ಕೆ ಋ ಆದೇಶವಾಗುವದು. ಋಚ್ಛ್ ಧಾತುವಿನ ಋಕಾರಕ್ಕೆ ಗುಣವಾಗುವದು.

स्मृ ನೆನಿಸು.

| | ಏ | ದ್ವಿ. | ಬಹು. |
|---|---|---|---|
| ಪ್ರ. ಪು. | सस्मार | सस्मरतुः | सस्मरुः |
| ಮ. ಪು. | सस्मर्थ | सस्मरथुः | सस्मर |
| ಉ. ಪು. | सस्मार, सस्मर | सस्मरिव | सस्मरिम |

(ಪಾಠ ೧೧, ನಿಯಮ ೨ ಕ ಮತ್ತು ಪುಟ ೯೫, ನಿಯಮ ೩ ಬ ಮತ್ತು ಕ ನೋಡು.)

शॄ ಕ್ಷೀಣವಾಗು.

ಪ್ರ. ಪು. शशार शशरतुः, शश्रतुः शशरुः, शश्रुः (ಇತ್ಯಾದಿ).

೧೧. कुष्, स्फुट्, त्रुट्, स्फुर्, नू, धू ಮೊದಲಾದ ಕೆಲವು ೬ನೇ ಗಣದ ಧಾತುಗಳ ಅಂತ್ಯೋಪಾಂತ್ಯ ಸ್ವರಗಳಿಗೆ ಪೂರ್ಣಭೂತಕಾಲದ ಉತ್ತಮ ಪ್ರಥಮ

ಪುರುಷಗಳ ಏಕವಚನಗಳ ಪ್ರತ್ಯಯಗಳೂ, ಪ್ರಯೋಜ್ಯಾರ್ಥದ ಅಯವೂ, ಕರ್ಮಣಿ ಅದ್ಯತನಭೂತದ ಪ್ರಥಮಪುರುಷೈಕವಚನದ इ ಪ್ರತ್ಯಯವೂ ಹೊರ್ತಾಗಿ ಉಳಿದ ಸಬಲಪ್ರತ್ಯಯಗಳ ಪೂರ್ವದಲ್ಲಿ ಸಹ ವೃದ್ಧಿಯಾಗಲಿ ಗುಣವಾಗಲಿ ಆಗುವದಿಲ್ಲ. ಉದಾ: तुत्रोट, तुत्रुटिथ.

೧೨. अस्, श्रू ಮುಂತಾದ ಕೆಲವು ಗೌಣ ಧಾತುಗಳು ಆರ್ಧಧಾತುಕ ಪ್ರತ್ಯಯಗಳನ್ನು ಹೊಂದುವದಿಲ್ಲ.

೧೩. ಆಕಾರಾಂತ ಧಾತುಗಳ (ಅ) ಮುಂದಿನ ಪ್ರಥಮೋತ್ತಮಪುರುಷೈಕವಚನಗಳ ಪರಸ್ಮೈಪದಪ್ರತ್ಯಯಗಳಿಗೆ (अ್ಕೆ) ಔಕಾರಾದೇಶವಾಗುವದು. ಮತ್ತು (ಬ) ಮುಂದೆ ಸ್ವರಾದಿ ದುರ್ಬಲಪ್ರತ್ಯಯಗಳೂ, ಇಲ್ಲವೆ इ ಆಗಮವೂ ಬರಲು ಅಂತ್ಯ ಆಕಾರಕ್ಕೆ ಲೋಪ ಬರುವದು.

ज्ञा ಅರಿ, ತಿಳಿ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | जज्ञौ | जज्ञतुः | जज्ञुः |
| ಮ. ಪು. | जज्ञिथ, जज्ञाथ | जज्ञथुः | जज्ञ |
| ಉ. ಪು. | जज्ञौ | जज्ञिव | जज्ञिम |

ರೂಪಸಿದ್ಧಿವಿಚಾರ:–ज्ञा–जाज्ञा–जज्ञाः जज्ञा + अ = जज्ञा + औ (ಮೇಲಿನ ನಿಯಮ ೧೩ ಅ) = जज्ञौ (೧ನೇ ಪುಸ್ತಕ, ಪುಟ ೧೬, ಟಿಪ್ಪಣಿ ೧ ನೋಡು); जज्ञा + थ = जज्ञा + इथ = (ಪುಟ ೯೫, ನಿಯಮ ೩ ಬ) = जज्ञ् + इथ (ನಿಯಮ ೧೩ ಬ) = जज्ञिथ; जज्ञा + अतुः = जज्ञ् + अतुः = जज्ञतुः.

೧೪. ए, ऐ, ओಕಾರಾಂತ ಧಾತುಗಳ ಮುಂದೆ ಆರ್ಧಧಾತುಕ ಪ್ರತ್ಯಯಗಳು ಬರಲು, ए, ऐ, ओಕಾರಗಳಿಗೆ ಆಕಾರಾದೇಶವಾಗುವದು.

ग्लै ಕಳೆಗುಂದು.

| | ಏ. | ದ್ವಿ. | ಬಹು. | |
|---|---|---|---|---|
| ಪ್ರ. ಪು. | जग्लौ | जग्लतुः | जग्लुः | (ಇತ್ಯಾದಿ). |
| ಮ. ಪು. | जग्लाथ, ಅಥವಾ जग्लिथ | जग्लथुः | जग्ल | |

೧೫. ಈ ಕಾಲದಲ್ಲಿ—

(ಅ) भू ಧಾತುವಿನ ಅಂಗವು बभूव् ಆಗುತ್ತದೆ.

(ಬ) जि ಧಾತುವಿನ ಅಂಗವು जिगि ಆಗುತ್ತದೆ.

(ಕ) हि ಧಾತುವಿನ ಅಂಗವು जिघि ಆಗುತ್ತದೆ.

(ಡ) चि ಧಾತುವಿನ ಅಂಗವು ವಿಕಲ್ಪದಿಂದ चिचि, चिकि ಆಗುತ್ತದೆ.

बभूव, बभूविथ; जिगाय ಅಥವಾ जिगय, जिग्यिव, जिगेथ ಅಥವಾ जिगयिथ (ಪುಟ ೯೬, ನಿಯಮ ೩ ಡ), जिचाय: चिकाय ಅಥವಾ चिचाय (ಇತ್ಯಾದಿ).

೧೬. गम्, हन्, जन्, खन्, घस् ಧಾತುಗಳ ಮುಂದೆ ದುರ್ಬಲಪ್ರತ್ಯಯಗಳು ಬರಲು ಉಪಾಂತ್ಯ अಕಾರಕ್ಕೆ ಲೋಪ ಬರುವದು. ತರುವಾಯ जन्, घस् ಧಾತುಗಳ ರೂಪಗಳು ಕ್ರಮದಿಂದ ज्ञ्, क्ष् ಆಗುವವು. हन् ಧಾತುವಿನ हಕಾರಕ್ಕೆ घ् ಆದೇಶವಾಗುವದು. ಅಂದರೆ ಈ ಕಾಲದಲ್ಲಿ हन् ಧಾತುವಿನ ಅಂಗವು जघन् ಆಗುತ್ತದೆ.

हन् ಕೊಲ್ಲು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | जघान | जघ्नतुः | जघ्नुः |
| ಮ. ಪು. | जघनिथ, जघन्थ | जघ्नथुः | जघ्न |
| ಉ. ಪು. | जघान, जघन | जघ्निव | जघ्निम |

೧೭. ಈ ಕಾಲದಲ್ಲಿ अधि+इ ಧಾತುವಿನ ಅಂಗವು अधिजगा ಆಗುತ್ತದೆ.

ಪ್ರ. ಪು. अधिजगे अधिजगाते अधिजगिरे

೧೮. (ಅ) सृज्, दृश् ಧಾತುಗಳ ಮುಂದೆ ವ್ಯಂಜನಾದಿ ಸಬಲಪ್ರತ್ಯಯಗಳು ಬರಲು ऋಕಾರಕ್ಕೆ र ಆದೇಶವಾಗುವದು; ಅಂದರೆ स्रज्, द्रश् ಎಂದು ರೂಪಾಂತರಗಳಾಗುವವು.

(ಬ) ಈ ಧಾತುಗಳ ಮುಂದಿನ थ ಪ್ರತ್ಯಯದ ಪೂರ್ವದಲ್ಲಿ इ ಆಗಮವು ವಿಕಲ್ಪದಿಂದ ಬರುವದು.

सृज्-सृसृज्-ससृज्, ससृज् + थ = सस्रज् + थ = सस्रष् + थ (ಪಾಠ ೯, ನಿಯಮ ಟ) सस्रष् + ठ = (೧ನೇ ಪುಸ್ತಕ, ಪುಟ ೨೪, ಟಿಪ್ಪಣಿ ೧, ಉತ್ತರ ಭಾಗ) = सस्रष्ठ. ಇದೇ ಮೇರೆಗೆ दद्रष्ठ ಆಗುವದು. इ ಆಗಮವು ವಿಕಲ್ಪದಿಂದ ಬರುವದು; ಅದು ಬಂದಾಗ ससर्जिथ, ददर्शिथ ಎಂಬ ರೂಪಗಳಾಗುವವು.

प्रच्छ् ಧಾತುವಿನ ಮಧ್ಯಮ ಪುರುಷೈಕವಚನದ ರೂಪಗಳು पप्रच्छिथ, पप्रष्ठ ಆಗುತ್ತವೆ (ಪುಟ ೯೬, ನಿಯಮ ೩ ಡ).

೧೯. ಉಪಾಂತ್ಯದಲ್ಲಿ ऋ ಉಳ್ಳಂಥ अनिट् ಧಾತುಗಳ ಮುಂದೆ ಕರ್ಕಶವರ್ಣವು ಆದಿಯಲ್ಲುಳ್ಳ ಸಬಲಪ್ರತ್ಯಯಗಳು[1] ಬರಲು ಆ ऋಕ್ಕೆ ವಿಕಲ್ಪದಿಂದ र ಆದೇಶವಾಗುತ್ತದೆ. ಉದಾ: दद्रप्थ ಅಥವಾ ददर्प्थ, तत्रप्थ ಅಥವಾ ततर्प्थ ಈ

---

[1] ಯಾವ ಪ್ರತ್ಯಯವು ಬರುವದರಿಂದ ಅದರ ಪೂರ್ವದಲ್ಲಿರುವ ಸ್ವರಗಳಿಗೆ ಗುಣ ಅಥವಾ ವೃದ್ಧಿಯಾಗತಕ್ಕದ್ದಿರುವದೋ ಆ ಪ್ರತ್ಯಯಕ್ಕೆ ಸಬಲಪ್ರತ್ಯಯವೆನ್ನುತ್ತಾರೆ.

ರೂಪಗಳು ಇದೇ ನಿಯಮದಂತೆ ಉಂಟಾಗಿರುತ್ತವೆ. ಇದರಂತೆಯೇ ಙಽರ್ಥ ಮತ್ತು ತತಾರ್ಥ ರೂಪಗಳಾದರೂ ಉಂಟಾಗಿರುವವು.

೨೦. ಈ ಕಾಲದಲ್ಲಿ ಅದ್ ಧಾತುವಿನ ಬದಲಾಗಿ ವಿಕಲ್ಪದಿಂದ ಘಸ್ ಧಾತುವಿನ ಪ್ರಯೋಗವಾಗುತ್ತದೆ. ಆಗ ಥ ಪ್ರತ್ಯಯದ ಹಿಂದೆ ಇಕಾರಾಗಮವು ನಿತ್ಯವಾಗಿ ಬರುವದು. ದುರ್ಬಲಪ್ರತ್ಯಯಗಳು ಪರವಾಗಲು (ಪುಟ ೧೦೧ರಲ್ಲಿ) ೧೬ನೇ ನಿಯಮದಲ್ಲಿ ಹೇಳಿದಂತೆ ರೂಪಗಳಾಗುವವು.

೨೧. ಪೂರ್ಣಭೂತಕಾಲವು ಬಹುಕಾಲದ ಹಿಂದೆ ಕ್ರಿಯೆಯು ವರ್ತಿಸಿತೆಂದು ಅಥವಾ ಮಾತಾಡುವವನು ಆ ಕ್ರಿಯೆಯನ್ನು ನೋಡಲಿಲ್ಲವೆಂದು ಅರ್ಥ ತೋರಿಸುತ್ತದೆ. ಪ್ರಾಚೀನಕಾಲದಲ್ಲಿ ವರ್ತಿಸಿದ ಸಂಗತಿಗಳನ್ನು ಹೇಳುವಾಗ ಈ ಕಾಲವನ್ನು ಬಹುತರ ಪ್ರಯೋಗಿಸುತ್ತಾರೆ. ಉತ್ತಮಪುರುಷದಲ್ಲಿ ಈ ಕಾಲವು ಮಾತಾಡುವವನು ತಿಳಿಯದೆ ಮಾಡಿದ ವ್ಯಾಪಾರವನ್ನಾಗಲಿ, ಮಾಡಲಿಲ್ಲೆಂದು ಹೇಳಿ ತಾನು ಮಾಡಿದ್ದನ್ನು ಮುಚ್ಚಿ ಮಾತಾಡುವವನ ಅಭಿಪ್ರಾಯವನ್ನಾಗಲಿ ತೋರಿಸುತ್ತದೆ.

बहु जगद पुरस्तात्तस्य मत्ता किलाहम् ।
कलिङ्गेष्ववत्सः नाहं कलिङ्गाञ्जगाम ।

पुरा किल दुष्यन्तो नाम राजा बभूव । स एकदा मृगयां कर्तुं वनमियाय । तं तस्य सैनिका अमात्याश्चानुजग्मुः । तस्मिन्कानने दुष्यन्तो बहून्मृगाञ्जघान । एकं मृगं पलायमानमनुसरन्मार्गे दिव्याश्रमपदं ददर्श । तस्य सैनिकाः पूर्वस्मिन्नेव स्थाने तस्थुः । कण्वस्यायमृषेराश्रम इति ज्ञात्वा तं प्रविवेश । प्रविश्य च को नु भो अत्रेति पप्रच्छ । कण्वस्य कृतिका दुहिता शकुन्तलाश्रमाद्बहिरागत्य दुष्यन्तं स्वागतं व्याजहार । शकुन्तलां चारुसर्वाङ्गीं दृष्ट्वा दुष्यन्तस्तां चकमे । तस्याः पाणिं गान्धर्वेण विधिना राजा जग्राह । अनन्तरं कंचित्कालं तावुभौ तस्मिन्नाश्रमे चिक्रीडतुः । रममाणं राजानं प्रेक्ष्य सैनिकाः पुरं निववृतिरे । राजापि पश्चात्स्वं नगरमुपययौ ।

कियद्वसु ब्राह्मणेभ्यो यूयं दद । न वयं तेभ्यः किंचिद्ददिम ।
उन्मादं वीक्ष्य पद्मानां कुमुदानां च मन्दताम् ।
क्षणिकत्वं विभूतीनाम् चेतसा निश्चिकाय सः ॥
शुश्राव रामस्तत्सर्वं प्रतस्थे च ससैनिकः ।

तस्तनुर्जज्वलुर्मम्लुर्जग्लुर्लुलुठिरे क्षताः ।
मुमूर्च्छुर्वमू रक्तं ततृषुश्चोभये भटाः ॥
जम्बुमाली जहौ प्राणान् ग्राव्णा मारुतिना हतः ।
बभाण स न मे मायां जिगायेन्द्रोऽपि किं नृभिः ॥

ಗಾಧಿಯೆಂಬ ಅರಸನು ಭೃಗುವಿನ ಮಗನಾದ ಋಚೀಕನೆಂಬವನಿಗೆ ತನ್ನ ಮಗಳನ್ನು ಕೊಟ್ಟನು (दा).

ಅವಳು ಜಮದಗ್ನಿ ಎಂಬ ಮಗನನ್ನು ಹಡೆದಳು (सू).

ಜಮದಗ್ನಿಯು ರೇಣುಕೆಯನ್ನು ಮದುವೆಯಾದನು (परि+नी)[1].

ಅವನು ಒಮ್ಮೆ ಅವಳ ಅವಿವೇಕಕ್ಕೆ ಸಿಟ್ಟಾಗಿ (क्रुध्) ಅವಳ ಗಂಡು ಮಕ್ಕಳಿಗೆ ಅವಳನ್ನು ಕೊಲ್ಲಲಪ್ಪಣೆ ಕೊಟ್ಟನು (दिश्).

ಅವನ ಚಿಕ್ಕ ಮಗನಾದ ಪರಶುರಾಮನ ಹೊರ್ತು ಯಾರೂ ಈ ಕೆಲಸ ಮಾಡಲಿಲ್ಲ (कृ).

ಅವನು ತನ್ನ ಕೊಡ್ಲಿಯಿಂದ ಅವಳ ತಲೆ ಹೊಡೆದನು (छिद्).

ಜಮದಗ್ನಿಯು ಈ ಕೃತ್ಯಕ್ಕೆ ಸಂತುಷ್ಟನಾಗಿ (तुष्), ಮಗನೇ ವರ ಬೇಡೆಂದು ಹೇಳಿದನು (अभि+धा ಆ.).

ಪರಶುರಾಮನು ತನ್ನ ತಾಯಿಯು ಪುನಃ ಬದುಕಲೆಂತಲೂ ಅವಳು ಪಾಪದಿಂದ ಮುಕ್ತವಾಗಲೆಂತಲೂ ಬೇಡಿಕೊಂಡನು (वृ).

ಆಗ ಜಮದಗ್ನಿಯು ಹಾಗೇ ಆಗಲೆಂದು ಅಂದನು (वि+आ+हृ ಆ.), ರೇಣುಕೆಯು ಪ್ರಾಣ ಪಡೆದೆದ್ದಳು (उद्+स्था).

ಕೆಲವು ಕಾಲದನಂತರ ಕಾರ್ತವೀರ್ಯರಾಜನು ಅವನ ಆಶ್ರಮಕ್ಕೆ ಬಂದನು (आ+गम्).

ಅವನೂ ಅವನ ದಳದವರೂ ಗಿಡಗಳನ್ನೆಲ್ಲ ಮುರಿದು (भञ्ज्), ಭೂಮಿಯನ್ನು ಹಾಳು ಮಾಡಿ (उत्सन्नां+कृ), ಆ ಋಷಿಯ ಆಕಳುಗಳನ್ನು ಒಯ್ದರು (अप+हृ).

---

[1] नर्द्, नश् (೧೦ನೇ ಗ), नाथ्, नाध्, नन्द्, नक्ष्, नृ, नृत् ಧಾತುಗಳು ಹೊರ್ತಾಗಿ ಉಳಿದ नकಾರಾದಿ ಧಾತುಗಳ ಹಿಂದೆ रಕಾರವುಳ್ಳ ಉಪಸರ್ಗ ಬಂದರೆ, न್ಕೆ ण್ ಆದೇಶವಾಗುವದು. ಈ र्, न् ಕಾರಗಳ ನಡುವೆ ಸ್ವರಗಳು य्, व्, ह್ಗಳು कवರ್ಗ पವರ್ಗ ಇದ್ದಾಗ್ಯೂ, न್ಕೆ ण್ ಆದೇಶವಾಗುತ್ತದೆ. ಉಳಿದ ವರ್ಣಗಳು ಬಂದರೆ ಮಾತ್ರ ಆಗುವದಿಲ್ಲ. नाध्, नृ, नर्द् ಧಾತುಗಳ नಕಾರಕ್ಕೂ णಕಾರಾದೇಶವಾಗುವದೆಂದು ಕೆಲವರ ಅಭಿಪ್ರಾಯ ಉಂಟು.

ಪರಶುರಾಮನು ಮನೆಯಲ್ಲಿದ್ದಿಲ್ಲ (भू), ಅವನು ಬಂದನಂತರ ಕಾರ್ತವೀರ್ಯನ ಕೂಡ ಕಾಳಗ ಮಾಡಿ (युध्), ಅವನನ್ನು ಕೊಂದನು (हन्).

ಕಾರ್ತವೀರ್ಯನ ಮಕ್ಕಳು ಈ ಸುದ್ದಿಯ ಕೇಳಿ (श्रु), ಸಿಟ್ಟಾಗಿ (क्रुध्), ಅವನ ಆಶ್ರಮಕ್ಕೆ ಹೋದರು (गम्).

ಅಲ್ಲಿ ಜಮದಗ್ನಿಯು ಒಬ್ಬನೇ ಇದ್ದದ್ದು ನೋಡಿ, ಅವರು ಬಾಣಗಳನ್ನು ಎಸೆದು (क्षिप् ಅಥವಾ सृज्), ಅವನನ್ನು ಕೊಂದರು.

ಪರಶುರಾಮನು ಮನೆಗೆ ಬಂದಾಗ (नि+वृत्) ಬಹು ಸಿಟ್ಟಾಗಿ, ಕ್ಷತ್ರಿಯರನ್ನೆಲ್ಲ ನಿರ್ಮೂಲ ಮಾಡಬೇಕೆಂದು ನಿಶ್ಚಯಿಸಿದನು (निस्+चि).

ಅವನು ಕಾರ್ತವೀರ್ಯನ ಮಕ್ಕಳಿಗೆ—"ನೀವು ನನ್ನ ತಂದೆಯ ಕೊಂದಿರೇನು?" ಎಂದು ಕೇಳಿದನು (प्रच्छ् ಅಥವಾ अनु+युज्). ಅದಕ್ಕೆ ಅವರು, ನಾವು ಕೊಲ್ಲಲಿಲ್ಲವೆಂದು ಹೇಳಿದರು (गद्).

ಆದರೆ ಅವರೇ ತಪ್ಪುಗಾರರೆಂದು ಪರಶುರಾಮನಿಗೆ ತಿಳಿಯಿತು (ज्ञा); ಅದರಿಂದ ಅವನು ಅವರನ್ನೂ ಉಳಿದ ಎಲ್ಲ ಕ್ಷತ್ರಿಯರನ್ನೂ ಕೊಂದನು (हन्).

---

## ಕೋಶ ೧೩.

उख् (೧ನೇ ಗ. ಪ.) ಹೋಗು.

उन्माद (ಪು.) ಆನಂದ, ಸಂತೋಷ, ಶೋಭೆ.

उपरि (ಅ.) ಮೇಲೆ.

उभय (ಸ. ನಾ.) ಎರಡೂ ಕಡೆಯು.

एकदा (ಅ.) ಒಮ್ಮೆ, ಒಂದಾನೊಂದು ಕಾಲದಲ್ಲಿ.

कण्व (ಪು.) ಒಬ್ಬ ಋಷಿಯ ಹೆಸರು.

कम्[1] (೧೦ನೇ ಗ. ಆ.) ಪ್ರೀತಿಸು.

कलिङ्ग (ಪು. ನಿತ್ಯಬಹುವಚನ) ಒಂದು ದೇಶದ ಹೆಸರು.

कानन ಅಡವಿ, ಅರಣ್ಯ.

कुमुद (ನ.) ನೈದಿಲೆ.

कृतिका (ಸ್ತ್ರೀ.) ದತ್ತಕ್ಕೆ ತಕ್ಕೊಳ್ಳಲ್ಪಟ್ಟವಳು (ಮಗಳು).

क्रुध् (೪ನೇ ಗ. ಪ.) ಸಿಟ್ಟಾಗು, ಸಿಟ್ಟಿಗೇಳು.

क्षणिकत्व (ನ.) ವಿನಾಶಿತ್ವ, ತೀವ್ರ ಕೆಡುವ ಸ್ಥಿತಿ.

क्षत (ವಿ.) ಗಾಯ ಪಟ್ಟ (क्षण् ಧಾತುವಿನ ಕರ್ಮಾರ್ಥ ಭೂ. ಕೃ.).

गद् (೧ನೇ ಗ. ಪ.) ಮಾತಾಡು.

गान्धर्व (ಪು.) ವಧೂವರರ ಸಮ್ಮತಿಯಿಂದ ಆಗುವ ಲಗ್ನ, ಲಗ್ನದ ಒಂದು ಪ್ರಕಾರ.

---

[1] ಈ ಧಾತುವಿನ ಮೇಲೆ ಬರುವ अय ವಿಕರಣಕ್ಕೆ ಆರ್ಧಧಾತುಕ ಪ್ರತ್ಯಯಗಳು ಪರವಾಗಲಾಗಿ ವಿಕಲ್ಪದಿಂದ ಲೋಪ ಬರುವದು. ಉಳಿದ ೧೦ನೇ ಗಣದ ಧಾತುಗಳ ಮುಂದೆ ಅದ್ಯತನ ಭೂತಕಾಲದ ಪ್ರತ್ಯಯಗಳೂ ಆಶೀರ್ವಾದಾರ್ಥದ ಪ್ರತ್ಯಯಗಳೂ ಹೊರ್ತಾಗಿ ಉಳಿದ ಆರ್ಧಧಾತುಕ ಪ್ರತ್ಯಯಗಳು ಬರಲಾಗಿ अय ವಿಕರಣಕ್ಕೆ ಲೋಪ ಬರುವದಿಲ್ಲ; ಆದರೆ ಅಂತ್ಯ अकारಕ್ಕೆ ಮಾತ್ರ ಲೋಪ ಬರುವದು.

**गुप्** [1] (೧ನೇ ಗ. ಪ.) ರಕ್ಷಿಸು.

**ग्रावन्** (ಪು.) ಕಲ್ಲು.

**घस्** (೧ನೇ ಗ. ಪ.) ಭಕ್ಷಿಸು, ತಿನ್ನು.

**चारुसर्वाङ्गी** (ಸ್ತ್ರೀ) (**चारु** ಸುಂದರವಾದ, **सर्वाङ्ग** ಎಲ್ಲ ಅವಯವಗಳು) ಎಲ್ಲ ಅವಯವಗಳು ಸುಂದರವಾಗಿರುವ ಹೆಣ್ಣು.

**चि** (**निस्** ಪೂರ್ವಕ) ನಿಷ್ಕರ್ಷಿಸು, ನಿಶ್ಚಯಿಸು.

**जंबुमालिन्** (ಪು.) ಒಬ್ಬ ರಾಕ್ಷಸನ ಹೆಸರು.

**त्वर्** (೧ನೇ ಗ. ಪ.) ಆತುರನಾಗು, ಧಗಧಗಿಸು, ಸಿಗಿನಿಗಿಯಾಗು.

**तृष्** (೪ನೇ ಗ. ಪ.) ನೀರಡಿಸು.

**दिव्याश्रमपद** (ನ.) [**दिव्य** ಸುಂದರವಾದ, **आश्रमपद** (ನ.) [ಋಷಿಗಳ ವಾಸಸ್ಥಾನ] ಸುಂದರವಾದ ಪರ್ಣಶಾಲೆ.

**दृप्** (೪ನೇ ಗ. ಪ.) ಗರ್ವಿಷ್ಠನಾಗು, ಹೆಮ್ಮೆತಾಳು.

**द्रु** (೧ನೇ ಗ. ಪ.) ಓಡು.

**नु** (ಅ.) ಅವಧಾರಣಾರ್ಥಕ ಅವ್ಯಯ.

**पद्म** (ನ.) ಕಮಲ, ತಾವರೆ.

**पलायमान** (ವ. ಕೃ. **परा + अय** ೧ನೇ ಗ. ಆ. ಇಲ್ಲಿ **रा** ಹೋಗಿ **ला** ಆಗಿರುವದು) ಓಡುವ.

**पुरस्तात्** (ಅ.) ಮುಂದೆ, ಎದುರಿನಲ್ಲಿ.

**पूर्व** (ಸ. ನಾ.) ಮೊದಲಿನ (ಮನುಷ್ಯ ಅಥವಾ ವಸ್ತು).

**बहिस्** (ಅ.) ಹೊರಗೆ.

**भण्** (೧ನೇ ಗ. ಪ.) ಮಾತಾಡು, ಅನ್ನು.

**मत्त** (ಭೂ. ಕೃ. **मद्** ಧಾತು) ಮದವೇರಿದ.

**मन्दता** (ಸ್ತ್ರೀ.) ಮಂದತ್ವ, ಕಳೆಗುಂದಿದ ಸ್ಥಿತಿ.

**माया** (ಸ್ತ್ರೀ.) ಕಣ್ಣುಕಟ್ಟುವಿದ್ಯೆ.

**मूर्च्छ्** (೧ನೇ ಗ. ಪ.) ಎಚ್ಚರದಪ್ಪು, ಧೈರ್ಯಗುಂದು.

**मृगया** (ಸ್ತ್ರೀ.) ಬೇಟೆ.

**म्लै** (೧ನೇ ಗ. ಪ.) ದಣಿಯು, ಬೇಸರಿಕೆ ಬರು, ಖಿನ್ನವಾಗು.

**रक्त** (ನ.) ನೆತ್ತರ.

**रध्** [2] (೪ನೇ ಗ. ಪ.) ನೋಯಿಸು, ನಷ್ಟಪಡಿಸು.

**लुठ्** (೧ನೇ ಗ. ಪ.) ನೆಲದ ಮೇಲೆ ಉರುಳಾಡು.

**वम्** (೧ನೇ ಗ. ಪ.) ಕಾರು.

**विभूति** (ಸ್ತ್ರೀ.) ದ್ರವ್ಯ, ಸಂಪತ್ತು, ಊರ್ಜಿತ ಸ್ಥಿತಿ.

**ससैनिक** (ವಿ.) ಸೈನ್ಯದಿಂದ, ಸೈನಿಕರಿಂದ ಕೂಡಿದ.

**सिध्** (೧ನೇ ಗ. ಪ.) ಸುಕ್ರಮಕ್ಕೆ ತರು, ಗುಣವಾಗು, ಸುಖಕರವಾಗು.

**स्तन्** (೧ನೇ ಗ. ಪ.) ಗರ್ಜಿಸು.

**स्निह्** (೪ನೇ ಗ. ಪ.) ಪ್ರೀತಿಮಾಡು, ಸ್ನೇಹ ಮಾಡು.

**स्नु** (೨ನೇ ಗ. ಪ.) ಹರಿ.

**स्वृ** (೧ನೇ ಗ. ಪ.) ಶಬ್ದಮಾಡು, ಧ್ವನಿಮಾಡು.

**हत** (**हन्** ಧಾತುವಿನ ಕ. ಭೂ. ಕೃ.) ಕೊಲ್ಲಲ್ಪಟ್ಟ, ಹೊಡಿಯಲ್ಪಟ್ಟ.

---

[1] ೧ನೇ ಪಾಠದ ೧ನೇ ನಿಯಮದಲ್ಲಿ ಹೇಳಿದ ಧಾತುಗಳಿಗೆ ಆರ್ಧಧಾತುಕ ಪ್ರತ್ಯಯಗಳು ಪರವಾಗಲು ಪ್ರತ್ಯಯಪೂರ್ವದಲ್ಲಿ **आय्** ಆಗಮವು ವಿಕಲ್ಪದಿಂದ ಬರುವದು.

[2] ಸ್ವರಾದಿ ಪ್ರತ್ಯಯಗಳು ಪರವಾಗಲು **रध्**, **जभ्** ಧಾತುಗಳಲ್ಲಿ ಅವುಗಳೊಳಗಿರುವ **अ** ಕಾರದ ಮುಂದೆ **न्** ಆಗಮವಾಗುತ್ತದೆ. ಪೂರ್ಣಭೂತ ಪ್ರ. ಪು. ಏಕವಚನದ ರೂಪವು **ररन्ध** ಆಗುತ್ತದೆ. ಇದರಲ್ಲಿ **अ**ಕಾರಕ್ಕೆ ವೃದ್ಧಿ ಬರುವದಿಲ್ಲ; ಯಾಕಂದರೆ **न्** ಆಗಮ ಬರಲು **अ**ಕಾರದ ಉಪಾಂತ್ಯ ಸ್ಥಾನವು ತಪ್ಪುತ್ತದೆ.

ಜೀವವುಳ್ಳ ಜೀವನ್ತೀ (ಸ್ತ್ರೀ.), ಸಜೀವಾ (ಸ್ತ್ರೀ.).
ಕೊಡ್ಲಿ ಪರಶು (ಪು.).
ಭೃಗು ಭೃಗು (ಪು.), ಒಬ್ಬ ಋಷಿಯ ಹೆಸರು.
ಬಿಟ್ಟು, ಹೊರ್ತು (ಅ.) ಋತೇ (ಈ ಅವ್ಯಯವು ಪಂಚಮೀ ವಿಭಕ್ತಿಯ ಮೇಲೆ ಬರುವದು).
ಕಿತ್ತುಹಾಕು, ನಿರ್ಮೂಲಮಾಡು ಉತ್+ಮೂಲ (೧೦ನೇ ಗ. ಪ.).
ಕಿತ್ತುಹಾಕಲಿಕ್ಕೆ ಉನ್ಮೂಲಯಿತುಮ್.
ಗಾಧಿ ಗಾಧಿ (ಪು.), ಅರಸನ ಹೆಸರು.
ತಿಳಿಗೇಡಿತನ, ಅವಿವೇಕತನ ಅವಿವೇಕ (ಪು.), ವ್ಯಭಿಚಾರ (ಪು.).
ಜಮದಗ್ನಿ ಜಮದಗ್ನಿ (ಪು.), ಒಬ್ಬ ಋಷಿಯ ಹೆಸರು.
ಕಾರ್ತವೀರ್ಯ ಕಾರ್ತವೀರ್ಯ (ಪು.), ಒಬ್ಬ ಅರಸನ ಹೆಸರು.
ಹೆಸರುಳ್ಳ ನಾಮ (ಅ.) ನಾಮ್ನಾ (ನಾಮನ್ ಶಬ್ದದ ತೃತೀಯೆ).
ಎಂದೂ ಇಲ್ಲ ನೈವ (ಅ.), ನ ಕರ್ಹಿಚಿತ್ (ಅ.).
ರೇಣುಕಾ ರೇಣುಕಾ (ಸ್ತ್ರೀ.) ಪರಶುರಾಮನ ತಾಯಿಯ ಹೆಸರು.
ಸಜೀವ ಮಾಡು, ಬದುಕಿಸು ಜೀವ್. (ಪುನರ್ ಪೂರ್ವಕ).
ಋಚೀಕ ಋಚೀಕ (ಪು.), ಒಬ್ಬ ಋಷಿಯ ಹೆಸರು.
ಬಹು, ಬಹಳ ಭೃಶಮ್ (ಅ.).
ಎಲ್ಲರಿಗಿಂತ ಕಿರಿ, ಚಿಕ್ಕ ಕನಿಷ್ಠ (ವಿ.).

## ೧೪ನೇ ಪಾಠ.

### ಪೂರ್ಣಭೂತ (ಮುಂದೆ ಸಾಗಿದ್ದು).

೧. ಎರಡು ಅಸಂಯುಕ್ತವ್ಯಂಜನಗಳ ನಡುವೆ ಅಕಾರವಿದ್ದು, ಧಾತುವಿನ ಆದ್ಯವ್ಯಂಜನವು ಆದೇಶದಿಂದ ಅಭ್ಯಾಸದಲ್ಲಿ ವಿಕಾರ ಹೊಂದದೆ ಇದ್ದಲ್ಲಿ, ದುರ್ಬಲಪ್ರತ್ಯಯಗಳು ಬರಲಾಗಿಯೂ, ಇ ಆಗಮ ಸಹಿತವಾದ ಥ ಪ್ರತ್ಯಯ ಬರಲಾಗಿಯೂ, ಅಕಾರಕ್ಕೆ ಏ ಆದೇಶವಾಗಿ ಅಭ್ಯಾಸಕ್ಕೆ ಲೋಪ ಬರುತ್ತದೆ.

ತನ್ ಎಳಿ, ಜಗ್ಗು, ಯಜ್ಞಮಾಡು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | ततान | तेनतुः | तेनुः |
| ಮ. ಪು. | तेनिथ | तेनथुः | तेन |
| ಉ. ಪು. | ततान-ततन | तेनिव | तेनिम |

ಮೇಲಿನ ನಿಯಮದಲ್ಲಿ ಹೇಳಿದಂತೆ ತನ್ ಧಾತುವಿನಲ್ಲಿ ತ್, ನ್ ಎರಡು ಅಸಯುಕ್ತವ್ಯಂಜನಗಳ ನಡುವೆ ಅಕಾರ ಉಂಟು. ಧಾತುವಿನ ಅಂಗವು ಸಿದ್ಧ ಮಾಡಲಾಗಿ ततन् ಆಗುತ್ತವೆ; ಅಂದರೆ ಆದ್ಯವ್ಯಂಜನವಾದ ತ್‌ಕ್ಕೆ ಅಭ್ಯಾಸದಲ್ಲಿ ತಕಾರವೇ ಬರುವದು. ಆದದರಿಂದ ಇದರ ರೂಪಗಳು ಮೇಲೆ ಹೇಳಿದಂತಾಗುವವು. ನಶ್ ಧಾತುವಿನ ರೂಪಗಳು ಹಾಗಾಗಲಾರವು; ಯಾಕಂದರೆ

ಕೊನೆಯಲ್ಲಿ ಸಂಯುಕ್ತವ್ಯಂಜನ ಉಂಟು. गद्, भण् ಧಾತುಗಳ ರೂಪಗಳು ಈ ನಿಯಮದಂತೆ ಆಗಲಾರವು; ಯಾಕಂದರೆ गद्, भण् ಧಾತುಗಳ ಆದ್ಯವ್ಯಂಜನಗಳಿಗೆ, ಅಂದರೆ ग्, भ् ಗಳಿಗೆ ಅಭ್ಯಾಸದಲ್ಲಿ ಆದೇಶದಿಂದ ಕ್ರಮವಾಗಿ ज्, ब् ಗಳು ಬರುವವು. ಆದರಿಂದ ಈ ಧಾತುಗಳ ರೂಪಗಳು ಕೆಳಗೆ ವಿವರಿಸಿದಂತೆ ಆಗುವವು.

| | | ಏ. | ದ್ವಿ. | ಬಹು. | | | | |
|---|---|---|---|---|---|---|---|---|
| नन्द् | ಪ್ರ. ಪು. | ननन्द | ननन्दतुः | ननन्दुः | ಅಥವಾ | नेन्दतुः | नेन्दुः | ವಿಕಲ್ಪದಿಂ |
| गद् | ಪ್ರ. ಪು. | जगाद | जगदतुः | जगदुः | | गेदतुः | गेदुः | |
| भण् | ಮ. ಪು. | बभाण | बभणतुः | बभणुः | | भेणतुः | भेणुः | |

पच् ಮ. ಪುರುಷೈಕವಚನ: पपक्थ ಅಥವಾ पेचिथ
शक् " " शशक्थ शेकिथ
} ಈ ಧಾತುಗಳ ಮುಂದೆ इ ಆಗಮವು ವಿಕಲ್ಪದಿಂದ ಬರುವದು (ಪುಟ ೮೫, ನಿಯಮ ೩ ನೋಡು).

इ ಆಗಮ ಬಂದಾಗ ಮೇಲಿನ ನಿಯಮದಿಂದ शेकिथ, पेचिथ ರೂಪಗಳಾಗುವವು. च् ಕ್ಕೆ क्‌ಕಾರಾದೇಶವಾದ ಬಗ್ಗೆ (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣಿ ೧ ನೋಡು).

೨. तॄ, फल्, भज्, त्रप्, राध् ಸಿಟ್ಟಿಗೆ ಎಬ್ಬಿಸು, ಅಪರಾಧ ಮಾಡು, (೫ನೇ ಗಣ) ಧಾತುಗಳ अ, आಕಾರಗಳಿಗೆ ಇದೇ ಮೇರೆಗೆ एಕಾರಾದೇಶವಾಗುತ್ತದೆ. जॄ, भ्रम्, त्रस्, फण्, राज्, भ्राज्, भ्राश्, भ्लाश्, स्यम्, स्वन् ಧಾತುಗಳಿಗೆ एಕಾರಾದೇಶವು ವಿಕಲ್ಪವಾಗಿ ಆಗುತ್ತದೆ.

ಈ ಧಾತುಗಳು ಮೇಲೆ ಹೇಳಿದ (೧) ಈ ಸಾಮಾನ್ಯ ನಿಯಮಕ್ಕೆ ಒಳಗಾದಂಥವಲ್ಲ. तॄ—ततॄ (ಪುಟ ೭೬, ನಿಯಮ ೨ ಇ)--ततर् + अतुः (ಪುಟ ೮೮, ನಿಯಮ ೧೦) = तेरतुः (ನಿಯಮ ೨), त्रप् – तत्रप् ಅಂಗವು तत्रप् + ए = त्रेपे, तत्रप् + आते = त्रेपाते ಇತ್ಯಾದಿ. भ्रम् ಅಂಗವು बभ्रम्, बभ्रम् + अतुः = बभ्रमतुः ಅಥವಾ भ्रेमतुः; बभ्रम् + उः = बभ्रमुः ಅಥವಾ भ्रेमुः.

೩. वಕಾರಾದಿ ಧಾತುಗಳಿಗೂ शस्, दद् ಧಾತುಗಳಿಗೂ ೧ನೇ ನಿಯಮದಲ್ಲಿ ಹೇಳಿದ ಕಾರ್ಯಗಳು ಆಗುವದಿಲ್ಲ.

ಉದಾ: वम् ಧಾತು— ಪ್ರ. ಪು. ववाम ववमतुः ववमुः

೪. [1]वच्, यज्, वप्, वह्, वस् (೧ನೇ ಗ.), वे, व्ये, ह्वे, श्वि, वद्, स्वप्, ज्या, वश्, व्यच्, प्रच्छ्, व्रश्च्, भ्रस्ज्, ग्रह्, व्यध् ಧಾತುಗಳಿಗೂ ಬೇರೆ ಕೆಲವು ಧಾತುಗಳಿಗೂ ದುರ್ಬಲಪ್ರತ್ಯಯಗಳು ಪರವಾಗಲಾಗಿ ಆ ಧಾತುಗಳೊಳಗಿನ य्, व्, र्

---

[1] ಮೊದಲಿನ ೧೧ ಧಾತುಗಳಿಗೆ ಸಾರ್ವಧಾತುಕ ದುರ್ಬಲಪ್ರತ್ಯಯಗಳು ಪರವಾಗಲು ಈ ಕಾರ್ಯವು ಆಗುವಂತಿದ್ದಾಗ್ಯೂ ಆಗುವದಿಲ್ಲ.

ಗಳಿಗೆ ಕ್ರಮವಾಗಿ इ, उ, ऋ ಆದೇಶಗಳಾಗುವವು. ಈ ಕಾರ್ಯಕ್ಕೆ संप्रसारण ವೆಂದು ಸಂಜ್ಞೆಯು, ಆದರೆ ಪೂರ್ಣಭೂತಕಾಲದಲ್ಲಿ प्रच्छ्, व्रश्च्, भ्रस्ज् ಧಾತುಗಳಿಗೆ ಈ ಕಾರ್ಯವಾಗುವದಿಲ್ಲ.

೫. ಪೂರ್ಣಭೂತಕಾಲದಲ್ಲಿ ಸಬಲಪ್ರತ್ಯಯಗಳು ಪರವಾಗಲಾಗಿ ಅಭ್ಯಾಸದ ಅಕ್ಷರಗಳಿಗೆ ಮಾತ್ರ ಸಂಪ್ರಸಾರಣವಾಗುತ್ತದೆ. व्यध् ಧಾತುವಿನ ಅಭ್ಯಾಸವು ಎಲ್ಲ ಕಡೆಯಲ್ಲಿ वि ಆಗುವದು.

೬. ಸಂಪ್ರಸಾರಣದ ಮುಂದಿನ ಸ್ವರಕ್ಕೆ ಲೋಪ ಬರುತ್ತದೆ.

೭. ಸಂಯುಕ್ತವ್ಯಂಜನದೊಳಗಿನ ಎರಡೂ ವ್ಯಂಜನಗಳು ಸಂಪ್ರಸಾರಣ ಹೊಂದುವಂಥವಿದ್ದರೆ, ಎರಡನೇ ವ್ಯಂಜನಕ್ಕೆ ಮಾತ್ರ ಸಂಪ್ರಸಾರಣವಾಗುತ್ತದೆ.

### यज्

#### ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | इयाज | ईजतुः | ईजुः |
| ಮ. ಪು. | इयजिथ-इयष्ठ | ईजथुः | ईज |
| ಉ. ಪು. | इयाज-इयज | ईजिव | ईजिम |

#### ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | ईजे | ईजाते | ईजिरे |
| ಮ. ಪು. | ईजिषे | ईजाथे | ईजिध्वे |
| ಉ. ಪು. | ईजे | ईजिवहे | ईजिमहे |

ರೂಪಸಿದ್ಧಿವಿಚಾರ:—यज्—ययज्—य्अयज्—इअयज् (ನಿಯಮ ೫) इयज् ಅಂಗವು; इयज्+अ=इयाज्: यज्—य्अज्—इअज् (ನಿಯಮ ೪), इज् (ನಿಯಮ ೬), [1]इइज्—ईज् ಅಂಗವು ईज्+अतुः=ईजतु; यज्—इयजिथ ಅಥವಾ इयज्+थ (ಪುಟ ೮೬, ನಿಯಮ ೩ ದ)=इयष्+थ (ಪುಟ ೬೨, ನಿಯಮ ಟ) = इयष्+ठ (೧ನೇ ಪುಸ್ತಕದ ಪುಟ ೨೪, ಟಿಪ್ಪಣಿ ೧, ಉತ್ತರ ಭಾಗ) = इयष्ठ.

व्यध्—व्यव्यध्—व्य्अव्यध्—व्इअव्यध्—विअव्यध् (ನಿಯಮ ೫, ೭)—विव्यध् (ನಿಯಮ ೬) ಅಂಗವು; विव्यध्+अ=विव्याध: व्यध्—व्य्अध्—व्इअध्—व्इध्—विध्—विविध् ಅಂಗವು; विविध्+अतुः=विविधतुः.

---

[1] ಸಬಲಪ್ರತ್ಯಯಗಳು ಪರವಾಗಲು ದ್ವಿತ್ವವಾದನಂತರ ಅಭ್ಯಾಸದ ಅಕ್ಷರಗಳಿಗೆ ಸಂಪ್ರಸಾರಣ ವಾಗುತ್ತದೆ, ದುರ್ಬಲಪ್ರತ್ಯಯಗಳು ಪರವಾಗಲು ಮೊದಲು ಸಂಪ್ರಸಾರಣದ ಕಾರ್ಯವಾಗಿ ಅನಂತರ ದ್ವಿತ್ವದ ಕಾರ್ಯವಾಗುತ್ತದೆ.

स्वप्-स्वस्वप्-सुस्वप्-[1] सुष्वप् ಅಂಗವು; सुष्वप् + अ = सुष्वाप, स्वप्-सुप्-सुसुप्-सुषुप् ಅಂಗವು; सुषुप् + अतुः = सुषुपतुः.

वच् ಧಾತುವಿನ ರೂಪಗಳು.

ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | उवाच | ऊचतुः | ऊचुः |
| ಮ. ಪು. | उवचिथ - उवक्थ | ऊचथुः | ऊच |
| ಉ. ಪು. | उवाच - उवच | ऊचिव | ऊचिम |

ಆತ್ಮನೇಪದ.

| | | | |
|---|---|---|---|
| ಪ್ರ. ಪು. | ऊचे | ऊचाते | ऊचिरे |

(೧) (ಅ) ಅನುನಾಸಿಕ ಅರ್ಧಸ್ವರಗಳ ಹೊರ್ತು ಉಳಿದ ವ್ಯಂಜನಾದಿ ಪ್ರತ್ಯಯಗಳು ಪರವಾದರೆ, ಅಥವಾ ಏನೂ ಪರವಾಗದಿದ್ದರೆ, द्रुह, मुह, स्नुह, स्निह ಧಾತುಗಳ हಕಾರಕ್ಕೆ ವಿಕಲ್ಪದಿಂದ घಕಾರಾದೇಶವಾಗುವದು, ಅಂದರೆ घ ಅಥವಾ ढ ಆದೇಶಗಳಾಗುವವು.

मुमुह् + थ = मुमोहिथ ಅಥವಾ मुमोह् + थ = मुमोढ् + थ ಅಥವಾ मुमोघ् + थ = मुमोढ ಅಥವಾ मुमोग्ध.

(ಬ) ಅನುನಾಸಿಕ ಅರ್ಧಸ್ವರಗಳ ಹೊರ್ತು ಉಳಿದ ವ್ಯಂಜನಾದಿ ಪ್ರತ್ಯಯಗಳು ಪರವಾದರೆ, ಅಥವಾ ಏನೂ ಪರವಾಗದೆ ಇದ್ದರೆ, नह ಧಾತುವಿನ हಕಾರಕ್ಕೆ धಕಾರಾದೇಶವಾಗುವದು.

ननह् + थ = ननध् + थ = ननद्ध ಅಥವಾ नेहिथ.

(೨) वह ಧಾತುವಿನ ढಕಾರಕ್ಕೆ (ಪುಟ ೫೭, ನಿಯಮ ಜದಂತೆ) ಲೋಪ ಬಂದಾಗ್ಗೆ ಅದರ ಹಿಂದಿನ अ, आಗಳಿಗೆ ओಕಾರಾದೇಶವಾಗುವದು.

वह - ववह् - उवह् ಅಂಗವು, उवह् + थ = उवढ् + थ (ಪುಟ ೫೭, ನಿಯಮ ಗ) = उवढ् + ध (ಪುಟ ೫೭, ನಿಯಮ ಘ) = उवढ् + ढ (೧ನೇ ಪುಸ್ತಕ, ಪುಟ ೨೪, ಟಿಪ್ಪಣಿ ೧, ಉತ್ತರ ಭಾಗ) = उव + ढ (ಪುಟ ೫೭, ನಿಯಮ ಜ) = उवा + ढ (ಪುಟ ೫೭, ನಿಯಮ ಜ, ಉತ್ತರ ಭಾಗ) = उवोढ ಮೇಲಿನ ನಿಯಮದಿಂದ आಕಾರಕ್ಕೆ ओಕಾರಾದೇಶವಾಯಿತು.

---

[1]) ಸ್ವರವರ್ಣವಾಗಲಿ ದಂತ್ಯವರ್ಣವಾಗಲಿ ಪರವಾದ सಕಾರಾದಿ ಧಾತುಗಳ ಹಾಗು स्वक्क्, स्वद्, स्विद्, स्वञ्ज्, स्वप्, स्मि ಧಾತುಗಳ सಕಾರದ ಹಿಂದೆ ಅದೇ ಶಬ್ದದೊಳಗೆ ಅಥವಾ ಪದದೊಳಗೆ अ आ ಸ್ವರಗಳ ಹೊರ್ತಾಗಿ ಉಳಿದ ಸ್ವರಗಳು ಬಂದರೆ, ಆ सಕಾರಕ್ಕೆ षಕಾರಾದೇಶವಾಗುವದು. सेक्, सृप्, सृज्, स्तृ, स्तृ, स्त्यै ಧಾತುಗಳ सಕಾರಕ್ಕೆ ಈ ಕಾರ್ಯವಾಗುವದಿಲ್ಲ.

೮. (ಅ) वे (ಪ. ಆ. ನೆಯ್ಯು) ಧಾತುವಿನ ಸಬಲಪ್ರತ್ಯಯದ ಹಿಂದಿನ ಅಂಗವು ವಿಕಲ್ಪದಿಂದ ववय् ಆಗುತ್ತದೆ; ಮತ್ತು ದುರ್ಬಲಪ್ರತ್ಯಯದ ಹಿಂದಿನ ಅಂಗವು ವಿಕಲ್ಪದಿಂದ ऊय् ಅಥವಾ ऊव् ಆಗುತ್ತದೆ. वे ಧಾತುವಿನ ಮಧ್ಯಮ ಪುರುಷೈಕವಚನಪ್ರತ್ಯಯದ ಹಿಂದೆ इ ಆಗಮ ಬರುವದು. ಉದಾ: ववयिथ.

व्ये [(ಪ. ಆ.) ಆಚ್ಛಾದಿಸು, ಮುಚ್ಚು] ಧಾತುವಿನ ಸಬಲಪ್ರತ್ಯಯದ ಹಿಂದಿನ ಅಂಗವು विव्यय् ಆಗುತ್ತದೆ, ಮತ್ತು ದುರ್ಬಲಪ್ರತ್ಯಯದ ಹಿಂದಿನ ಅಂಗವು वि, वी ಆಗುತ್ತದೆ.

ಮೇಲಿನ ನಿಯಮವನ್ನು ಹೇಳದಿದ್ದ ಪಕ್ಷದಲ್ಲಿ, ಅವುಗಳಿಗೆ ಪುಟ ೧೦೦, ನಿಯಮ ೧೪ನ್ನು ಹಚ್ಚಬೇಕಾಗುತ್ತಿತ್ತು.

वे ಧಾತು—वेवे - वृएवे - वएवे - ववे - ववे + थ = ववे + इथ = ववायिथ; ववे + अ = ववै + अ (ವೃದ್ಧಿಯಿಂದ) = ववाय, ववे + अ (ಉ. ಪು.) = ववय ಅಥವಾ ववाय. ಈ ಧಾತುವು आಕಾರಾಂತ ಧಾತುಗಳಂತೆಯೂ ನಡೆಯುವದು (ಪುಟ ೧೦೦, ನಿಯಮ ೧೪ ನೋಡು).

व्ये ಧಾತುವಿನ ಅಂತ್ಯ एಕಾರಕ್ಕೆ (ಪುಟ ೧೦೦, ನಿಯಮ ೧೪ರಲ್ಲಿ ಹೇಳಿದಂತೆ) आಕಾರಾದೇಶ ಬರುವದಿಲ್ಲ. ಅದರ ರೂಪಸಿದ್ಧಿವಿಚಾರ ಹ್ಯಾಗಂದರೆ: व्ये - व्येव्ये - व्य्एव्ये - व्इएव्ये - विव्ये ಅಂಗವು — विव्ये + अ = विव्यै + अ (ವೃದ್ಧಿಯಿಂದ) = विव्याय; विव्ये + थ = विव्ये + इथ = विव्ययिथ; विव्ये + अ (ಉ. ಪು. ಏಕವಚನ) = विव्ये ಅಥವಾ विव्यै + अ विव्यय ಅಥವಾ विव्याय.

(ಬ) ह्वे ಧಾತುವಿನ ಅಂಗವು जुहू ಆಗುತ್ತದೆ.

श्वि ಧಾತುವಿನ ಅಂಗವು ವಿಕಲ್ಪದಿಂದ शुशु ಆಗುತ್ತದೆ.

ಅಂದರೆ ಈ ಧಾತುಗಳಿಗೆ ಸಬಲಪ್ರತ್ಯಯಗಳು ಪರವಾದಾಗ್ಯೂ ಮೊದಲು ಸಂಪ್ರಸಾರಣದ ಕಾರ್ಯವಾಗಿ ತರುವಾಯ ದ್ವಿತ್ವದ ಕಾರ್ಯವಾಗುತ್ತದೆ. ह्वे = ह - उ - ए = हु (ಪುಟ ೧೦೮, ನಿಯಮ ೬ ನೋಡು).

(ಕ) वे ಮತ್ತು श्वि ಧಾತುಗಳ ರೂಪಗಳು ವಿಕಲ್ಪದಿಂದ ಸಾಮಾನ್ಯ ನಿಯಮಗಳಿಗೆ ಅನುಸರಿಸಿ ಆಗುವವು.

वे ಧಾತುವಿನ ಅಂಗವು ववा, ಪ್ರ. ಪು. ववौ – ववतुः - ववुः (ಪುಟ ೧೦೦, ನಿಯಮ ೧೪, ಪುಟ ೧೦೦, ನಿಯಮ ೧೩ ಅ, ಬ).

श्वि ಧಾತುವಿನ ಅಂಗವು शिश्वि ಪ್ರ. ಪು. शिश्वाय – शिश्वियतुः – शिश्वियुः

೯. अद्, ऋ, व्ये ಧಾತುಗಳ ಮುಂದಿನ थ ಪ್ರತ್ಯಯದ ಪೂರ್ವದಲ್ಲಿ इ ಆಗಮವು ನಿತ್ಯವಾಗಿ ಬರುವದು.

ಉದಾ: आदिथ, आरिथ, विव्ययिथ.

| | ಏ. | ದ್ವಿ. | ಬಹು. |
|---|---|---|---|
| ऋ ಧಾತುವಿನ ಪ್ರ. ಪು. ರೂಪಗಳು. | आर | आरतुः | आरुः |

೧೦. ವ್ಯಂಜನಾದಿ ಸಬಲಪ್ರತ್ಯಯಗಳು ಪರವಾಗಲು मस्ज् ಮತ್ತು नश् ಧಾತುಗಳೊಳಗಿನ अಕಾರದ ಮುಂದೆ न् ಆಗಮ ಬರುವದು.

ವ. ಪು. ಏ. { ममज्जिथ ಅಥವಾ ममंक्थ.
नेशिथ " ननंष्ठ.

೧೧. (ಅ) ಅಭ್ಯಾಸಾಕ್ಷರವು ಅ ಇದ್ದರೆ, ಅದಕ್ಕೆ ಆಕಾರಾದೇಶವಾಗುವದು.

(ಬ) ಅಕಾರಾದಿಯಾಗಿ ಸಂಯೋಗಾಂತವಾದ ಧಾತುಗಳ, ಋಕಾರಾದಿ ಧಾತುಗಳ, ಮತ್ತು अश् (ವ್ಯಾಪಿಸು, ೫ನೇ ಗ.) ಧಾತುವಿನ ಅಭ್ಯಾಸದ ಮುಂದೆ न् ಆಗಮ ಬರುತ್ತದೆ.

| | | ಏ. | ದ್ವಿ. | ಬಹು. |
|---|---|---|---|---|
| अर्ह् | ಪೂ. ಭೂ. ಪ್ರ. ಪು. | आनर्ह | आनर्हतुः | आनर्हुः |
| अन्त् | ಪೂ. ಭೂ. ಪ್ರ. ಪು. | आनन्त | आनन्ततुः | आनन्तुः |
| ऋज् | ಪೂ. ಭೂ. ಪ್ರ. ಪು. | आनृजे | आनृजाते | आनृजिरे |
| ऋच्छ् | ಪೂ. ಭೂ. ಪ್ರ. ಪು. | आनर्च्छ | आनर्च्छतुः | आनर्च्छुः |

೧೨. (ಅ) ಅ, ಆಕಾರಗಳ ಹೊರ್ತಾಗಿ ಉಳಿದ ದೀರ್ಘ ಸ್ವರಗಳು ಆದಿಯಲ್ಲುಳ್ಳ ಅಥವಾ ಸಂಯೋಗಪರವಾದ ಅಕಾರ ಹೊರ್ತಾಗಿ ಉಳಿದ ಹ್ರಸ್ವ ಸ್ವರಗಳು ಆದಿಯಲ್ಲುಳ್ಳ ಧಾತುಗಳಿಗೆ ಪೂರ್ಣಭೂತಕಾಲದಲ್ಲಿ आम् ಪ್ರತ್ಯಯ ಹಚ್ಚಿ ಅದರ ಮುಂದೆ कृ, भू, अस् (ಆಗು) ಎಂಬ ಧಾತುಗಳ ಪೂರ್ಣಭೂತ ಕಾಲದ ರೂಪಗಳನ್ನು ಕೂಡಿಸುವದುಂಟು. ऋच्छ् ಧಾತುವಿಗೆ ಈ ಕಾರ್ಯವಾಗುವದಿಲ್ಲ.

(ಬ) ೧೦ನೇ ಗಣದ ಧಾತುಗಳ, ಪ್ರೇರಣಾರ್ಥಕಧಾತುಗಳ, ಇಚ್ಛಾರ್ಥಕ ಧಾತುಗಳ, ಬೇರೆ ವಿಧದ ಸಾಧಿತಧಾತುಗಳ, ಒಂದಕ್ಕಿಂತ ಹೆಚ್ಚು ಸ್ವರಗಳುಳ್ಳ ಬಹುತರ ಎಲ್ಲ ಧಾತುಗಳ ಪೂರ್ಣಭೂತದ ರೂಪಗಳು ಈ ನೇಮದಂತೆ ಆಗುತ್ತವೆ.

ಇದಕ್ಕೆ आम् ಪ್ರಕೃತಿಕಾಂಗದ[1] ಪೂರ್ಣಭೂತಕಾಲವೆಂಬ ಸಂಜ್ಞೆಯು.

(ಕ) ಮೇಲೆ ಹೇಳಿದಂತೆ कृ ಧಾತುವಿನ ರೂಪಗಳನ್ನು ಕೂಡಿಸುವಾಗ ಆತ್ಮನೇಪದೀ ಧಾತುಗಳ ಮುಂದೆ ಆತ್ಮನೇಪದರೂಪಗಳನ್ನೂ, ಪರಸ್ಮೈಪದೀ ಧಾತುಗಳ ಮುಂದೆ ಪರಸ್ಮೈಪದರೂಪಗಳನ್ನೂ ಕೂಡಿಸತಕ್ಕದ್ದು.

---

[1] ಬಭೂವ ಮುಂತಾದ ಹಿಂದೆ ಹೇಳಿದ ರೂಪಗಳು ದ್ವಿತ್ವ ಪ್ರಕೃತಿಕಾಂಗದ ಪೂರ್ಣಭೂತಕಾಲದ ರೂಪಗಳು.

ಈಶ್ (ಆ.) ಆಳು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | ईशांचक्रे | ईशांचक्राते | ईशांचक्रिरे |
| ಮ. ಪು. | ईशांचकृषे | ईशांचक्राथे | ईशांचकृढ्वे |
| ಉ. ಪು. | ईशांचक्रे | ईशांचकृवहे | ईशांचकृमहे |

ईशामास; ईशाम्बभूव ಎಂಬ ರೂಪಗಳಾಗುತ್ತವೆ.

कथ् (೧೦ನೇ ಗ. ಪ. ಆ.).

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | कथयांचकार | कथयांचक्रतुः | कथयांचक्रुः |
| ಮ. ಪು. | कथयांचकर्थ | कथयांचक्रथुः | कथयांचक्र |
| ಉ. ಪು. | कथयांचकार-चकर | कथयांचकृव | कथयांचकृम |

ಆತ್ಮ. कथयांचक्रे ಇ.

आम् ಪ್ರತ್ಯಯದ ಹಿಂದಿನ अय ವಿಕರಣಕ್ಕೆ ಲೋಪ ಬರುವದಿಲ್ಲ. ಈ ವಿಕರಣಕ್ಕೆ ಆರ್ಧಧಾತುಕ ಪ್ರತ್ಯಯಗಳು ಪರವಾಗಲು ಬಹುತರ ಲೋಪ ಬರುವದಿಲ್ಲೆಂದು ಹಿಂದೆ ಹೇಳಿರುತ್ತೇವೆ.

೧೩. (ಅ) दय्, अय्, कास्, आस् ಧಾತುಗಳ ಪೂರ್ಣಭೂತಕಾಲದ ರೂಪಗಳು ೧೨ನೇ ನಿಯಮದಲ್ಲಿ ಹೇಳಿದಂತೆ ಆಗುತ್ತವೆ. उष्, विद्, जागृ ಧಾತುಗಳ ರೂಪಗಳು ವಿಕಲ್ಪದಿಂದ ಹೀಗಾಗುತ್ತವೆ.

(ಬ) भी, ह्री, भृ, हु ಧಾತುಗಳ ರೂಪಗಳೂ ವಿಕಲ್ಪದಿಂದ ೧೨ನೇ ನಿಯಮದಲ್ಲಿ ಹೇಳಿದಂತೆ ಆಗುತ್ತವೆ. ಆದರೆ ಅವುಗಳಿಗೆ ೩ನೇ ಗಣದ ಧಾತುಗಳಂತೆ ದ್ವಿತ್ವವಾದ ಬಳಿಕ आम् ಪ್ರತ್ಯಯವೂ, अस्, भू, कृ ಧಾತುಗಳಲ್ಲಿ ಯಾವದೊಂದರ ಪೂರ್ಣಭೂತಕಾಲದ ರೂಪಗಳೂ ಸೇರುತ್ತವೆ.

೧೪. आम् ಪ್ರತ್ಯಯವು ಸಬಲವಾಗಿರುವದರಿಂದ ಅದರ ಹಿಂದಿನ ಅಂತ್ಯಸ್ವರಕ್ಕೂ ಉಪಾಂತ್ಯಹ್ರಸ್ವಸ್ವರಕ್ಕೂ ಗುಣವಾಗುವದು. विद् ಧಾತುವಿಗೆ ಮಾತ್ರ ಈ ಕಾರ್ಯವಾಗುವದಿಲ್ಲ. ಉದಾ:

बिभयांचकार, जिह्रयांचकार. बिभरांचकार, विदांचकार ಇತ್ಯಾದಿ.

೧೫. मृ ಧಾತುವಿನ ಮುಂದೆ ಅನದ್ಯತನಭೂತಕಾಲ ಆಶೀರ್ವಾದಾರ್ಥಗಳ ಪ್ರತ್ಯಯಗಳು ಹೊರ್ತಾಗಿ ಉಳಿದ ಆರ್ಧಧಾತುಕಪ್ರತ್ಯಯಗಳೆಲ್ಲ ಪರಸ್ಮೈಪದದ ಪ್ರತ್ಯಯಗಳೇ ಬರುವವು.

೧೬. ಈ ಪಾಠದಲ್ಲಿಯೂ ಹಿಂದಿನ ಪಾಠದಲ್ಲಿಯೂ ಹೇಳಿದಂತೆ ಧಾತುಗಳ ಅಂಗಗಳನ್ನು ಸಿದ್ಧ ಮಾಡಿಕೊಂಡು, ಅವುಗಳಿಗೆ ಮೂಲಧಾತುವು ಪರಸ್ಮೈಪದಿಯಾಗಿರಲಿ ಆತ್ಮನೇಪದಿಯಾಗಿರಲಿ ಆತ್ಮನೇಪದಪ್ರತ್ಯಯಗಳನ್ನು ಸೇರಿಸಲು ಪೂರ್ಣ ಭೂತದ ಕರ್ಮಾರ್ಥಕರೂಪಗಳುಂಟಾಗುವವು.

गतायां रात्रौ सुप्ता वयं किल बहु विलेपिम ।

युधिष्ठिरेण पृष्टो लोमशोऽगस्त्यस्य प्रभावं कथयामास ।

कृतयुगे कालेया इति विश्रुता दानवा वृत्रं समाश्रित्य महीं स्वर्गलोकं च भृशं पीडयांचक्रुः । नैतत्कर्तुमानर्हुस्ते ।

तान्हन्तुं सेन्द्रा त्रिबुधा न शेकुः ।

ते ब्रह्माणमुपसंगम्योचुर्भगवन्नखिलं त्रैलोक्यं दानवैरर्द्यते किमत्र करवामहै ।

परमेष्ठ्युवाच भो देवा दधीचमृषिं गत्वा तस्यास्थीनि याचध्वम् । तेषां वज्रं कृत्वा वृत्रं हत ।

तथेति प्रतिज्ञाय ते सर्वे दधीचस्याश्रममुपययुः

तमृषिं देवाः प्रणेमुस्तस्यास्थीनि च ययाचिरे ।

ततः स महात्मा त्रैलोक्यस्य हितायात्मनः प्राणानुत्ससर्ज ।

तस्य परासोरस्थीनि देवा जगृहुस्त्वष्टारं च गत्वा तं[1] तेषामुग्रं वज्रं कारयामासुः ।

ततस्त्वष्टा शक्रमुवाचैतद्गृहीत्वा वृत्रं जहि ।

इन्द्रेण सहिता देवा रोदसी आवृत्य तिष्ठन्तं कालेयैरभिरक्षितं च वृत्रमासेदुः । तांश्च युद्धायाजुहुविरे ।

तैः सह देवानां तुमुलं युद्धं समापेदे । रजोभिः सर्वा दिशो व्यानशिरे । दानवेभ्यश्च देवा भृशं त्रेसुः ।

इतस्ततः प्रधावतां तेषां वेगं देवा दौर्बल्यान्न सेहिरे भीताश्च पलायामासुः ।

तादृशांस्तान्दृष्ट्वेन्द्रो विष्णुं शरणं वव्राज ।

ततो विष्णुरात्मनस्तेज इन्द्रे निदधे देवाश्च महर्षयश्चापि तथा विदधिरे ।

---

[1] ೨೧ನೇ ಪಾಠದ ೧೨ನೇ ನಿಯಮವು ನೋಡು.

ततो रणधुरामेकोऽपीन्द्र उवाह ।
स वृत्रस्य वधाय महद्वज्रं मुमोच । तेन हतो वृत्रो भूमौ सुष्वाप ।
कोट्या कोट्या पुरद्वारमेकैकं रुरुधे द्विषाम् ॥
तत्कर्म वालिपुत्रस्य दृष्ट्वा विश्वं विसिष्मिये ।
संत्रेसू राक्षसाः सर्वे बहु मेने च राघवः ॥
सुग्रीवो मुमुदे देवाः साध्वित्यूचुः सविस्मयाः ।
बिभीषणोऽभितुष्टाव प्रशशंसुः प्लवंगमाः ॥
राघवो न दयां चक्रे दधुर्धैर्यं न केचन ।
मम्रे पतङ्गवद्वीरैर्हाहेति च विचुक्रुशे ॥
[1]प्राणा दध्वंसिरे गात्रं तस्तम्भे च प्रिये हते ।
उच्छश्वास चिराद्दीना रुरोदासौ ररास च ॥
लोहबन्धैर्बबन्धे नु वज्रेण किं विनिर्ममे ।
मनो मे न विना रामाद्यत्पुस्फोट सहस्रधा ॥
उत्तेरिथ समुद्रं त्वं मदर्थेऽरीञ् जिहिंसिथ ।
ममर्थ चातिघोरां मां [2]धिग्जीवितलघूकृताम् ॥
मालिन्यं मार्जयामास चन्द्रमास्तिमिरैः कृतम् ।
खलैर्दत्तं मृषां दोषमिव सत्पुरुषः सताम् ॥

[3]ऐन्द्रेण ह वै महाभिषेकेण संवर्त आङ्गिरसो मरुत्तमाविक्षितमभिषिषेच । तस्मादु मरुत्त आविक्षितः समन्तं सर्वतः पृथिवीं जयन्परीयायाश्वेन च मेध्येनेजे । [4]तदप्येष श्लोकोऽभिगीतः । मरुतः परिवेष्टारो मरुत्तस्यावसन्गृहे । आविक्षितस्य कामप्रेर्विश्वे देवाः सभासद इति ॥

---

[1] ಇಂದ್ರಜಿತುವಿನ ಅಸ್ತ್ರದಿಂದ ಕವಳಿ ಹತ್ತಿ ಬಿದ್ದಂಥ ರಾಮನನ್ನು ಕಂಡು ಸೀತಾದೇವಿಯ ಅವಸ್ಥೆಯು ಹ್ಯಾಗಾಯಿತೆಂಬದು ಈ ಶ್ಲೋಕದಲ್ಲಿ ಹೇಳಿರುತ್ತದೆ. ಆ ಕಾಲಕ್ಕೆ ಆಕೆ ಮಾಡಿದಂಥ ಶೋಕವು ಮುಂದಿನ ಎರಡು ಶ್ಲೋಕಗಳಲ್ಲಿ ವರ್ಣಿಸಿರುತ್ತದೆ.

[2] धिक् ಎಂಬ ಅವ್ಯಯವು ದ್ವಿತೀಯಾವಿಭಕ್ತಿಯ ಮೇಲೆ ಬರುತ್ತದೆ.

[3] ऐन्द्रो महाभिषेकः—ರಾಜ್ಯಾಭಿಷೇಕದ ಇದೊಂದು ಪ್ರಕಾರವು. ಇಂದ್ರನಿಗೆ ಪಟ್ಟಗಟ್ಟಿದಾಗ ಈ ತರದ ರಾಜ್ಯಾಭಿಷೇಕವನ್ನು ಮಾಡಿದರು. ಮೃತ್ಯುಲೋಕದ ಅರಸರಿಗೆ ಈ ವಿಧದಿಂದ ಪಟ್ಟಗಟ್ಟಿದರೆ, ಅವರು ಅಜೇಯರಾಗಿ ಸಮಗ್ರಪೃಥ್ವಿಯನ್ನು ಗೆಲ್ಲುವರೆಂದು ಜನರು ನಂಬುವರು.

[4] तद्=तस्मात् ಎಂಬ ಅರ್ಥವನ್ನು ಕೊಡುತ್ತದೆ.

ಕಾಲೇಯರ ಮುಖ್ಯಸ್ಥನು ಕೊಲ್ಲಲ್ಪಟ್ಟ (हन् कर्मार्थक) ಬಳಿಕ ಅವರು ಜೀವದ ಹಂಗುದೊರೆದು ಕಾದಿದರು (युध्); ಆದರೆ ಕಡೆಯಲ್ಲಿ ದೇವತೆಗಳು ಅವರನ್ನು ಜಯಿಸಿದರು (जि).

ಆಗಲವರು ಯೋಚನೆಯ ಮಾಡಿ (मन्त्र् अथवा मन्त्रं कृ) ತ್ರೈಲೋಕ್ಯವನ್ನೆಲ್ಲ ಹಾಳು ಮಾಡುವದನ್ನು ನಿಶ್ಚಯಿಸಿಕೊಂಡರು (निस्+चि).

ಎಲ್ಲ ಋಷಿಗಳ ಮತ್ತು ಬ್ರಾಹ್ಮಣರ ಕೊಲೆಯೇ ತಮ್ಮ ಇಷ್ಟಸಿದ್ಧಿಗೆ ತಕ್ಕ ಉಪಾಯವೆಂದು ಅವರು ಎಣಿಸಿದರು (मन्); ಯಾಕಂದರೆ ಅವರು ಆಚರಿಸುವ (तप् ಅಥವಾ चर्) ತಪಸ್ಸನ್ನೂ ಅವರು ಮಾಡುವ ಯಜ್ಞಗಳನ್ನೂ ಜಗತ್ತು ಅವಲಂಬಿಸಿರುತ್ತದೆ (आ+श्रि ಅಥವಾ अव+लम्ब्) ಎಂದು ಅವರು ನೆನಿಸಿದ್ದರು.

ಆದದರಿಂದ ಅವರು ಹಗಲಲ್ಲಿ ಸಮುದ್ರದೊಳಗೆ ಅಡಗಿ ನಿಲ್ಲುವರು (प्र+छद्), ರಾತ್ರಿಯಲ್ಲಿ ಹೊರಬಿದ್ದು (चर्), ಬಹಳ ಮಂದಿ ಬ್ರಾಹ್ಮಣರನ್ನು ಕೊಲ್ಲುವರು (हन्), ಮತ್ತು ಜನರನ್ನೆಲ್ಲ ಗೋಳಾಡಿಸುವರು (अर्द् ಅಥವಾ पीड्).

ವಸಿಷ್ಠ ಭಾರ್ಗವ ಮುಂತಾದ ಋಷಿಗಳ ಆಶ್ರಮವನ್ನು ಹಾಳುಗೆಡಹಿ (अव+साद् प्रेरणा.) ಉಳುಹಿಲ್ಲದಂತೆ ಮಾಡಿದರು (कृ). ಬಳಿಕ ಅವನ್ನು ಸುಟ್ಟರು (दह्).

ಮನುಷ್ಯರಲ್ಲಿ ಯಾರೂ ಯಜ್ಞ ಮಾಡಲಿಲ್ಲ (यज्), ಆದರಿಂದ ದೇವತೆಗಳು ಹೆದರಿದರು (भी ಅಥವಾ त्रस्).

ಈ ಕೃತ್ಯವನ್ನು ಯಾರು ಮಾಡಿದರೆಂಬದು ಅವರಿಗೆ ತಿಳಿಯಲಿಲ್ಲ (ज्ञा); ಆದಕಾರಣ ವಿಷ್ಣುವಿನ ಬಳಿಗೆ ಹೋಗಿ (उप+गम्), ಸಹಾಯ ಬೇಡಿದರು (याच्).

ಆಗ ಕಾಲೇಯರು ಈ ಕೃತ್ಯವನ್ನು ರಾತ್ರಿಯಲ್ಲಿ ಮಾಡಿ, ಹಗಲಲ್ಲಿ ಸಮುದ್ರದೊಳಗೆ ಅಡಗಿಕೊಳ್ಳುತ್ತಾರೆಂದು ವಿಷ್ಣುವು ಅವರಿಗೆ ಹೇಳಿದನು (कथ् ಅಥವಾ चक्ष्).

ತರುವಾಯ ಅವನು ಆ ದೇವತೆಗಳಿಗೆ ಅಗಸ್ತ್ಯನ ಬಳಿಗೆ ಹೋಗಿ ಸಮುದ್ರವನ್ನೆಲ್ಲ ಕುಡಿ ಎಂದು ಬೇಡಿಕೊಳ್ಳಿರೆಂದು ಹೇಳಿದನು (आ+दिश्).

ದೇವತೆಗಳು ಅಗಸ್ತ್ಯನ ಬಳಿಗೆ ಹೋಗಿ (उप+इ), ಅವನಿಗೆ ನಮಸ್ಕಾರ ಮಾಡಿ (प्र+नम्), ಅವನ ಪರಾಕ್ರಮವನ್ನು ಹೊಗಳಿದರು (स्तु ಅಥವಾ प्र+शंस्).

ಆಗಲವನು, ನೀವು ಬಂದ ಕಾರಣವೇನೆಂದು ಕೇಳಿದನು (प्रच्छ्); ಅವರು ಅದನ್ನು ತಿಳಿಸಲಾಗಿ ಅಗಸ್ತ್ಯನು ಸಮುದ್ರಕ್ಕೆ ಹೋದನು (या), ದೇವತೆಗಳು ಅವನ ಹಿಂದಿಂದೆ ಹೋದರು.(अनु+या ಅಥವಾ अनु+इ).

ಅವನು ಸಮುದ್ರವನ್ನು ಕುಡಿದುಬಿಟ್ಟನು (पा), ಮತ್ತು ಕಾಲೇಯರು ಅಡಗುವ ಸ್ಥಳದಿಂದ ಹೊರಗೆ ಎಳೆಯಲ್ಪಟ್ಟರು (आ+कृष् ಕರ್ಮ.).

ಆಗ ಕಾಳಗವಾಯಿತು (सम्+आ+पत्), ಮತ್ತು ದೇವತೆಗಳು ಅವರನ್ನು ಕೊಂದರು.

---

## ಕೋಶ ೧೪.

अगस्त्य (ಪು.) ಒಬ್ಬ ಋಷಿಯ ಹೆಸರು.

अतिघोर (ವಿ.) ಬಹಳ ಭಯಂಕರವಾದ, ನಿಷ್ಠುರವಾದ.

अन्ततः (ಅ.) ಕಟ್ಟಕಡೆಗೆ.

अभिगीत (अभि+गै ಧಾತುವಿನ ಭೂತಕೃ.) ಹಾಡಿದ, ಸ್ತುತಿಸಲ್ಪಟ್ಟ.

अर्थ् (प्र ಪೂರ್ವಕ ೧೦ನೇ ಗ. ಆ.) ಬೇಡಿಕೊಳ್ಳು.

अर्द् (೧ನೇ ಗ. ಪ. ೧೦ನೇ ಗ.) ಗೋಳಾಡಿಸು, ದುಃಖ ಕೊಡು.

अश् (೧ನೇ ಗ. ಆ. वि ಪೂರ್ವಕ) ವ್ಯಾಪಿಸು, ಹಬ್ಬು.

अस्थि [1] (ನ.) ಎಲುಬು.

आङ्गिरस (ಪು.) अङ्गिरस्ನ ವಂಶದವ.

आविक्षित (ಪು.) अविक्षित्ನ ಮಗನು.

इ (೨ನೇ ಗ. ಪ. परि ಪೂರ್ವಕ) ಪ್ರದಕ್ಷಣೆ ಮಾಡು.

इतस्ततः (ಅ.) ಅತ್ತಿತ್ತ.

उ (ಅವ್ಯಯ) ಪಾದಪೂರಣಾರ್ಥಕ.

उग्र (ವಿ.) ಕಠಿಣವಾದ, ನಿಷ್ಠುರ.

उष् (೧ನೇ ಗ. ಪ.) ಸುಡು.

एकैक (ಸ.) ಒಬ್ಬೊಬ್ಬ.

ऐन्द्र (ವಿ.) ಇಂದ್ರನ ಸಂಬಂಧದ.

कामप्रि (ಪು.) ಮನೋರಥಗಳು ಪೂರ್ಣವಾದ ಮನುಷ್ಯ.

कारय (कृ ಧಾತುವಿನ ಪ್ರೇರಣಾರ್ಥಕರೂಪ) ಮಾಡಿಸು.

कालेय (ಪು. ನಿತ್ಯಬಹುವಚನ) ಕೆಲವು ರಾಕ್ಷಸರ ಹೆಸರು.

कृतयुग (ನ.) ಹಿಂದುಪುರಾಣಗಳಲ್ಲಿ ಹೇಳಿದ ನಾಲ್ಕು ಯುಗಗಳಲ್ಲಿ ಮೊದಲನೇದು.

क्रुश् (೧ನೇ ಗ. ಪ. वि ಪೂರ್ವಕ) ಒದರು, ಅಳು.

चर् (೧ನೇ ಗ. ಪ.) ಹೋಗು, ಹೊರವಡು.

चिरात् (ಅ.) ಬಹಳ ದಿವಸಗಳ ಮೇಲೆ.

छद् (೧೦ನೇ ಗ. प्र ಪೂರ್ವಕ) ಅಡಗಿಸು, ಮುಚ್ಚು.

जीवितलघूकृत (ವಿ.) ಬದುಕಿದ್ದ ಮಾತ್ರಕ್ಕೆ, ಹೀನವಾದಂಥ.

तप् (೧ನೇ ಗ. ಪ.) ತಪಸ್ಸು ಮಾಡು.

तादृश (ವಿ.) ಅದರಂಥ, ಅಂಥಾ.

तिमिर (ಪು. ನ.) ಕತ್ತಲೆ.

तुमुल (ವಿ.) ಭಯಂಕರವಾದ.

त्रस् (सम् ಪೂರ್ವಕ) ಗಾಬರಿಯಾಗು, ಹೆದರು.

त्रैलोक्य (ನ.) ಮೂರು ಲೋಕಗಳು.

दद् (೧ನೇ ಗ. ಆ.) ಕೊಡು.

दधीच (ಪು.) ಒಬ್ಬ ಋಷಿಯ ಹೆಸರು.

दय् (೧ನೇ ಗ. ಆ.) ದಯಮಾಡು, ಕರುಣಿಸು.

दानव (ಪು.) ರಾಕ್ಷಸ.

दिश् [2] (ಸ್ತ್ರೀ.) ದಿಕ್ಕು.

---

[1] ೧೬ನೇ ಪಾಠದ ೧೦ನೇ ಕಲಮು ನೋಡು.

[2] ೧೬ನೇ ಪಾಠದ ೨೨ನೇ ಕಲಮು ನೋಡು.

हीन (ವಿ.) ಬಡ, ದಿಕ್ಕಿಲ್ಲದ.
दोष (ಪು.) ಕುಂದು, ಕಲಿಣ.
दौर्बल्य (ನ.) ಬಲಹೀನತ್ವ.
धिक् (ಅ.) ಛಿ, ಛತ್.
पतङ्गवत् (ಅ.) ದೀಪದ ಹುಳದಂತೆ.
परमेष्ठिन् (ಪು.) ಬ್ರಹ್ಮದೇವರು.
परासु (ವಿ.) ಸತ್ತ, ಜೀವವಿಲ್ಲದ.
परिवेष्टृ (ಪು.) ಬಡಿಸುವವ.
पुरद्वार (ನ.) ಅಗಸೀ ಬಾಗಿಲ.
प्रभाव (ಪು.) ದೊಡ್ಡಸ್ತಿಕೆ, ಪರಾಕ್ರಮ, ಶೌರ್ಯ.
प्लवंगम (ಪು.) ಮಂಗ.
फण् (೧ನೇ ಗ. ಪ.) ಹೋಗು.
फल् (೧ನೇ ಗ. ಪ.) ಫಲಿಸು, ಕಾಯಾಗು.
बहु (ಅ.) ಬಹಳವಾಗಿ.
बिभीषण (ಪು.) ರಾವಣನ ತಮ್ಮನ ಹೆಸರು.
भ्रस्ज्[1] (೬ನೇ ಗ. ಪ.) ಸುಡು.
भ्राज् (೬ನೇ ಗ. ಪ. ಅ.) ಹೊಳೆ, ಮಿಂಚು.
भ्राश् (೧ನೇ ಗ. ಅ.) ಹೊಳೆ, ಮಿಂಚು.
भ्लाश् (೧ನೇ ಗ. ಅ.) ಹೊಳೆ, ಮಿಂಚು.
मदर्थे (ಅ.) ನನ್ನ ದೆಸೆಯಿಂದ.
मन्त्र् (೧೦ನೇ ಗ. ಅ.) ಆಲೋಚಿಸು.
मरुत् (ಪು.) ದೇವತೆ.
मरुत्त (ಪು.) ಒಬ್ಬ ಅರಸನ ಹೆಸರು.
महाभिषेक (ಪು.) [महत् (ವಿ.) ದೊಡ್ಡ] ದೊಡ್ಡ ಪಟ್ಟಾಭಿಷೇಕ.
मालिन्य (ನ.) ಕತ್ತಲೆ, ಹೊಲಸು.
मृज् (೧೦ನೇ ಗ.) ಒರಸು, ತೊಳೆ.
मृषा (ಅ.) ಸುಳ್ಳೇ (ಸುಮ್ಮಸುಮ್ಮನೆ).
मेध्य (ವಿ.) ಯಜ್ಞಕ್ಕೆ ಯೋಗ್ಯವಾದಂಥ ಅಥವಾ ನೇಮಿಸಿದಂಥ.
रणधुरा (रण ಪು. ನ., धुर् ಸ್ತ್ರೀ.) ಯುದ್ಧದ ಭರ.
रस् (೧ನೇ ಗ. ಪ.) ಒದರು, ಚೀರು.
रोदसी (ನ. ನಿತ್ಯದ್ವಿವಚನ) ಸ್ವರ್ಗಭೂಲೋಕಗಳು.
लप् (೧ನೇ ಗ. ಪ. वि ಪೂರ್ವಕ) ಅಳು.
लम्ब् (೧ನೇ ಗ. ಅ. अव ಪೂರ್ವಕ) ಅವಲಂಬಿಸು.
लोमश (ಪು.) ಒಬ್ಬ ಋಷಿಯ ಹೆಸರು.
लोहबन्ध (ಪು.) (लोह ಪು. ನ. ಕಬ್ಬಿಣ, बन्ध ಸಂಕೋಲಿ) ಕಬ್ಬಿಣದ ಸಂಕೋಲಿ.
वज्र (ಪು. ನ.) ಬಹು ಗಟ್ಟಿಯಾದಂಥ, ಯಾವದಕ್ಕೂ ಮಣಿಯದಂಥ ಪದಾರ್ಥ.
वालिपुत्र (ಪು.) ವಾಲಿ ಎಂಬ ಒಬ್ಬ (ಮಂಗಗಳ) ಅರಸನ ಮಗ.
विबुध (ಪು.) ದೇವತೆ.
विश्रुत (ವಿ.) ಹೆಸರಾದ, ಪ್ರಖ್ಯಾತವಾದ.
विश्वे देवाः (ನಿತ್ಯಬಹುವಚನ) ದೇವತೆಗಳೆಲ್ಲ.
वेग (ಪು.) ತ್ವರೆ, ಆವೇಶ.
शक्र (ಪು.) ಇಂದ್ರ.
श्रि (आ ಪೂರ್ವಕ ೧ನೇ ಗ. ಪ.) ಅವಲಂಬಿಸು.
संवर्त (ಪು.) ಒಬ್ಬ ಪುರೋಹಿತನ ಹೆಸರು.
सत्पुरुष (ಪು.) ಒಳ್ಳೇ ಮನುಷ್ಯ.
सभासद् (ಪು.) ಸಭಿಕ, ಸಾಮಾಜಿಕ.
समन्तम् (ಅ.) ಸುತ್ತಲು.
सर्वतः (ಅ.) ನಾಲ್ಕೂ ಕಡೆಗೆ.
सविस्मय (ವಿ.) ಆಶ್ಚರ್ಯವುಳ್ಳ.
सहस्रधा (ಅ.) ಸಾವಿರ ಭಾಗ, ಸಾವಿರಾರು ಪಾಲುಗಳಲ್ಲಿ, ತುಂಡುತುಂಡಾಗಿ.

---

[1] ಆಶೀರ್ವಾದಾರ್ಥ ಪರಸ್ಮೈಪದಪ್ರತ್ಯಯಗಳ ಹೊರ್ತಾಗಿ ಉಳಿದ ಆರ್ಧಧಾತುಕ ಪ್ರತ್ಯಯಗಳು ಪರವಾಗಲು ಈ ಧಾತುವಿನ भ्रस्ज् ಅಂಗಕ್ಕೆ ವಿಕಲ್ಪದಿಂದ भर्ज् ಆದೇಶವಾಗುವದು, ಅಂದರೆ भ्रस्ज् ಮತ್ತು भर्ज् ಎಂಬವೆರಡು ಅಂಗಗಳಾಗುವವು. भ्रस्ज् ಅಂಗದೊಳಗಿನ स्क್ಕೆ ಲೋಪ ಬಾರದಿದ್ದಾಗ ज्ಕಾರಾದೇಶವಾಗುವದು (ಪಾಠ ೯, ನಿಯಮ ೧೦).

साधु (ವಿ.) ನೆಟ್ಟಗೆ, ಒಳಿತಾಗಿ.
सुग्रीव (ಪು.) ಮಂಗಗಳ ಅರಸನ ಹೆಸರು.
सृज् (उत् ಪೂರ್ವಕ ೬ನೇ ಗ. ಪ.) ಬಿಡು.
सेन्द्र (ವಿ.) ಇಂದ್ರನ ಸಹಿತವಾದ.
स्तु (೨ನೇ ಗ. अभि ಪೂರ್ವಕ) ಹೊಗಳು.
स्फुट् (೬ನೇ ಗ. ಪ.) ಒಡೆಯು, ಸೀಳು.

---

ಮರಣ, ಘಾತ, ಕೊಲೆ वध (ಪು.).
ಜೀವದ ಹಂಗುದೊರೆದು आत्मनिरपेक्षम् (ಅ.), साहसेन (ಅ.), प्रसह्य (ಅ.).
ಹಾಳು ಮಾಡು उत्+छिद् (೭ನೇ ಗ. ಪ.); नि+सूद् (೧೦ನೇ ಗ. ಪ.).
ಹಾಳು ಮಾಡುವದಕ್ಕೆ निषूदयितुम्, उच्छेत्तुम्.
ಕೊಲೆ वध (ಪು.) ध्वंस् (ಪು.), नाश (ಪು.), अवसाद (ಪು.).
ಇಷ್ಟಸಿದ್ಧಿಗೆ फलावाप्तये [फलावाप्ति (ಸ್ತ್ರೀ.), ಶಬ್ದದ ಚತುರ್ಥಿ], कार्य (ನ.), फल (ನ.).
ಸಾಧನ, ಉಪಾಯ उपाय (ಪು.), अभ्युपाय (ಪು.).
ಪರಾಕ್ರಮ प्रभाव (ಪು.).
ಅಡಗುವ ಸ್ಥಳ आश्रयस्थान (ನ.).
ಕಾರಣ, ಹೇತು प्रयोजन (ನ.).
ಉಲುವಿಲ್ಲದ, ಒಕ್ಕಲಿಲ್ಲದ निर्जन (ವಿ.).
ತಪಸ್ಸು तपस् (ನ.).
ಬರುವಿಕೆ, ಭೇಟಿ आगमन (ನ.), आगम (ಪು.).
ಬರುವಿಕೆಯ ಕಾರಣ आगमनप्रयोजन (ನ.).

---

## ೧೫ನೇ ಪಾಠ.

### ೧ನೇ ಭಾಗ.

#### ೧ನೇ ೨ನೇ ಭವಿಷ್ಯತ್ಕಾಲಗಳೂ ಸಂಕೇತಾರ್ಥವೂ.

##### ೧. ಮೊದಲನೇ ಅಥವಾ ಅನದ್ಯತನಭವಿಷ್ಯತ್ಕಾಲ.

೧. ಧಾತುವಿಗೆ तृ ಪ್ರತ್ಯಯವನ್ನು ಹಚ್ಚಬೇಕು. ಈ ಪ್ರತ್ಯಯದ ಹಿಂದಿನ ಅಂತ್ಯಸ್ವರಕ್ಕೂ ಉಪಾಂತ್ಯಹ್ರಸ್ವಸ್ವರಕ್ಕೂ ಗುಣವಾಗುವದು. ಈ ವಿಧವಾಗಿ ಉಂಟಾದ ಕರ್ತೃವಾಚಕ ಪುಲ್ಲಿಂಗನಾಮದ ಪ್ರಥಮಾವಿಭಕ್ತಿಯ ರೂಪಗಳು ೧ನೇ ಭವಿಷ್ಯತ್ಕಾಲದ ಪ್ರಥಮಪುರುಷದ ಆಖ್ಯಾತರೂಪಗಳಾಗುವವು. ಮಧ್ಯಮೋತ್ತಮಪುರುಷಗಳಲ್ಲಿ ಪ್ರಥಮಪುರುಷೈಕವಚನದ ರೂಪಕ್ಕೆ अस् (ಆಗು) ಧಾತುವಿನ ವರ್ತಮಾನಕಾಲದ ಮಧ್ಯಮೋತ್ತಮಪುರುಷಗಳ ರೂಪಗಳನ್ನು ಸೇರಿಸಲಿಕ್ಕೆ ಬೇಕು. ಮೂಲಧಾತು ಪರಸ್ಮೈಪದೀ ಇದ್ದರೆ अस् ಧಾತುವಿನ ಪರಸ್ಮೈಪದರೂಪಗಳನ್ನೂ, ಆತ್ಮನೇಪದಿ ಇದ್ದರೆ ಆತ್ಮನೇಪದರೂಪಗಳನ್ನೂ ಸೇರಿಸತಕ್ಕದ್ದು.

೨. तृ ಪ್ರತ್ಯಯದ ಪೂರ್ವದಲ್ಲಿ सेट् ಧಾತುಗಳ ಮುಂದೆ इ ಆಗಮವು ಬರುತ್ತದೆ, वेट् ಧಾತುಗಳ ಮುಂದೆ ವಿಕಲ್ಪದಿಂದ ಬರುತ್ತದೆ, अनिट् ಧಾತುಗಳ ಮುಂದೆ

इ ಆಗಮ ಬರುವದಿಲ್ಲ. इष्, सह्, लुभ्, रुष्, रिष् ಧಾತುಗಳ ಮುಂದೆ त् ಪ್ರತ್ಯಯದ ಪೂರ್ವದಲ್ಲಿ इಕಾರಾಗಮವು ವಿಕಲ್ಪದಿಂದ ಬರುವದು.

೩. ಪೂರ್ಣಭೂತಕಾಲದ ಪ್ರತ್ಯಯಗಳ ಹೊರ್ತು ಉಳಿದ ಆರ್ಧಧಾತುಕ ಪ್ರತ್ಯಯಗಳು ಪರವಾಗಲು ग्रह् ಧಾತುವಿನ ಮುಂದಿನ इ ಆಗಮಕ್ಕೆ ईಕಾರಾದೇಶವಾಗುವದು. ಪೂರ್ಣಭೂತಕಾಲದ ಪ್ರತ್ಯಯಗಳೂ, ಆಶೀರ್ವಾದಾರ್ಥದ ಆತ್ಮನೇಪದಪ್ರತ್ಯಯಗಳೂ, ಅನದ್ಯತನಭೂತದ ಪರಸ್ಮೈಪದಪ್ರತ್ಯಯಗಳೂ ಇವುಗಳ ಹೊರ್ತಾಗಿ ಉಳಿದ ಆರ್ಧಧಾತುಕ ಪ್ರತ್ಯಯಗಳು ಪರವಾಗಲಾಗಿ ॠಕಾರಾಂತ ಧಾತುಗಳ ಮತ್ತು वृ ಧಾತುವಿನ ಮುಂದೆ ಬರುವ इ ಆಗಮಕ್ಕೆ ವಿಕಲ್ಪದಿಂದ ईಕಾರಾದೇಶವಾಗುವದು.

೪. ಕರ್ಕಶವ್ಯಂಜನಾದಿ ಸಬಲಪ್ರತ್ಯಯವು ಪರವಾಗಲು अनिट् ಧಾತುಗಳೊಳಗಿನ ಉಪಾಂತ್ಯ ऋಕಾರಕ್ಕೆ ವಿಕಲ್ಪದಿಂದ र ಆದೇಶವಾಗುವದು. ಉದಾ: स्पृश्-पर्ष्टा ಅಥವಾ स्प्रष्टा. सृज् ಮತ್ತು दृश् ಧಾತುಗಳ ರೂಪಗಳು स्रष्टा, द्रष्टा ಆಗುತ್ತವೆ (ಪುಟ ೧೦೧, ನಿಯಮ ೧೮ ನೋಡು).

೫. सह् ಧಾತುವಿನ हಕ್ಕೆ ಆದೇಶವಾಗಿ ಬಂದ ढಕಾರವು (ಪುಟ ೫೭, ನಿಯಮ ಜದಲ್ಲಿ ಹೇಳಿದಂತೆ) ಲೋಪವಾದಾಗ ಅದರ ಹಿಂದಿನ अ, आ ಗಳಿಗೆ ओಕಾರಾದೇಶವಾಗುವದು (वह् ಧಾತುವಿನಂತೆ ಪುಟ ೧೦೭, ನಿಯಮ ೨ ನೋಡು). सह्+ता=सढ्+ता (ಪುಟ ೫೭, ನಿಯಮ ಗ)=सढ्+धा (ಪುಟ ೫೭, ನಿಯಮ ಘ)= सढ्+ढा (೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೨೪, ಟಿಪ್ಪಣಿ ೧, ಉತ್ತರ ಭಾಗ)= साढा (ಪುಟ ೫೭, ನಿಯಮ ಜ)=सोढा; ಇದರಂತೆ वह्+ता=वोढा.

भू ಆಗು.

ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | भविता | भवितारौ | भवितारः |
| ಮ. ಪು. | भवितासि | भवितास्थः | भवितास्थ |
| ಉ. ಪು. | भवितास्मि | भवितास्वः | भवितास्मः |

लभ्+ता=लभ्+धा (ಪುಟ ೫೭, ನಿಯಮ ಘ)=लब्+धा (ಪುಟ ೫೯, ನಿಯಮ ಜ)= लब्धा; दह्+ता=दघ्+ता (ಪುಟ ೫೯, ನಿಯಮ ಫ)=दघ्+धा (ಪುಟ ೫೭, ನಿಯಮ ಘ)=दग्+धा (ಪುಟ ೫೯, ನಿಯಮ ಜ)=दग्धा; नह्+ता=नध्+ता (ಪುಟ ೧೦೯, ನಿಯಮ ೧ ಬ); नध्+धा (ಪುಟ ೫೮, ನಿಯಮ ಘ)=नद्+धा (ಪುಟ ೫೯, ನಿಯಮ ಜ) =नद्धा; सृज्+ता=स्रज्+ता (ಪುಟ ೧೦೧, ನಿಯಮ ೧೮) =स्रष्+ता (ಪುಟ ೬೨,

ನಿಯಮ ಟ) = स्रष् + टा (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೨೪, ಟಿಪ್ಪಣಿ ೧, ಉತ್ತರ ಭಾಗ) = स्रष्टा; सृप् + ता = सर्प्ता, ಅಥವಾ स्रप् + ता = सप्ता ಅಥವಾ स्रप्ता.

सृप् ಅನಂದ ಪದ.

ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | मोदिता | मोदितारौ | मोदितारः |
| ಮ. ಪು. | मोदितासे | मोदितासाथे | मोदिताध्वे |
| ಉ. ಪು. | मोदिताहे | मोदितास्वहे | मोदितास्महे |

अस् ಧಾತುವಿನ ವರ್ತಮಾನಕಾಲದ ಪರಸ್ಮೈಪದ ಆತ್ಮನೇಪದರೂಪಗಳು ೪೦, ೪೧ನೇ ಪುಟಗಳಲ್ಲಿ ಕೊಟ್ಟವೆ.

೨. ಎರಡನೇ ಅಥವಾ ಅದ್ಯತನಭವಿಷ್ಯತ್ಕಾಲ.

೧. ವರ್ತಮಾನಕಾಲದ ಪ್ರತ್ಯಯಗಳ ಹಿಂದೆ स्य ಕೂಡಿಸಲು ಈ ಕಾಲದ ಪ್ರತ್ಯಯಗಳುಂಟಾಗುತ್ತವೆ. ಈ ಪ್ರತ್ಯಯದ ಹಿಂದಿನ ಧಾತುವು सेट् ಇದ್ದರೆ, स्य ದ ಪೂರ್ವದಲ್ಲಿ इ ಆಗಮ ಬರುವದು; वेट् ಇದ್ದರೆ, ವಿಕಲ್ಪದಿಂದ ಬರುವದು, अनिट् ಇದ್ದರೆ, ಬರುವದಿಲ್ಲ.

ಈ ಕಾಲದ ಪ್ರತ್ಯಯಗಳು ಪರವಾಗಲು ಧಾತುಗಳ ಅಂತ್ಯಸ್ವರಕ್ಕೂ ಉಪಾಂತ್ಯಹ್ರಸ್ವಸ್ವರಕ್ಕೂ ಗುಣವಾಗುವದು.

(ಆ) सಕಾರಾದಿ ಆರ್ಧಧಾತುಕ ಪ್ರತ್ಯಯಗಳು ಪರವಾಗಲು सಕಾರಾಂತ ಧಾತುವಿನ स್ ಕ್ಕೆ त् ಆದೇಶವಾಗುವದು. ಉದಾ: वस् + स्यति = वत् + स्याति वत्स्याति.

೨. ऋಕಾರಾಂತ ಧಾತುಗಳೂ हन्, गम् (ಪರ.) ಧಾತುಗಳೂ अनिट् ಇದ್ದಾಗ್ಯೂ ಅವುಗಳ ಮುಂದೆ स्य (ವಿಕರಣ) ಬರಲು इ ಆಗಮ ಬರುವದು. कृत्, नृत् ಧಾತುಗಳು सेट् ಇದ್ದಾಗ್ಯೂ ಅವುಗಳ ಮುಂದೆ सಕಾರಾದಿ ಆರ್ಧಧಾತುಕ ಪ್ರತ್ಯಯಗಳು ಬರಲು इ ಆಗಮವು ವಿಕಲ್ಪದಿಂದ ಬರುವದು. ಉದಾ: हनिष्यति, गमिष्यति, करिष्यति; कर्त्स्यति ಅಥವಾ कर्तिष्यति; नर्त्स्यति ಅಥವಾ नर्तिष्यति.

೩. क्लृप्, वृत्, वृध्, शृध्, स्यन्द् ಮುಂತಾದ ಧಾತುಗಳು ಎರಡನೇ ಭವಿಷ್ಯತ್ಕಾಲದಲ್ಲಿ ವಿಕಲ್ಪದಿಂದ ಪರಸ್ಮೈಪದಪ್ರತ್ಯಯಗಳನ್ನು ಧರಿಸುತ್ತವೆ. ಆದರೆ ಆ ಪ್ರತ್ಯಯಗಳ ಹಿಂದೆ इಕಾರಾಗಮವು ಬರುವದಿಲ್ಲ. क्लृप् ಧಾತುವಿಗೆ ಮೊದಲನೇ ಭವಿಷ್ಯತ್ಕಾಲದಲ್ಲಿಯೂ ಈ ನಿಯಮವು ಹತ್ತುತ್ತದೆ.

लभ्.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | लप्स्यते | लप्स्येते | लप्स्यन्ते |
| ಮ. ಪು. | लप्स्यसे | लप्स्येथे | लप्स्यध्वे |
| ಉ. ಪು. | लप्स्ये | लप्स्यावहे | लप्स्यामहे |

भू.

| | | | |
|---|---|---|---|
| ಪ್ರ. ಪು. | भविष्यति | भविष्यतः | भविष्यन्ति |
| ಮ. ಪು. | भविष्यसि | भविष्यथः | भविष्यथ |
| ಉ. ಪು. | भविष्यामि | भविष्यावः | भविष्यामः |

लभ् + स्य = लप् + स्य (೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೫, ಟಿಪ್ಪಣಿ ೨) = लप्स्य; लप्स्य + ते = लप्स्यते. दिश् + स्य = देश् = देष् (ಪುಟ ೬೨, ನಿಯಮ ಟ) + स्य = देक् (ಪುಟ ೫೮, ನಿಯಮ ಚ) + ष्य (೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣಿ ೨) + ति = देक्ष्यति. दुह् + स्यति = दोह् = दोघ् (ಪುಟ ೫೯, ನಿಯಮ ಛ) = धोघ् (ಪುಟ ೫೯, ನಿಯಮ ಝ) = धोक् (೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೫, ಟಿಪ್ಪಣಿ ೨) + ष्यति (೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣಿ ೨) = धोक्ष्यति. दृश् + स्यति = द्रश् (ಪುಟ ೧೦೧, ನಿಯಮ ೧೮) = द्रष् (ಪುಟ ೬೨, ನಿಯಮ ಟ) = द्रक् (ಪುಟ ೫೮, ನಿಯಮ ಚ) + ष्यति = द्रक्ष्यति. सृप् + स्यति = सर्प् ಅಥವಾ स्रप् + स्यति = सर्प्स्यति ಅಥವಾ स्रप्स्यति. वृध् + स्य = वर्ध्-वर्त् (೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೫, ಟಿಪ್ಪಣಿ ೨) — वर्त्स्य + ति = वर्त्स्यति ಅಥವಾ वृध् + स्यते = वर्ध् + स्यते = वर्ध् + इ + स्यते (ಮೇಲಿನ ನಿಯಮ ೪) = वर्धिष्यते (೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣಿ ೨).

೪. ಸಂಕೇತಾರ್ಥ.

೧. ಅನದ್ಯತನಭೂತಕಾಲದ ಪ್ರತ್ಯಯಗಳ ಹಿಂದೆ स्य ಕೂಡಿಸಲು ಈ ಅರ್ಥದ ಪ್ರತ್ಯಯಗಳುಂಟಾಗುತ್ತವೆ. ಈ ಅರ್ಥದಲ್ಲಿ ಧಾತುವಿನ ಹಿಂದೆ अ ಆಗಮವೂ ಬರುತ್ತದೆ. ಉಳಿದ ಸಂಗತಿಗಳೆಲ್ಲ ೨ನೇ ಭವಿಷ್ಯತ್ಕಾಲದಂತೆ.

लभ्.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अलप्स्यत | अलप्स्येताम् | अलप्स्यन्त |
| ಮ. ಪು. | अलप्स्यथाः | अलप्स्येथाम् | अलप्स्यध्वम् |
| ಉ. ಪು. | अलप्स्ये | अलप्स्यावहि | अलप्स्यामहि |

भू,

| | | | |
|---|---|---|---|
| ಪ್ರ. ಪು. | अभविष्यत् | अभविष्यताम् | अभविष्यन् |
| ಮ. ಪು. | अभविष्यः | अभविष्यतम् | अभविष्यत |
| ಉ. ಪು. | अभविष्यम् | अभविष्याव | अभविष्याम |

16

೨. ಈ ಕಾಲದಲ್ಲಿಯೂ ಅದ್ಯತನಭೂತಕಾಲದಲ್ಲಿಯೂ अधि+इ (ಕಲಿ) ಧಾತುವಿನ इಗೆ ವಿಕಲ್ಪದಿಂದ गा ಆದೇಶವಾಗುವದು. ಈ गाದ ಮುಂದೆ ವ್ಯಂಜನಾದಿ ಪ್ರತ್ಯಯಗಳು ಬರಲು ಅದಕ್ಕೆ गी ಆದೇಶವಾಗುತ್ತದೆ. ಉದಾ: अध्यैष्यत ಅಥವಾ अध्यगीष्यत ಪ್ರ. ಪು. ಏಕವಚನ.

೩. ಅಂಗಗಳಿಗೆ ಆತ್ಮನೇಪದಪ್ರತ್ಯಯಗಳನ್ನು ಹಚ್ಚಲು ಪೂರ್ಣಭೂತ, ಭವಿಷ್ಯತ್ಕಾಲ, ಸಂಕೇತಾರ್ಥ, ಆಶೀರ್ವಾದಾರ್ಥ, ಅದ್ಯತನಭೂತಕಾಲಗಳ ಕರ್ಮಾರ್ಥಕರೂಪಗಳಾಗುವವು.

೪. ೧ನೇ ಭವಿಷ್ಯತ್ಕಾಲವು ನಡೆಯುವ ದಿವಸದ ಹೊರ್ತು ಮುಂದಿನ ಭವಿಷ್ಯವನ್ನು ತೋರಿಸುತ್ತದೆ; ೨ನೇ ಭವಿಷ್ಯತ್ಕಾಲವು ಸಮೀಪದ ಭವಿಷ್ಯವನ್ನೂ ಸಾಮಾನ್ಯ ಭವಿಷ್ಯವನ್ನೂ ತೋರಿಸುತ್ತದೆ. ಸಂಕೇತಾರ್ಥವು ಸಂಕೇತರೂಪವಾಗಿ, ಕ್ರಿಯಾಪದದ ವ್ಯಾಪಾರವು ವರ್ತಿಸಲಿಲ್ಲವೆಂಬ ಅರ್ಥವನ್ನು ಸೂಚಿಸುತ್ತದೆ. ಇದು ಭವಿಷ್ಯತ್ಕಾಲದಲ್ಲಿಯೂ ಭೂತಕಾಲದಲ್ಲಿಯೂ ಪ್ರಯೋಗಿಲ್ಪಡುತ್ತದೆ.

हरिद्वारं गमिष्यामि तत्र च गङ्गाया उद्गमं हिमाचलं च द्रक्ष्यामि सर्वासां देवतानां पूजां च विधाय स्वकीयं ग्रामं प्रतिनिवर्त्स्यामि ।

यद्यत्ते हितकरं तत्सर्वं कर्तुं यतिष्ये ।

स्वामिनादिष्टोऽपि पुष्पाणि नानयसि यदानीतानि न वेति स प्रक्ष्यति तदा किं प्रतिवक्ष्यसि ।

अस्माकं मित्रं हिरण्यको नाम मूषकराजो गण्डकीतीरे चित्रवने निवसति सोऽस्माकं पाशांश्छेत्स्यति ।

यदि मे बाणपथमायास्यस्यसंशयं मरिष्यसि ।

सुवृष्टिश्चेदभविष्यत्तदा सुभिक्षमभविष्यत् ।

यदि स धर्ममत्यक्ष्यद्दुःखभाक्समवर्तिष्यत ।

कुसुमपुर एकस्मिन्गृहे शत्रुणा पातितमग्निं यदि कृष्णवर्मा न निरवापयिष्यत्तदा सर्वमेव नगरमग्निरधक्ष्यत् ।

कुम्भकर्णस्य गात्राणि रामो रणे कर्त्स्यतीति केन संभावितम् ।

पुष्करेण भ्रात्रा द्यूते जितो नलो राज्यात्परिभ्रष्टो दमयन्त्या सह वनमियाय । तत्रापि कलिना बहुविधैश्छलैः पीडितो सुप्तां दमयन्तीमुत्सृज्यैकस्मिन्स्थले जगाम । गच्छंश्च महान्तं दावं ददर्श । तन्मध्ये कर्को-

टको नाम नाग आसीत् । तं स राजाग्नेर्मध्यादुद्धृत्य कानिचित्पदानि निनाय । दशमे पदे कर्कोटको नलमदशत् । तेन नैषधस्य स्वीयं रूपमन्तरधीयत । आत्मानं विकृतं दृष्ट्वा स राजा विस्मितस्तस्थौ ।

ततः कर्कोटको नागः सान्त्वयन्नलमब्रवीत् ।
मया तेऽन्तर्हितं रूपं न त्वां विद्युर्जना इति ॥
यत्कृते चासि निकृतो दुःखेन महता नल ।
विषेण स मदीयेन त्वयि दुःखं निवत्स्यति ॥
विषेण संवृतैर्गात्रैर्यावत्त्वां न विमोक्ष्यति ।
तावत्त्वयि महाराज दुःखं वै स निवत्स्यति ॥
अनागा येन निकृतस्त्वमनर्हो जनाधिप ।
क्रोधादसूययित्वा तं रक्षा मे भवतः कृता ॥
न ते भयं महावीर दंष्ट्रिभ्यः शत्रुतोऽपि वा ।
ब्रह्मर्षिभ्यश्च भविता मत्प्रसादान्नराधिप ॥
राजन्विषनिमित्ता च न ते पीडा भविष्यति ।
सङ्ग्रामेषु च राजेन्द्र शश्वज्जयमवाप्स्यसि ॥
गच्छ राजन्नितः सूतो बाहुकोऽहमिति ब्रुवन् ।
समीपमृतुपर्णस्य स हि चैवाक्षनैपुणः ॥
अयोध्यां नगरीं रम्यामद्य वै निषधेश्वर ।
स तेऽक्षहृदयं दाता राजाश्वहृदयेन वै ॥
इक्ष्वाकुकुलजः श्रीमान्मित्रं चैव भविष्यति ।
भविष्यसि यदाक्षज्ञः श्रेयसा योक्ष्यसे तदा ॥
समेष्यसि च दारैस्त्वं मा स्म शोके मनः कृथाः[1] ।
राज्येन तनयाभ्यां च सत्यमेतद्ब्रवीमि ते ॥
स्वरूपं च यदा द्रष्टुमिच्छेथास्त्वं नराधिप ।
संस्मर्तव्यस्तदा तेऽहं वासश्चेदं निवासयेः ॥

---

[1] कृथाः ಇದು कृ ಧಾತುವಿನ ಅದ್ಯತನಭೂತದ ಮಧ್ಯಮ ಪುರುಷ ಆತ್ಮನೇಪದೈಕವಚನದ ರೂಪವು, ಇದರ ಹಿಂದೆ मा ಅವ್ಯಯವು ಇರುವದರಿಂದ ಇದರ अ ಆಗಮಕ್ಕೆ ಲೋಪವಾಗಿರುವದು (ಪಾಠ ೨೨, ನಿಯಮ ೨).

अनेन वाससा च्छन्नः स्वरूपं प्रतिपत्स्यसे ।
इत्युक्त्वा प्रददौ तस्मै दिव्यं वासोयुगं तदा ॥
एवं नलं च संदिश्य वासो दत्त्वा च कौरव ।
नागराजस्ततो राजंस्तत्रैवान्तरधीयत ॥

मरिष्यामि विजेष्ये वा हताश्चेत्तनया मम ।
हनिष्यामि रिपूंस्तूर्णं न जीविष्यामि दुःखितः ॥
स्मेष्यन्ते मुनयो देवाः कथयिष्यन्ति चानिशम् ।
दशग्रीवस्य दुर्नीतैर्विनष्टं रक्षसां कुलम् ॥
मधुकर मदिराक्ष्याः शंस तस्याः प्रवृत्तिं ।
वरतनुरथवासौ नैव दृष्टा त्वया मे ॥
यदि सुरभिमवाप्स्यस्तन्मुखोच्छ्वासगन्धं ।
तव रतिरभविष्यत्पुण्डरीके किमस्मिन् ॥
अकरिष्यदसौ[1] पापमतिनिष्करुणैव सा ।
नाभविष्यमहं तत्र यदि तत्परिपन्थिनी ॥

ಈ ಹೊತ್ತು ನಳರಾಜನನ್ನು ಕಾಣದಿದ್ದರೆ (दृश्), ನಾನು ಬೆಂಕಿಯಲ್ಲಿ ಬಿದ್ದು (परित्यज्) ಸಾಯುವೆನು (मृ).

ಅರಸನು ತಾನು ಬಂದ ಉದ್ದೇಶವನ್ನು ನನಗೆ ಹೇಳುವದಿಲ್ಲ. ಇರಲಿ, ನನಗೆ ಅದು ಕೊನೆಯಲ್ಲಿ ತಿಳಿಯುವದು (ज्ञा).

ಸುದೇವನೇ, ಋತುಪರ್ಣರಾಯನ ಬಳಿಗೆ ಹೋಗಿ ದಮಯಂತಿಯು ಹೊಸ ಸ್ವಯಂವರವ ಮಾಡಿಕೊಳ್ಳುತ್ತಾಳೆಂತಲೂ (आ+स्था), ಆ ಸ್ವಯಂವರಕ್ಕೆ ಬಹು ಮಂದಿ ಅರಸರು ಹೋಗುತ್ತಾರೆಂತಲೂ, ಅದು ನಾಳೆ ಆಗುತ್ತದೆಂತಲೂ (प्र+वृत्) ಅವನಿಗೆ ತಿಳಿಸು.

"ನಿನ್ನ ಅಪೇಕ್ಷೆಯಿದ್ದರೆ, ನೀನು ಒಂದು ದಿವಸದೊಳಗೆ ಕುಂಡಿನಪುರಕ್ಕೆ ಹೋಗಬೇಕು; ಯಾಕಂದರೆ ಸೂರ್ಯನು ಮೂಡಿದಾಗಲೇ (उद्+इ) ದಮಯಂತಿಯು ಎರಡನೇ ಗಂಡನನ್ನು ಮಾಡಿಕೊಳ್ಳುವಳು (वृ)."

---

[1]) ಒಬ್ಬ ದುಷ್ಟ ಸ್ತ್ರೀಯು ಒಬ್ಬ ಮನುಷ್ಯನ ಮೇಲಿನ ತನ್ನ ಸಿಟ್ಟು ತೀರಿಸಿಕೊಳ್ಳುವದಕ್ಕಾಗಿ ಅವನ ಚಿಕ್ಕ ವಯಸ್ಸಿನ ಹೆಂಡತಿಯನ್ನು ಕೊಲ್ಲುವ ಉದ್ಯೋಗವನ್ನು ನಡಿಸಿದ್ದಳು. ಆದರೆ ಮತ್ತೊಬ್ಬ ದಿವ್ಯ ಸ್ತ್ರೀಯು ಅಡ್ಡ ಬಂದು ಆ ಉದ್ಯೋಗವನ್ನು ನಡೆಯಗೊಡಲಿಲ್ಲ. ಆ ದಿವ್ಯ ಸ್ತ್ರೀಯು ನುಡಿದದ್ದನ್ನು ಈ ಶ್ಲೋಕದಲ್ಲಿ ಹೇಳಿರುತ್ತದೆ.

ದಮಯಂತಿಯು ಪರ್ಣಾದನಿಗೆ ಬಹಳ ದ್ರವ್ಯಕೊಟ್ಟು ಹೇಳಿದ್ದೇನಂದರೆ—"ನಳರಾಯನು ಬಂದರೆ (आ+गम्), ನಾನು ನಿನಗೆ ಇನ್ನೂ ಹೆಚ್ಚು ಹಣ ಕೊಡುವೆನು (दा)."

"ನೀನು ನನ್ನ ಸಲುವಾಗಿ ಬಹಳ ಯತ್ನ ಮಾಡಿದಿ, ಬೇರೆ ಯಾರೂ ಇಷ್ಟು ಮಾಡಲಿಕ್ಕಿಲ್ಲ (कृ); ನಿನ್ನ ಪ್ರಯತ್ನದಿಂದಲೇ ಸ್ವಲ್ಪ ಕಾಲದೊಳಗೆ ನಾನು ನನ್ನ ಗಂಡನನ್ನು ಕೂಡುವೆನು" (युज् ಕರ್ಮಣಿ. सम्+इ ಅಥವಾ सम्+गम्).

ಬಾಹುಕನೇ, ನನಗೆ ಮೋಸ ಮಾಡಬೇಡ; ಈ ದುರ್ಬಲವಾದ ಕುದುರೆಗಳು ಒಂದು ದಿವಸದೊಳಗೆ ನನ್ನನ್ನು ಕುಂಡಿನಪುರಕ್ಕೆ ಹ್ಯಾಗೆ ಒಯ್ಯುವವು (वह् ಅಥವಾ नी)?

ಇನ್ನು ನಾವು ನಮ್ಮ ಕುದುರೆಗಳನ್ನೇರಿಕೊಂಡು (आ+रुह्) ಬೇಗ ಓಡಿಸುವ.

ಬಾಹುಕನು ಅರಸನಿಗೆ ಅಂದದ್ದು—"ನೀನು ಈ ಮರದ ಎಲೆಕಾಯಿಗಳ ಸಂಖ್ಯೆಯನ್ನು ಹೇಳಿದಿ, ಇನ್ನು ನಿನ್ನ ಎದುರಿಗೆ ಆ ಮರವನ್ನು ಕೆಡಹಿ (शद्[1] ಅಥವಾ छिद् ಪ್ರೇರ.) ನಾನು ಎಲೆಗಳನ್ನು ಎಣಿಸುವೆನು."

ನೀನು ಚಂಡಾಲರ ಮನೆಯಲ್ಲಿ ಉಣ್ಣುತ್ತೀ, ಆದಕಾರಣ ನಾನು ನಿನ್ನನ್ನು ಮುಟ್ಟುವದಿಲ್ಲ (स्पृश्).

ಅವನು ತನ್ನ ಮನೆ ಕಟ್ಟುವದಕ್ಕೆ ಎಂದು ಆರಂಭ ಮಾಡುತ್ತಾನೋ (आ+रभ्) ನನಗೆ ತಿಳಿಯದು.

ಮನೆಯಲ್ಲಿ ಹೋದ ಕೂಡಲೇ ಅವನಿಗೆ ನಮಸ್ಕಾರ ಮಾಡಿದ್ದರೆ (प्र+नम्), ಅವನು ಯಜ್ಞದತ್ತನು ಹೆಮ್ಮೆಯವನೆಂದು ತಿಳಿಯುತ್ತಿದ್ದಿಲ್ಲ (मन्).

ಅವನು ತನ್ನ ಶತ್ರುವಿನ ಬಳಿಗೆ ಬೆಂಬಲ ಇಲ್ಲದೆ ಹೋಗಿದ್ದರೆ (गम्), ಆ ಶತ್ರುವು ಅವನನ್ನು ಕೊಂದುಹಾಕುತ್ತಿದ್ದನು (हन्).

ಆ ಸಮಯದಲ್ಲಿ ಆ ಹಾವು ದೇವದತ್ತನಿಗೆ ಕಡಿದಿದ್ದರೆ (दंश्), ಮತ್ತು ಅವನಿಗೆ ಔಷಧ ತಂದು ಕೊಡುವವರು ಯಾರೂ ಇಲ್ಲದೆ ಹೋಗಿದ್ದರೆ (भू), ಅವನು ನಿಶ್ಚಯವಾಗಿ ಸತ್ತುಹೋಗುತ್ತಿದ್ದನು (मृ, उप+रम्).

ನನ್ನ ಆಶೀರ್ವಾದದಿಂದ ನೀನು ಈ ಲೋಕದಲ್ಲಿ ಸಾಮ್ರಾಜ್ಯವ ಭೋಗಿಸಿ, (भुज्), ನಿನ್ನಂತೆ ಸದ್ಗುಣಿಯಾದ ಮಗನನ್ನು ಪಡಿಯುವಿ (आप्, लभ्); ನಿನ್ನ ಪ್ರಜೆಗಳನ್ನು ಸುಖದಿಂದ ಇಡು.

---

[1]) ಈ ಧಾತುವಿನ दಕಾರಕ್ಕೆ ಪ್ರೇರಣಾರ್ಥದಲ್ಲಿ तಕಾರಾದೇಶವಾಗುವದು.

## ೨ನೇ ಭಾಗ.

### ಕರ್ಮಾರ್ಥಕ ರೂಪಗಳು.

೧ನೇ ಪುಸ್ತಕದಲ್ಲಿಯೂ ಈ ಪುಸ್ತಕದ ಕೆಲವು ಪಾಠಗಳಲ್ಲಿಯೂ ಹೇಳಿದ ನಿಯಮಗಳಲ್ಲದೆ ಇನ್ನು ಕೆಲವು ನಿಯಮಗಳುಂಟು; ಅವನ್ನು ವಿದ್ಯಾರ್ಥಿಗಳು ಚನ್ನಾಗಿ ಲಕ್ಷ್ಯದಲ್ಲಿಡತಕ್ಕದ್ದು. ಅವು ಯಾವವಂದರೆ:

೧: ಕರ್ಮಾರ್ಥಕ य ವಿಕರಣವು ದುರ್ಬಲವಾಗಿರುವದು; ಅಂದರೆ ಇದರ ಹಿಂದಿನ ಧಾತುವಿನ ಅಂತ್ಯಸ್ವರಕ್ಕೂ ಉಪಾಂತ್ಯಸ್ವರಕ್ಕೂ ಗುಣವಾಗುವದಿಲ್ಲ.

೨. ಈ ಯಕಾರದ ಹಿಂದಿನ ಧಾತುಗಳಿಗೆ ಕೆಳಗೆ ವಿವರಿಸಿದ ಕಾರ್ಯಗಳಾಗುತ್ತವೆ.

(ಅ) ಋಕಾರಾಂತ ಧಾತುಗಳ ಋಕಾರಕ್ಕೆ रि ಆದೇಶವಾಗುವದು. ಉದಾ: कृ क्रियते.

(ಬ) ಋಕಾರದ ಹಿಂದೆ ಸಂಯೋಗವಿದ್ದರೆ ಅದಕ್ಕೂ ऋ ಮತ್ತು जागृ ಧಾತುವಿಗೂ ಗುಣವಾಗುವದು. ಉದಾ: स्मृ-स्मर्यते; ऋ-अर्यते.

(ಕ) ೧೪ನೇ ಪಾಠದ ೪ನೇ ನಿಯಮದಲ್ಲಿ ಹೇಳಿದಂತೆ ಆ ಧಾತುಗಳಿಗೆ ಸಂಪ್ರಸಾರಣದ ಕಾರ್ಯವು ಇಲ್ಲಿಯೂ ಆಗುತ್ತದೆ. ಉದಾ: वच्-उच्यते.

(ಡ) दा, धा ಧಾತುಗಳೂ, दा, धा ರೂಪಗಳನ್ನು ಧರಿಸುವ ಧಾತುಗಳೂ[1], मा, स्था, गै, पा (ಕುಡಿ), सो, हा (ಬಿಡು) ಧಾತುಗಳೂ, ಇವುಗಳ ಅಂತ್ಯಸ್ವರಕ್ಕೆ ई ಆದೇಶವಾಗುವದು. ಉದಾ: दा-दीयते; धा-धीयते; गै-गीयते; ಆದರೆ दा (ಕಡಿ)—दायते, दै (ಶುದ್ಧ ಮಾಡು) दायते.

(ಇ) ಅಂತ್ಯ इ, उಕಾರಗಳು ದೀರ್ಘವಾಗುವವು. ಉದಾ: जि-जीयते, स्तु-स्तूयते.

(ಫ) ಅಂತ್ಯ ॠಕಾರಕ್ಕೆ ईर् ಆದೇಶವಾಗುವದು; ಆದರೆ ॠಕಾರದ ಹಿಂದೆ ಓಷ್ಠ್ಯ ವರ್ಣ ಅಥವಾ व् ಇದ್ದರೆ, ऊर् ಆದೇಶವಾಗುವದು (ಪಾಠ ೧, ನಿಯಮ ೮ ನೋಡು).

(ಗ) मन्थ्, अञ्ज् (ಹೋಗು), शंस्, दंश्, सञ्ज्, रञ्ज्, अञ्ज्, भञ्ज्, स्कन्द्, ग्रन्थ्, स्तम्भ्, बन्ध्, भ्रंश् ಮುಂತಾದ ಕೆಲವು ಧಾತುಗಳ ಉಪಾಂತ್ಯ ಅನುನಾಸಿಕಕ್ಕೆ ಲೋಪ ಬರುವದು. ಉದಾ: शस्यते, दश्यते ಇತ್ಯಾದಿ.

---

[1] दा (೨ನೇ ಗ. ಪ.) ಕಡಿ, दै (೧ನೇ ಗ. ಪ.) ಶುದ್ಧಮಾಡು ಎಂಬವೆರಡು ಧಾತುಗಳು ಹೊರ್ತಾಗಿ ಉಳಿದ ಎಲ್ಲ ಧಾತುಗಳೆಂದು ತಿಳಿಯಬೇಕು.

೭. ಸ್ವರಾಂತಧಾತುಗಳ ಮತ್ತು हन्, ग्रह्, दृश् ಧಾತುಗಳ ಸ್ವರಕ್ಕೆ ವಿಕಲ್ಪ ದಿಂದ ವೃದ್ಧಿ[1] ಮಾಡಿ, ಮುಂದೆ ಆತ್ಮನೇಪದಪ್ರತ್ಯಯಗಳನ್ನು ಸೇರಿಸಿ, ೧ನೇ ೨ನೇ ಭವಿಷ್ಯತ್ಕಾಲಗಳ ಕರ್ಮಾರ್ಥಕ ರೂಪಗಳನ್ನು ಮಾಡುವದುಂಟು. ಈ ರೂಪ ಗಳಲ್ಲಿ ಧಾತುಗಳು अनिट् ಇದ್ದಾಗ್ಯೂ, इ ಆಗಮ ಬರುವದು; ಮತ್ತು आका ರಾಂತ ಧಾತುಗಳ ಮುಂದೆ इ ಆಗಮಕ್ಕೆ यिಕಾರಾದೇಶವಾಗುವದು.

(ಅ) स्तर्यते, स्तीर्यते, तीर्ये, पूर्ये, उह्यते, अवसीयते, भाविष्यते, घातिष्यते, भवि-ष्यते, दर्शिष्यते, द्रक्ष्यते, हारिष्यते, नायिष्यते, नेष्यते, स्थास्यते, हरिष्यते, स्थायिष्यते ಇವು ಯಾವ ರೂಪಗಳು? ಹ್ಯಾಗಾದವು? ಹೇಳು.

(ಬ) हृ, ह्वे, वप्, यज्, सह्, नह्, रुह्, लिह्, बन्ध्, ग्लै, दा, भिद्, वृत्, रुच्, हु, लू, सो, स्तु, रु, शास् ಧಾತುಗಳ ೨ನೇ ಭವಿಷ್ಯತ್ಕಾಲದ ಕರ್ಮಾರ್ಥಕರೂಪ ಗಳನ್ನು ಬರೆಯಿರಿ.

(ಕ) ग्लै, वप्, यज्, ह्वे, व्ये, क्रू, सृ, स्मृ, व्यच् ಧಾತುಗಳ ವರ್ತಮಾನಕಾಲ ಅನದ್ಯತನಭೂತಕಾಲಗಳ ಕರ್ಮಾರ್ಥಕ ರೂಪಗಳನ್ನು ಬರೆಯಿರಿ.

---

## ಕೋಶ ೧೨೪.

अक्ष (ಪು.) ಲೆತ್ತ, ಪಗಡಿ.

अक्षज्ञ (ವಿ.) ಲೆತ್ತವಾಡಲಿಕ್ಕೆ ಬಲ್ಲವ, ಲೆತ್ತಪ ಗಡಿ ಆಟದ ಗುಟ್ಟು ಬಲ್ಲವ.

अक्षनैपुण (ವಿ.) ಲೆತ್ತವಾಡುವದರಲ್ಲಿ ಕುಶಲ.

अक्षहृदय (ನ.) ಲೆತ್ತಪಗಡಿ ಆಟದ ಗುಟ್ಟು.

अतिनिष्करुण (ವಿ.) ಬಹಳ ಕ್ರೂರವಾದ.

अनर्ह (ವಿ.) ಅಯೋಗ್ಯವಾದ.

अनागस् (ವಿ.) ನಿರಪರಾಧಿಯಾದ.

अनिशम् (ಅ.) ಯಾವಾಗಲೂ, ಎಡೆಬಿಡದೆ.

अश्वहृदय (ನ.) ಕುದುರೆಗಳನ್ನು ನಡಿಸುವ ವಿದ್ಯ.

असंशयम् (ಅ.) ಸಂಶಯವಿಲ್ಲದೆ, ನಿಶ್ಚಯ ವಾಗಿ.

असूयय[2] ಹೊಟ್ಟೆಕಿಚ್ಚು ಮಾಡು, ಕೆಡಕಾಗ ಲೆಂದು ಬಯಸು.

इक्ष्वाकु (ಪು.) ಒಬ್ಬ ಅರಸನ ಹೆಸರು, ಸೂ ರ್ಯವಂಶದ ಅರಸರ ಪೂರ್ವಜನು.

ईश्वर (ಪು.) ಅರಸು, ಆಳುವವ.

उद्गम (ಪು.) ಮೂಲ, ಉಗಮ.

कर्कोटक (ಪು.) ಒಂದು ಹಾವಿನ ಹೆಸರು.

कलि (ಪು.) ಕೆಟ್ಟ ತತ್ವ.

कुण्डिनपुर (ನ.) ಒಂದು ಪಟ್ಟಣದ ಹೆಸರು

---

[1] दृश् ಧಾತುವಿಗೆ ಮಾತ್ರ ವೃದ್ಧಿಯಾಗುವದಿಲ್ಲ, ಗುಣವಾಗುತ್ತದೆ; (೬ನೇ ಗಣದ नू, धू ಧಾತುಗಳಿಗೆ ಅನ್ಯತ್ರ ಗುಣ ವೃದ್ಧಿಗಳಾಗದಿದ್ದರೂ ಇಲ್ಲಿ ವೃದ್ಧಿಯಾಗುವದು (ಪಾಠ ೧೭, ನಿಯಮ ೧೧ ನೋಡು).

[2] ಇದು ನಾಮಸಾಧಿತಧಾತು. असूया ಎಂಬ ನಾಮದ ಅಂತ್ಯ ಸ್ವರ ಲೋಪ ಮಾಡಿ ೧೦ನೇ ಗಣದ ಧಾತುಗಳಂತೆ अय ಪ್ರತ್ಯಯವನ್ನು ಸೇರಿಸಿ ಆಗಿರುವದು.

कुलज (ವಿ.) ಕುಲದಲ್ಲಿ ಹುಟ್ಟಿದ, ವಂಶಜ.
कृ (नि ಪೂರ್ವಕ) ಅಪಕಾರ ಮಾಡು, ಕೇಡು ಮಾಡು.
कृते (ಅ.) ದೆಸೆಯಿಂದ, ಸಲುವಾಗಿ.
गण्डकी (ಸ್ತ್ರೀ.) ಒಂದು ನದಿಯ ಹೆಸರು.
गण्डकीतीर (ನ.) ಗಂಡಕೀ ನದಿಯ ದಂಡೆ.
गात्र (ನ.) ದೇಹ, ಅವಯವ.
चित्रवन (ನ.) ಒಂದು ಅಡವಿಯ ಹೆಸರು.
छल (ನ.) ಕಪಟ, ಮೋಸ.
तनय (ಪು.) ಮಗ.
तन्मध्ये (तद् + मध्ये) ಅದರ ಮಧ್ಯದಲ್ಲಿ.
तन्मुखोच्छ्वासगन्ध (ಪು.) ಅವಳ ಉಸುರಿನ ಸುಗಂಧ.
दंष्ट्रिन् (ಪು.) ಹಾವು, ಹದನವಾದ ಹಲ್ಲುಗಳುಳ್ಳ ಜಂತು.
दशम (ವಿ.) ಹತ್ತನೇ.
दाव (ಪು.) ಕಾಡ್ಗಿಚ್ಚು, ಕಾಡು.
दिव्य (ವಿ.) ಸ್ವರ್ಗೀಯ, ದೈವಿಕ, ಸುಂದರ.
दुःखभाज् (ವಿ.) ದುಃಖವನ್ನು ಅನುಭೋಗಿಸುವ.
दुःखित (ವಿ.) ಶ್ರಮಪಟ್ಟ.
दुर्नीति (ನ.) ಕೆಟ್ಟ ಕೆಲಸ.
निषधेश्वर (ಪು.) ನಿಷಧದೇಶದ ಒಡೆಯ.
नैपुण्य (ಪು.) ಕುಶಲತನ.
नैषध (ನ.) ನಿಷಧದೇಶದ ಅರಸನು.
पद् (प्रति ಪೂರ್ವಕ) ಹೊಂದು, ಪಡೆಯು.
परिपन्थिन् (ವಿ.) ಅಡ್ಡಿಮಾಡುವವ, ವಿಘ್ನ ತರುವವ.
तत्परिपन्थिनी (ಸ್ತ್ರೀ.) ವಿಘ್ನ ಮಾಡುವಂಥವಳು.
परिभ्रष्ट (ವಿ.) ಕೆಟ್ಟ, ಮಾನಗೇಡಿಯಾದ.

पातित (पत् ಧಾತುವಿನ ಪ್ರೇರಣಾರ್ಥಕದ ಭೂ. ಕೃ.) ಕೆಡಹಿದ.
पुष्कर (ಪು.) ಒಬ್ಬ ಮನುಷ್ಯನ ಹೆಸರು.
बहुविध (ವಿ.) ತರತರದ.
बाणपथ (ಪು.) ಕಣೆಗಳ ದಾರಿ, ಕಣೆಗಳ ಮಾರ್ಗ.
बाहुक (ಪು.) ನಳನು ಸಾರಥಿಯ ವೇಷವನ್ನು ಧರಿಸಿ ಋತುಪರ್ಣರಾಯನಲ್ಲಿದ್ದಾಗ ಇಟ್ಟುಕೊಂಡ ಹೆಸರು.
मूषक (ಪು.) ಇಲಿ.
मूषकराज (ಪು.) ಇಲಿಗಳ ಅರಸು.
युग (ನ.) ಜೋಡು; वासोयुग ವಸ್ತ್ರಗಳ ಜೋಡು.
रति (ಸ್ತ್ರೀ.) ಪ್ರೀತಿ.
वच् (प्रति ಪೂರ್ವಕ) ಉತ್ತರಕೊಡು.
वस् (नि ಪೂರ್ವಕ, ಪ್ರೇರಣಾರ್ಥಕರೂಪ) ವಸ್ತ್ರ ಉಡು, ತೊಡು.
वापय (वा ಧಾತುವಿನ ಪ್ರೇರಣಾರ್ಥಕ, निर् ಪೂರ್ವಕ) ನೊಂದಿಸು.
विनष्ट (ವಿ.) ನಾಶ ಹೊಂದಿದ, ಕಳೆದು ಹೋದ.
शत्रुतस् (ಅ.) ಹಗೆಗಳಿಂದ.
शश्वत् (ಅ.) ಯಾವಾಗಲೂ, ಪದೇ ಪದೇ.
सम्भावित (सम् + भू ಧಾತುವಿನ ಪ್ರೇರಣಾರ್ಥಕ ಭೂ. ಕೃ.) ತಿಳಿದ, ಮಾನಿಸಿದ, ಶಕ್ಯವೆಂದು ತಿಳುಕೊಂಡ.
स्वकीय (ವಿ.) ತನ್ನ.
संस्मर्तव्य (ವಿ.) ನೆನಿಸತಕ್ಕ. [೮.
सुभिक्ष (ನ.) [ಧಾನ್ಯದ ಕೊರತೆಯಿಲ್ಲದಂಥ ಕಾ
सूत (ಪು.) ಗಾಡಿ ಹೊಡೆಯುವವ, ಸಾರಥಿ.
हरिद्वार (ನ.) ಒಂದು ಕ್ಷೇತ್ರ.
हिमाचल (ಪು.) ಹಿಮಪರ್ವತವು.
हिरण्यक (ಪು.) ಒಂದು ಇಲಿಯ ಹೆಸರು.

---

ಅನುಗ್ರಹ, ವರ, ಆಶೀರ್ವಾದ आशिस् (ಸ್ತ್ರೀ.).
ಅಹಂಕಾರವುಳ್ಳ, ಸೊಕ್ಕಿನ अवलिप्त (ವಿ.).
ಕಟ್ಟು, ರಚಿಸು निर् + मा (೩ನೇ ಗ. ಆ.).
ಮೋಸಗೊಳಿಸು, ವಂಚಿಸು अति + सम् + धा (೩ನೇ ಗ. ಪ.), विप्र + लभ् (೧ನೇ ಗ. ಆ.), वञ्च् (೧೦ನೇ ಗ. ಆ.).

ಕೊನೆ, ಅಂತ अवसान (ನ.), उदर्क (ಪು.), परिणाम (ಪು.).
ಕೊನೆಯಲ್ಲಿ उदर्के.
ಕ್ಷುದ್ರ ಮನುಷ್ಯ कापुरुष (ಪು.).
ಸುಖದಿಂದ ಇಡು, ಸಂತೋಷ ಪಡಿಸು } अनु+रञ्जय (रञ्ज् ಧಾತುವಿನ ಪ್ರೇರಣಾರ್ಥಕರೂಪ).
ಉದ್ದೇಶ प्रयोजन (ನ.), उद्देश (ಪು.).
ಮರ್ಯಾದ मर्याद (ಪು.).
ಎದುರಿಗೆ समक्षम् (ಅ.), प्रत्यक्षम् (ಅ.).
ಸುದೇವ सुदेव (ಪು.).
ಸಾಮ್ರಾಜ್ಯ साम्राज्य (ನ.), पारमेष्ठ्य (ನ.).
ಭೆಟ್ಟಿ आगमन (ನ.).
ಬಂದ ಉದ್ದೇಶವು आगमनहेतु (ಪು.).

## ೧೬ನೇ ಪಾಠ.

### ಅನಿಯಮಿತ ವಿಭಕ್ತಿರೂಪಗಳು.

ಮೊದಲನೇ ಪುಸ್ತಕದ ೫ನೇ ಪಾಠದ ಆರಂಭದಲ್ಲಿ ಹೇಳಿದ ವಿಭಕ್ತಿಪ್ರತ್ಯಯಗಳನ್ನು ವಿದ್ಯಾರ್ಥಿಗಳು ನೆನಪಿಗೆ ತರತಕ್ಕದ್ದು.

೧. ಇಲ್ಲಿ ಅನಿಯಮಿತವಾದ ವಿಭಕ್ತಿರೂಪಗಳ ಬಗ್ಗೆ ಮಾತ್ರ ನಾವು ಬರೆಯುವೆವು. ಉಳಿದ ವಿಭಕ್ತಿರೂಪಗಳನ್ನು ವಾಡಿಕೆಯಾಗಿ ವಿಭಕ್ತಿಪ್ರತ್ಯಯಗಳನ್ನು ಹಚ್ಚಿ ಸಾಧಾರಣ ಸಂಧಿನಿಯಮಗಳಂತೆ ಸಂಧಿಕಾರ್ಯಗಳನ್ನು ಮಾಡಿ ಸಿದ್ಧ ಮಾಡಿಕೊಳ್ಳಬೇಕು. ಸಂಬೋಧನೈಕವಚನದ ರೂಪವನ್ನು ಬೇರೆಯಾಗಿ ಹೇಳದೆ ಇದ್ದಲ್ಲಿ ಅದು ಪ್ರಥಮೆಯ ಏಕವಚನದಂತೆ ಆಗುತ್ತದೆಂದು ತಿಳಿಯಬೇಕು.

೨. विश्वपा, शंखध्मा ಮೊದಲಾದ आಕಾರಾಂತ ಧಾತುಸಾಧಿತನಾಮಗಳ ಅಂತ್ಯ आಕಾರಕ್ಕೆ ದ್ವಿತೀಯಾ ಬಹುವಚನ ಹಿಡಿದು ಮುಂದಿನ ಸ್ವರಾದಿ ಪ್ರತ್ಯಯಗಳು ಪರವಾಗಲು ಲೋಪ ಬರುತ್ತದೆ.

| | ಏ. | ದ್ವಿ. | ಬಹು. |
|---|---|---|---|
| ಪ್ರಥಮಾ. | विश्वपाः | विश्वपौ | विश्वपाः |
| ದ್ವಿತೀಯಾ. | विश्वपाम् | विश्वपौ | विश्वपः |
| ತೃತೀಯಾ. | विश्वपा | विश्वपाभ्याम् | विश्वपाभिः |

೩. पति ಶಬ್ದದ ಪ್ರಥಮಾದ್ವಿತೀಯಾವಿಭಕ್ತಿಗಳೂ ಷಷ್ಠೀ ಬಹುವಚನವೂ ಸಂಬೋಧನೈಕವಚನವೂ हरि ಶಬ್ದದಂತೆ, ಪಂಚಮೀ ಷಷ್ಠೀ ಸಪ್ತಮೀ ವಿಭಕ್ತಿಗಳ ಏಕವಚನಗಳು ಕ್ರಮವಾಗಿ पत्युः, पत्युः, पत्यौ ಆಗುವವು[1].

---

[1] ಉಳಿದ ರೂಪಗಳು ಈ ಶಬ್ದಕ್ಕೆ ಆಯಾ ಪ್ರತ್ಯಯಗಳನ್ನು ಹಚ್ಚಲು ಸಿದ್ಧವಾಗುವವು (ಮೇಲಿನ ನಿಯಮ ೧). ಹ್ಯಾಗಂದರೆ पति+आ=पत्या ತೃತೀಯಾ ಏಕವಚನ; पति+भ्याम् ತೃತೀಯಾ ದ್ವಿವಚನ; पति+ए=पत्ये ಚ. ಏ.; पति+सु=पतिषु ಸ. ಬಹು.

೪. ಸಖಿ ಶಬ್ದದ ರೂಪಗಳು ಹ್ಯಾಗಂದರೆ: ಪ್ರಥಮಾ ಸಖಾ, ಸಖಾಯೌ, ಸಖಾಯಃ; ದ್ವಿತೀಯಾ ಸಖಾಯಂ, ಸಖಾಯೌ; ದ್ವಿತೀಯಾ ಬಹುವ. ಸಖೀನ್; ಪಂಚಮಿಾ ಷಷ್ಠೀ, ಸಪ್ತಮಿಾ ಏಕವಚನಗಳು ಸಖ್ಯುಃ, ಸಖ್ಯುಃ, ಸಖ್ಯೌ ಷಷ್ಠೀ ಬಹುವಚನ ಸಖೀನಾಮ್; ಸಂಬೋಧನೈಕವಚನವು ಸಖೇ.

೫. ಪ್ರತ್ಯಯಗಳನ್ನು ಹಚ್ಚದೆ ಸಾಧಿಸಲ್ಪಟ್ಟ ಶ್ರೀ, ಧೀ, ಭ್ರೂ ಮೊದಲಾದ ಧಾತು ಸಾಧಿತನಾಮಗಳಿಗೂ ಭ್ರೂ, ಸ್ತ್ರೀ ಶಬ್ದಗಳಿಗೂ ಸ್ವರಾದಿ ಪ್ರತ್ಯಯಗಳು ಪರವಾಗ ಲಾಗಿ ಇ, ಈಕಾರಗಳಿಗೆ ಇಯ್ ಆದೇಶವೂ, ಉ, ಊಕಾರಗಳಿಗೆ ಉವ್ ಆದೇಶವೂ ಆಗು ವವು. ಸ್ತ್ರೀ ಶಬ್ದವು ನದೀ ಶಬ್ದದಂತೆ ನಡಿಯುವದು; ಶ್ರೀ, ಧೀ, ಭ್ರೂ ಮುಂತಾದ ನಾಮ ಗಳು ಚತುರ್ಥೀ ಪಂಚಮಿಾ ಷಷ್ಠೀ ಸಪ್ತಮಿಾಗಳ ಏಕವಚನಗಳಲ್ಲಿಯೂ ಷಷ್ಠಿಯ ಬಹುವಚನದಲ್ಲಿಯೂ ನದೀ ಶಬ್ದದಂತೆ ವಿಕಲ್ಪವಾಗಿ ನಡಿಯುವವು. ಆದರೆ ಸ್ತ್ರೀ ಶಬ್ದದ ದ್ವಿತೀಯೈಕವಚನದ ರೂಪಗಳು ಸ್ತ್ರೀಮ್ ಅಥವಾ ಸ್ತ್ರಿಯಮ್, ಬಹುವಚನದ ರೂಪಗಳು ಸ್ತ್ರೀಃ ಅಥವಾ ಸ್ತ್ರಿಯಃ, ಸಂಬೋಧನೈಕವಚನ ಸ್ತ್ರಿ.

೬. ಧೀ, ಶ್ರೀ, ತರೀ, ತನ್ತ್ರೀ, ಲಕ್ಷ್ಮೀ ಮುಂತಾದ ಈಕಾರಾಂತ ಧಾತುಸಾಧಿತ ನಾಮಗಳ ಮುಂದಿನ ಪ್ರಥಮೈಕವಚನದ ಸ ಪ್ರತ್ಯಯಕ್ಕೆ ಲೋಪ ಬರುವದಿಲ್ಲ.

ಸ್ತ್ರೀ.

| | ಏ. | ದ್ವಿ. | ಬಹು. |
|---|---|---|---|
| ಪ್ರಥಮಾ. | स्त्री | स्त्रियौ | स्त्रियः |
| ದ್ವಿತೀಯಾ. | स्त्रीम्-स्त्रियम् | स्त्रियौ | स्त्रीः-स्त्रियः |
| ತೃತೀಯಾ. | स्त्रिया | स्त्रीभ्याम् | स्त्रीभिः |
| ಚತುರ್ಥೀ. | स्त्रियै | " | स्त्रीभ्यः |
| ಪಂಚಮಿಾ. | स्त्रियाः | " | " |
| ಷಷ್ಠೀ. | " | स्त्रियोः | स्त्रीणाम् |
| ಸಪ್ತಮಿಾ. | स्त्रियां | " | स्त्रीषु |
| ಸಂಬೋಧನ. | स्त्रि | स्त्रियौ | स्त्रियः |

ಶ್ರೀ.

| | ಏ. | ದ್ವಿ. | ಬಹು. |
|---|---|---|---|
| ಪ್ರಥಮಾ. | श्रीः | श्रियौ | श्रियः |
| ದ್ವಿತೀಯಾ. | श्रियम् | " | " |
| ತೃತೀಯಾ. | श्रिया | श्रीभ्याम् | श्रीभिः |
| ಚತುರ್ಥೀ. | श्रियै-श्रिये | " | श्रीभ्यः |
| ಪಂಚಮಿಾ. | श्रियाः-श्रियः | " | " |
| ಷಷ್ಠೀ. | " | श्रियोः | श्रीणाम्-श्रियाम् |
| ಸಪ್ತಮಿಾ. | श्रियाम् | श्रियोः | श्रीषु |
| ಸಂಬೋಧನ. | श्रीः | श्रियौ | श्रियः |

भ्रू:

| | ಏ. | ದ್ವಿ. | ಬಹು. |
|---|---|---|---|
| ಪ್ರಥಮಾ. | भ्रूः | भ्रुवौ | भ्रुवः ಇತ್ಯಾದಿ श्री ಶಬ್ದದಂತೆ. |
| ಷಷ್ಠೀ. | भ्रुवः भ्रुवाः | भ्रुवोः | भ्रूणाम्-भ्रुवाम्. |
| ಸಂಬೋಧನ. | भ्रूः ಇತ್ಯಾದಿ. | | |

೭. (ಅ) इ, ई, उ, ऊಕಾರಾಂತ ಧಾತುಸಾಧಿತ ನಾಮಗಳ ಅಂತ್ಯದ इ, ई उ, ऊಕಾರಗಳ ಹಿಂದೆ ಸಂಯೋಗವಿಲ್ಲದಿದ್ದು, ಆ ನಾಮಗಳ ಹಿಂದೆ ಸಮಾಸವನ್ನು ಬಿಡಿಸಲಾಗಿ ಪ್ರಥಮೇತರವಿಭಕ್ತಿಯನ್ನು ಧರಿಸುವಂಥ ಬೇರೊಂದು ನಾಮವಾಗಲಿ, ಧಾತುವಿಗೆ ಸಂಬದ್ಧವಾದ ಉಪಸರ್ಗವಾಗಲಿ ಕೂಡಿದರೆ, इ, ईಕಾರಗಳಿಗೆ यಕಾರಾದೇಶವೂ, उ. ऊಕಾರಗಳಿಗೆ वಕಾರಾದೇಶವೂ, ಸ್ವರಾದಿ ವಿಭಕ್ತಿಪ್ರತ್ಯಯಗಳು ಪರವಾಗಲಾಗಿ ಆಗುತ್ತವೆ. ಉದಾ:

| ಪ್ರ. ಏ. | ಪ್ರ. ದ್ವಿ. | ಪ್ರ. ಬ. | ದ್ವಿ. ಏ. | ಪ್ರ. ಏ. | ಪ್ರ. ದ್ವಿ. | ಪ್ರ. ಬ. |
|---|---|---|---|---|---|---|
| [1]ग्रामणीः | -ण्यौ | -ण्यः | -ण्यम् | प्रधीः | प्रध्यौ | प्रध्यः |

ग्रामणी ಮುಂತಾದ नी ಧಾತುವುಳ್ಳ ನಾಮಗಳ ಸಪ್ತಮ್ಯೇಕವಚನದಲ್ಲಿ आम् ಪ್ರತ್ಯಯ ಬರುವದು. ಉದಾ: ग्रामण्याम्, ग्रामणी, सेनानी ಮುಂತಾದ ಶಬ್ದಗಳು ಮೂಲತಃ ಗಂಡಸರ ಉದ್ಯೋಗವನ್ನು ಹೇಳುವದರಿಂದ ಸ್ತ್ರೀವಾಚಕ ನಾಮಗಳಿಗೆ ವಿಶೇಷಣಗಳಾಗಿ ಪ್ರಯೋಗಿಸಲ್ಪಟ್ಟಾಗ್ಯೂ, ಪುಲ್ಲಿಂಗ ನಾಮಗಳಂತೆಯೇ ನಡಿಯುತ್ತವೆ. ई, ऊಕಾರಗಳಿಗೆ ಕ್ರಮದಿಂದ इय्, उव् ಆದೇಶಗಳನ್ನು ಹೊಂದುವ ಬೇರೆ ईಕಾರಾಂತ ऊಕಾರಾಂತ ಧಾತುಸಾಧಿತ ನಾಮಗಳು ಸ್ತ್ರೀಲಿಂಗದಲ್ಲಿ नदी, वधू ಶಬ್ದಗಳಂತೆ ನಡಿಯುತ್ತವೆ. ಆದರೆ ईಕಾರಾಂತ ಧಾತುಸಾಧಿತ ನಾಮಗಳ ಪ್ರಥಮೈಕವಚನವನ್ನು ೧೩೦ನೇ ಪುಟದಲ್ಲಿರುವ ೬ನೇ ನಿಯಮಕ್ಕೆ ಅನುಸಾರವಾಗಿ ಮಾಡಬೇಕು.

प्रधी (ಸ್ತ್ರೀ).

| | ಏ. | ದ್ವಿ. | ಬಹು. |
|---|---|---|---|
| ಚತುರ್ಥೀ. | प्रध्यै | प्रधीभ्याम् | प्रधीभ्यः |
| ಪಂಚಮೀ. | प्रध्याः | प्रधीभ्याम् | प्रधीभ्यः |
| ಷಷ್ಠೀ. | प्रध्याः | प्रध्योः | प्रधीनाम् |

पुनर्भू (ಸ್ತ್ರೀ.) ಶಬ್ದವಾದರೂ प्रधी ಶಬ್ದದಂತೆ ನಡಿಯುತ್ತದೆ.

(ಬ) ಅಪವಾದಗಳು—सुधी ಶಬ್ದವೂ भू ಅಂತವುಳ್ಳ ನಾಮಗಳೂ ಮೇಲಿನ ನಿಯಮಕ್ಕೆ ಅಪವಾದಗಳು.

---

[1] ವಿಗ್ರಹಃ—ग्रामं नयतीति ग्रामणीः ।

ಉದಾ: ಸುಧೀಃ-ಧಿಯೌ-ಧಿಯಃ ಪ್ರ.: ಸ್ವಯಂಭೂಃ-ಭುವೌ-ಭುವಃ ಪ್ರ. ಇತ್ಯಾದಿ. ಈ, ಊಕಾರಗಳಿಗೆ ಕ್ರಮದಿಂದ ಇಯ್, ಉವ್ ಆದೇಶಗಳನ್ನು ಹೊಂದುವ ಧಾತುಸಾಧಿತ ನಾಮಗಳು ಸ್ತ್ರೀಲಿಂಗದಲ್ಲಿ ಶ್ರೀ ಶಬ್ದದಂತೆ ನಡಿಯುತ್ತವೆ.

(ಕ) ಪ್ರತ್ಯಪವಾದಗಳು.—ವರ್ಷಾಭೂ, ಪುನರ್ಭೂ ಶಬ್ದಗಳು ಅಪವಾದಕ್ಕೆ ಅಪವಾದ ಗಳು, ಅಂದರೆ ಊಕಾರಕ್ಕೆ ವ್ ಆದೇಶವಾಗುತ್ತದೆ. ಉದಾ: ಪುನರ್ಭೂಃ-ಪುನರ್ಭ್ವೌ-ಪುನರ್ಭ್ವಃ ಪ್ರ.

೮. ಗೋ, ದ್ಯೋ ಶಬ್ದಗಳ ಮೊದಲಿನ ೫ ರೂಪಗಳಲ್ಲಿ ಓಕಾರಕ್ಕೆ ಔಕಾರಾ ದೇಶವಾಗುವದು, ಗೌಃ-ಗಾವೌ-ಗಾವಃ; ಆದರೆ ದ್ವಿತೀಯಾ ಏಕವಚನದ ರೂಪಗಳು ಗಾಮ್, ದ್ಯಾಮ್ ಆಗುವವು. ದ್ವಿತೀಯಾ ಬಹುವಚನಗಳು ಗಾಃ, ದ್ಯಾಃ; ಪಂಚಮೀ ಷಷ್ಠೀ ವಿಭಕ್ತಿಗಳೇಕವಚನದ ರೂಪಗಳು ಗೋಃ, ದ್ಯೋಃ ಆಗುತ್ತವೆ. ಯಾವತ್ತು ಓಕಾರಾಂತ ನಾಮಗಳು ಗೋ ಶಬ್ದದಂತೆ ನಡಿಯುತ್ತವೆ.

೯. ನೌ, ಗ್ಲೌ ಶಬ್ದಗಳು ಸಾಮಾನ್ಯ ನಿಯಮಗಳನ್ನನುಸರಿಸಿ ನಡಿಯುತ್ತವೆ.

೧೦. ವ್ಯಂಜನಾದಿ ಪ್ರತ್ಯಯಗಳು ಪರವಾಗಲು ರೈ ಶಬ್ದದ ಐಕಾರಕ್ಕೆ ಆ ಆದೇಶವಾಗುತ್ತದೆ. ಉದಾ: ರಾಃ, ರಾಯೌ, ರಾಯಃ; ತೃತೀಯಾ ರಾಯಾ, ರಾಭ್ಯಾಮ್, ರಾಭಿಃ.

೧೧. ಅಸ್ಥಿ, ದಧಿ, ಸಕ್ಥಿ, ಅಕ್ಷಿ ಶಬ್ದಗಳು ಪ್ರಥಮಾ ದ್ವಿತೀಯಾ ವಿಭಕ್ತಿ ಗಳಲ್ಲಿ ವಾರಿ ಶಬ್ದದಂತೆ ನಡಿಯುತ್ತವೆ. ಮುಂದಿನ ವಿಭಕ್ತಿಗಳ ಸ್ವರಾದಿ ಪ್ರತ್ಯಯ ಗಳು ಪರವಾಗಲು ಅವು ಕ್ರಮವಾಗಿ ಅಸ್ಥನ್, ದಧನ್, ಸಕ್ಥನ್, ಅಕ್ಷನ್ ಎಂಬ ರೂಪಗಳನ್ನು ಹೊಂದಿ ಅನ್ನಂತ ನಾಮಗಳಂತೆ ನಡಿಯುತ್ತವೆ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ದ್ವಿ. | अस्थि | अस्थिनी | अस्थीनि |
| ತೃ. | अस्थ्ना | अस्थिभ्याम् | अस्थिभिः |

ಎಷ್ಟೋ ಧಾತುಗಳ ಪ್ರಕೃತಿರೂಪಗಳೇ ನಾಮಗಳಂತೆ ವ್ಯವಹರಿಸುವವು.

೧೨. ಕೆಲವು ವ್ಯಂಜನಾದಿಪ್ರತ್ಯಯಗಳು ಪರವಾಗಲು ಧಾತ್ವಂತ ಹಕಾರ ಕ್ಕೆ ಆಗುವ ಸಂಧಿಕಾರ್ಯಗಳನ್ನು ೯ನೇ ಮತ್ತು ೧೪ನೇ ಪಾಠಗಳಲ್ಲಿ ಹೇಳಿರು ತ್ತೇವೆ. ಲಿಹ್ ಧಾತುಸಾಧಿತ ನಾಮದ ಪ್ರಥಮೈಕವಚನದಲ್ಲಿ ಸ್ ಪ್ರತ್ಯಯಕ್ಕೆ ಲೋಪ ಬರುವದು. ತರುವಾಯ (ಪುಟ ೫೭, ನಿಯಮ ಘ) ಹಕಾರಕ್ಕೆ ಢಕಾರಾ ದೇಶವಾಗಿ ಢಕಾರಕ್ಕೆ ಡ್ ಅಥವಾ ಟ್ ಆದೇಶವಾಗುವದು (ಪುಟ ೬೯, ನಿಯಮ ೨). ಭ್ಯಾಮ್ ಮುಂತಾದ ಪ್ರತ್ಯಯಗಳು ಪರವಾಗಲು ಹಕಾರಕ್ಕೆ ಡಕಾರಾದೇಶವಾಗು ವದು (ಪುಟ ೫೯, ನಿಯಮ ಜ).

लिह्.

| | ಏ. | ದ್ವಿ. | ಬಹು. |
|---|---|---|---|
| ಪ್ರಥಮಾ. | लिट्-ड् | लिहौ | लिहः |
| ತೃತೀಯಾ. | लिहा | लिड्भ्याम् | लिड्भिः |

दुह्, दुह् + स् = दुह् = दुघ् (ಪುಟ ೫೯, ನಿಯಮ ಛ) = धुघ् (ಪುಟ ೫೯, ನಿಯಮ ಝು) = धुक् ಅಥವಾ धुग् (ಪುಟ ೬೯, ನಿಯಮ ೭) = दुह् + भ्याम् = दुघ् + भ्याम् (ಪುಟ ೫೯, ನಿಯಮ ಛ). ತರುವಾಯ

೧೩. ವ್ಯಂಜನಾದಿ ಪ್ರತ್ಯಯಗಳು ಪರವಾಗಲು ೯ನೇ ಪಾಠದ ಝು ನಿಯಮದಲ್ಲಿ ಹೇಳಿದ ಸಂಧಿಕಾರ್ಯಗಳು ಆಗುತ್ತವೆ.

दुघ् + भ्याम् = धुघ् + भ्याम् (ಮೇಲಿನ ನಿಯಮ) = धुघ् + भ्याम् (ಪುಟ ೫೯, ನಿಯಮ ಜ) = धुग्भ्याम् ಅದರಂತೆ दुह् = सु = धुक्षु ಸ. ಬಹುವಚನ.

೧೪. अनडुह् ಶಬ್ದದ ಮೊದಲಿನ ೫ ರೂಪಗಳು—

| | ಏ. | ದ್ವಿ. | ಬಹು. |
|---|---|---|---|
| ಪ್ರಥಮಾ. | अनड्वान् | अनड्वाहौ | अनड्वाहः |
| ದ್ವಿತೀಯಾ. | अनड्वाहं | अनड्वाहौ | ಮತ್ತು |

ಸಂಬೋಧನೈಕವಚನ अनड्वन् ಆಗುತ್ತವೆ. ಉಳಿದ ವಿಭಕ್ತಿಗಳಲ್ಲಿ ವ್ಯಂಜನಾದಿ ಪ್ರತ್ಯಯಗಳು ಪರವಾಗಲು ह ಕಾರಕ್ಕೆ द ಕಾರಾದೇಶವಾಗುವದು. ಉದಾ: अनडुद्भ्याम्, अनडुद्भिः ಇತ್ಯಾದಿ.

೧೫. दिव् ಶಬ್ದದ ಪ್ರಥಮೈಕವಚನವು द्यौः ಆಗುತ್ತದೆ. ವ್ಯಂಜನಾದಿ ಪ್ರತ್ಯಯಗಳು ಪರವಾಗಲು ಈ ಶಬ್ದವು द्यु ಎಂಬ ರೂಪವನ್ನು ಹೊಂದುತ್ತದೆ. ಉದಾ: द्युभ्याम्, द्युभिः.

೧೬. वृत्रहन् ಮುಂತಾದ हन्नंत ನಾಮಗಳೂ अर्यमन्, पूषन् ಶಬ್ದಗಳೂ, अन्नंत ನಾಮಗಳಂತೆ ನಡಿಯುತ್ತವೆ. ಆದರೆ ಈ ಶಬ್ದಗಳ ಉಪಾಂತ್ಯ अ ಕಾರಕ್ಕೆ ಪ್ರಥಮೈಕವಚನದಲ್ಲಿ ಮಾತ್ರ ದೀರ್ಘವಾಗುತ್ತದೆ. वृत्रहन् ಶಬ್ದದ ಉಪಾಂತ್ಯ अ ಕಾರಕ್ಕೆ ಲೋಪವಾಗದಾಗ ಅಂತ್ಯ न ಕಾರಕ್ಕೆ ण ಕಾರಾದೇಶವಾಗುವದು.

| | ಪ್ರ. ದ್ವಿ. | ಪ್ರ. ಬಹು. |
|---|---|---|
| ಉದಾ: | वृत्रहणौ | वृत्रहणः |

ಸಂಬೋಧನೈಕವಚನ वृत्रहन्. ಇಲ್ಲಿ न ಕಾರವು ಪದಾಂತದಲ್ಲಿರುವದರಿಂದ ಅದಕ್ಕೆ ण ಕಾರಾದೇಶ ಬರಲಿಲ್ಲ.

| | ಏ. | ದ್ವಿ. | ಬಹು. |
|---|---|---|---|
| ತೃತೀಯಾ. | वृत्रघ्ना | वृत्रहभ्याम् | वृत्रहभिः |

वृत्रहन् + आ = वृत्रघ्न् + आ (ಪುಟ ೬೧, ನಿಯಮ ೭ ಇ) = वृत्रघ्ना.

೧೭. श्वन्, युवन्, मघवन् ಶಬ್ದಗಳು अन्नंत ನಾಮಗಳಂತೆ ನಡಿಯುತ್ತವೆ. ಆದರೆ ದ್ವಿತೀಯಾ ಬಹುವಚನ ಹಿಡಿದು ಮುಂದಿನ ವಿಭಕ್ತಿಗಳ ಸ್ವರಾದಿ ಪ್ರತ್ಯಯಗಳು ಪರವಾಗಲು वಕಾರಕ್ಕೆ उ ಆದೇಶವಾಗುವದು. ಉದಾ: शुनः, यूनः, मघोनः ದ್ವಿತೀಯಾ ಬಹುವಚನ.

೧೮. पथिन् ಶಬ್ದದ ಮೊದಲಿನ ೫ ರೂಪಗಳು पन्थाः-पन्थानौ-पन्थानः, पन्थानम्-पन्थानौ ಆಗುತ್ತವೆ. ದ್ವಿತೀಯಾ ಬಹುವಚನ ಹಿಡಿದು ಮುಂದಿನ ವಿಭಕ್ತಿಗಳ ಸ್ವರಾದಿ ಪ್ರತ್ಯಯಗಳು ಪರವಾಗಲು पथिन् ಶಬ್ದದ इन्‌ಕ್ಕೆ ಲೋಪವಾಗುತ್ತದೆ; ಉಳಿದ ಕಡೆಯಲ್ಲಿ ಈ ಶಬ್ದವು इन्नंत ನಾಮಗಳಂತೆ ನಡಿಯುತ್ತದೆ. ಉದಾ: ದ್ವಿ. ಬಹು. पथः ತೃ. पथा-पथिभ्याम्-पथिभिः ಇತ್ಯಾದಿ. ಸಂಬೋಧನೈಕವಚನವು पन्थाः ಪ್ರಥಮೈಕವಚನದಂತೆ.

೧೯. मथिन् ಶಬ್ದವು पथिन् ಶಬ್ದದಂತೆ ನಡಿಯುತ್ತದೆ. ऋभुक्षिन् ಶಬ್ದವಾದರೂ ಅದರಂತೆ ನಡಿಯುತ್ತದೆ; ಆದರೆ ಮೊದಲಿನ ಐದು ರೂಪಗಳಲ್ಲಿ ಅನುನಾಸಿಕಾಗಮ ಬರುವದಿಲ್ಲ. ऋभुक्षाः-ऋभुक्षाणौ-ऋभुक्षाणः ಪ್ರಥಮಾ; ऋभुक्षाणम्-ऋभुक्षाणौ-ऋभुक्षः ದ್ವಿತೀಯಾ; ऋभुक्षा-ऋभुक्षिभ्याम्-ऋभुक्षिभिः ತೃತೀಯಾ.

೨೦. परिव्राज् ಶಬ್ದದ ज्‌ಕ್ಕೆ ೯ನೇ ಪಾಠದ ಟ ನಿಯಮದಲ್ಲಿ ಹೇಳಿದ ಸಂಧಿಕಾರ್ಯಗಳಾಗುತ್ತವೆ. परिव्राज्+स्=परिव्राज् (೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೧೦೮, ಟಿಪ್ಪಣಿ ೧)=परिव्राष् (ಪುಟ ೬೨, ನಿಯಮ ಟ)-परिव्राट्-ड् (ಪುಟ ೬೮, ನಿಯಮ ೨); परिव्राज्+भ्याम्=परिव्राष्+भ्याम् (ಈ ನಿಯಮದ ಪ್ರಕಾರ)=परिव्राड्भ्याम् (ಪುಟ ೫೮, ನಿಯಮ ಜ). विश् ಶಬ್ದವಾದರೂ ಪ್ರಥಮೈಕವಚನದ ರೂಪವು (विश्+स्=विश्=विष्) विट्-ड् ಆಗುತ್ತದೆ. विश्+भ्याम् विष्+भ्याम्=विड्भ्याम्.

देवेज् (देव+यज्), निश्, विश्वसृज्, राज् ಮುಂತಾದ ಶಬ್ದಗಳು परिव्राज्‌ದಂತೆ ನಡಿಯುತ್ತವೆ.

೨೧. प्राच्, प्रत्यच्, उदच्, अवाच्, सम्यच्, तिर्यच् ಶಬ್ದಗಳ ಮೊದಲಿನ ೫ ಪುಲ್ಲಿಂಗರೂಪಗಳಲ್ಲಿ ಚಕಾರದ ಹಿಂದೆ न् ಆಗಮ ಬರುವದು; ಪ್ರಥಮೈಕವಚನರೂಪಗಳು प्राङ्, प्रत्यङ्, उदङ्, अवाङ् ಆಗುತ್ತವೆ. ದ್ವಿತೀಯಾ ಬಹುವಚನ ಹಿಡಿದು ಮುಂದಿನ ವಿಭಕ್ತಿಗಳ ಸ್ವರಾದಿ ಪ್ರತ್ಯಯಗಳೂ ನಪುಂಸಕ ಪ್ರಥಮಾ, ದ್ವಿತೀಯಾ ದ್ವಿವಚನದ ई ಪ್ರತ್ಯಯವು ಪರವಾಗಲು प्रत्यच्, उदच्, सम्यच्, तिर्यच्‌ಗಳು ಕ್ರಮದಿಂದ प्रतीच्, उदीच्, समीच्, तिरश्च् ರೂಪಗಳನ್ನು ಹೊಂದುತ್ತವೆ. ಉದಾ: प्रतीचः, उदीचः, समीचः, तिरश्चः ದ್ವಿ. ಬಹು. ಸ್ತ್ರೀಲಿಂಗ

ದಲ್ಲಿ ಇದೇ ಮೇರೆಗೆ ರೂಪಾಂತರವಾಗಿ ಕಡೆಯಲ್ಲಿ ಈಕಾರ ಬರುವದು. ಉದಾ: **प्रतीची, उदीची, समीची, तिरश्ची, प्राची, अवाची.**

**तिर्यच् (ಪು.).**

| | ಏ. | ದ್ವಿ. | ಬಹು. |
|---|---|---|---|
| ಪ್ರಥಮಾ. | तिर्यङ् | तिर्यञ्चौ | तिर्यञ्चः |
| ದ್ವಿತೀಯಾ. | तिर्यञ्चम् | तिर्यञ्चौ | तिरश्चः |
| ತೃತೀಯಾ. | तिरश्चा | तिर्यग्भ्याम् | तिर्यग्भिः ಇತ್ಯಾದಿ. |

**तिर्यच् (ನ.).**

ಪ್ರ· **तिर्यक्-ग्** **तिरश्ची** **तिर्यञ्चि**

೨೨. **सज्, ताद्दृश्, दिश्, दृश्** ಶಬ್ದಗಳ ಅಂತ್ಯಾಕ್ಷರಕ್ಕೆ ಕರ್ಕಶವ್ಯಂಜನಗಳು ಪರವಾಗಲು **क्** ಆದೇಶವೂ, ಮೃದುವ್ಯಂಜನಗಳು ಪರವಾಗಲು **ग्** ಆದೇಶವೂ, ಏನೂ ಬಾರದಿದ್ದರೆ **क्** ಅಥವಾ **ग्** ಆದೇಶವೂ ಆಗುತ್ತವೆ.

೨೩. ೩ನೇ ಗಣದ ಧಾತುಗಳ ಮತ್ತು **शास्, जक्ष्, चकास्, दरिद्रा, जागृ** ಧಾತುಗಳ ಪುಲ್ಲಿಂಗ ವರ್ತಮಾನ ಕೃದಂತಗಳ ಮೊದಲಿನ ಐದು ರೂಪಗಳೊಳಗೆ ಉಪಾಂತ್ಯ ಸ್ಥಾನದಲ್ಲಿ ನಕಾರಾಗಮ ಬರುವದಿಲ್ಲ. ನಪುಂಸಕ ಪ್ರಥಮಾ ದ್ವಿತೀಯಾ ಬಹುವಚನಗಳಲ್ಲಿ ನಕಾರಾಗಮ ವಿಕಲ್ಪದಿಂದ ಬರುವದು. ಈ ಕೃದಂತಗಳಿಗೆ ಈ ಎಂಬ ಪ್ರತ್ಯಯವನ್ನು ಹಚ್ಚಲಾಗಿ ನಪುಂಸಕದ ಪ್ರಥಮಾ ದ್ವಿತೀಯಾ ದ್ವಿವಚನಗಳ ರೂಪಗಳೂ ಸ್ತ್ರೀಲಿಂಗರೂಪಗಳೂ ಆಗುತ್ತವೆ.

**बिभ्रत्** (**भृ** ಧಾತುವಿನ ವರ್ತ. ಕೃ.).

ಪುಲ್ಲಿಂಗ.

| | ಏ. | ದ್ವಿ. | ಬಹು. |
|---|---|---|---|
| ಪ್ರಥಮಾ. | बिभ्रत् | बिभ्रतौ | बिभ्रतः |
| ದ್ವಿತೀಯಾ. | बिभ्रतम् | बिभ्रतौ | बिभ्रतः |

ಸ್ತ್ರೀಲಿಂಗ.

| | | | |
|---|---|---|---|
| ಪ್ರ. | बिभ्रती | बिभ्रत्यौ | बिभ्रत्यः |

ನಪುಂಸಕ.

| | | | |
|---|---|---|---|
| ಪ್ರ. ದ್ವಿ. | बिभ्रत् | बिभ्रती | बिभ्रति ಅಥವಾ बिभ्रन्ति |

೨೪. ೬ನೇ ಗಣದ ಧಾತುಗಳ ವರ್ತಮಾನಕೃದಂತಗಳಂತೆ ೨ನೇ ಗಣದ ಆಕಾರಾಂತ ಧಾತುಗಳ ವರ್ತಮಾನಕೃದಂತಗಳಿಗೆ ನಪುಂಸಕ ಪ್ರಥಮಾ ದ್ವಿತೀಯಾ ದ್ವಿವಚನಪ್ರತ್ಯಯವಾದಂಥ ಸ್ತ್ರೀಪ್ರತ್ಯಯವಾದಂಥ ಈಕಾರವು ಪರವಾಗಲು ಉಪಾಂತ್ಯಸ್ಥಾನದಲ್ಲಿ ನಕಾರಾಗಮವು ವಿಕಲ್ಪದಿಂದ ಬರುತ್ತದೆ. ಉದಾ: **यात् -याती** ಅಥವಾ **यान्ती.**

೨೫. पुंस् ಶಬ್ದದ ಮೊದಲಿನ ಐದು ರೂಪಗಳು पुमान्, पुमांसौ, पुमांसः (ಪ್ರ.), पुमांसम्, पुमांसौ ಆಗುತ್ತವೆ. ಸಂಬೋಧನೈಕವಚನವು पुमन्. ವ್ಯಂಜನಾದಿ ಪ್ರತ್ಯಯಗಳು ಪರವಾಗಲು ಅಂತ್ಯ स्‌ಕಾರಕ್ಕೆ ಲೋಪ ಬರುವದು.

೨೬. गिर्, आशिस् ಮತ್ತು रಕಾರಾಂತ पुर्, धुर् ಮುಂತಾದ ಶಬ್ದಗಳ ಮುಂದೆ ವ್ಯಂಜನಾದಿ ಪ್ರತ್ಯಯಗಳು ಬರಲು ಅಥವಾ ಯಾವ ಪ್ರತ್ಯಯವೂ ಬಾರದಿರಲು ಅವುಗಳ ಉಪಾಂತ್ಯ ಸ್ವರವು ದೀರ್ಘವಾಗುತ್ತದೆ. आशिस् ಶಬ್ದದ सಕಾರಕ್ಕೆ ಸ್ವರಾದಿ ಪ್ರತ್ಯಯಗಳು ಪರವಾಗಲು षಕಾರಾದೇಶವಾಗುವದು; ಮೃದುವ್ಯಂಜನಗಳು ಪರವಾಗಲು रಕಾರಾದೇಶವಾಗುವದು. आशिस् ಶಬ್ದದ ಸಪ್ತಮೀ ಬಹುವಚನದ ರೂಪವು आशीःषु ಅಥವಾ आशीष्षु.

गिर्.

| | ಏ. | ದ್ವಿ. | ಬಹು. |
|---|---|---|---|
| ಪ್ರ. | गीः | गिरौ | गिरः |
| ದ್ವಿ. | गिरम् | गिरौ | गिरः |
| ತೃ. | गिरा | गीर्भ्याम् | गीर्भिः ಇತ್ಯಾದಿ. |

೨೭. अप् ಶಬ್ದವು ನಿತ್ಯಬಹುವಚನದಲ್ಲಿ ನಡಿಯುತ್ತದೆ. ಪ್ರಥಮಾ ಬಹು. आपः. भಕಾರಾದಿ ವಿಭಕ್ತಿಪ್ರತ್ಯಯಗಳು ಪರವಾಗಲು पಕ್ಕೆ द् ಆದೇಶವಾಗುತ್ತದೆ.

೨೮. अहन् ಶಬ್ದದ ಅಂತ್ಯ नಕಾರಕ್ಕೆ ಪ್ರಥಮೈಕವಚನದ स् ಪ್ರತ್ಯಯ ಪರವಾಗಲು रಕಾರಾದೇಶವೂ, ಉಳಿದ ವಿಭಕ್ತಿಗಳ ವ್ಯಂಜನಾದಿ ಪ್ರತ್ಯಯಗಳು ಪರವಾಗಲು ವಿಸರ್ಗಾದೇಶವೂ ಆಗುತ್ತವೆ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ದ್ವಿ. | अहः | अह्नी-अहनी | अहानि |
| ತೃ. | अह्ना | अहोभ्याम् | अहोभिः |

अहर्भाति ಇದರಲ್ಲಿ अहर् ಪ್ರಥಮೈಕವಚನವು.

೨೯. ಕಾಲವಾಚಕ ಸ್ಥಲವಾಚಕಗಳಾದ पूर्व, पर, अवर, दक्षिण, उत्तर, अपर अधर ಶಬ್ದಗಳೂ, ಜ್ಞಾತಿಧನವಾಚಕವಲ್ಲದ स्व ಶಬ್ದವೂ, "ಒಳಗಿನ" ಅಥವಾ "ಒಳವಸ್ತ್ರ" ಎಂಬ ಅರ್ಥವುಳ್ಳ अन्तर ಶಬ್ದವೂ ಸರ್ವನಾಮದಂತೆ ನಡಿಯುತ್ತವೆ. ಪ್ರಥಮಾ ಬಹುವಚನದಲ್ಲಿಯೂ ಪಂಚಮೀ ಸಪ್ತಮೀ ಏಕವಚನದಲ್ಲಿಯೂ ಈ ಶಬ್ದಗಳು ವಿಕಲ್ಪದಿಂದ अಕಾರಾಂತ ನಾಮಗಳಂತೆ ನಡಿಯುತ್ತವೆ. पूर्वे ಅಥವಾ पूर्वाः ಪ್ರಥಮಾ ಬಹು.; पूर्वात् ಅಥವಾ पूर्वस्मात्; पूर्वे ಅಥವಾ पूर्वस्मिन्.

೩೦. अन्य, अन्यतर, कतर, कतम, यतर, यतम, ततर, ततम, एकतम, इतर ಈ ಸರ್ವನಾಮಗಳ ನಪುಂಸಕ ಪ್ರಥಮಾ ದ್ವಿತೀಯೈಕವಚನಗಳನ್ನು त् ಅಥವಾ

ಕ್ ಪ್ರತ್ಯಯ ಹಚ್ಚಿ ಮಾಡುವದುಂಟು. ಉಳಿದ ಕಡೆಯಲ್ಲಿ ಇವು सर्व ಶಬ್ದದಂತೆ ನಡಿಯುತ್ತವೆ.

೩೧. चरम, अल्प, अर्ध, कतिपय ಶಬ್ದಗಳು ಪುಲ್ಲಿಂಗದ ಪ್ರಥಮಾ ಬಹುವಚನದಲ್ಲಿ ವಿಕಲ್ಪದಿಂದ ಸರ್ವನಾಮಗಳಂತೆ ನಡಿಯುತ್ತವೆ; नेम ಈ ಸರ್ವನಾಮವು ಪುಲ್ಲಿಂಗದ ಪ್ರಥಮಾ ಬಹುವಚನದಲ್ಲಿ ವಿಕಲ್ಪದಿಂದ अकारान्त ನಾಮದಂತೆ ನಡಿಯುತ್ತದೆ.

೩೨. पपी, ययी ಮುಂತಾದ ಈಕಾರಾಂತ ನಾಮಗಳಿಗೆ म् ಕೂಡಿಸಿದರೆ ದ್ವಿತೀಯಾ ಏಕವಚನದ ರೂಪಗಳೂ, न् ಕೂಡಿಸಿದರೆ ದ್ವಿತೀಯಾ ಬಹುವಚನದ ರೂಪಗಳೂ ಆಗುತ್ತವೆ.

೩೩. क्रोष्टृ ಶಬ್ದಕ್ಕೆ ಮೊದಲಿನ ಐದು ವಚನಗಳಲ್ಲಿ क्रोष्टृ ಆದೇಶವಾಗಿ ಅದು ऋಕಾರಾಂತನಾಮದಂತೆ ನಡಿಯುತ್ತದೆ. ತೃತೀಯೈಕವಚನ ಹಿಡಿದು ಮುಂದಿನ ವಿಭಕ್ತಿಗಳ ಸ್ವರಾದಿ ಪ್ರತ್ಯಯಗಳು ಪರವಾಗಲು ಈ ಆದೇಶವು ವಿಕಲ್ಪದಿಂದ ಆಗುತ್ತದೆ; ಆದರೆ ಷಷ್ಠೀ ಬಹುವಚನದಲ್ಲಿ ಈ ಆದೇಶವಾಗುವದಿಲ್ಲ. ಷಷ್ಠೀ ಬಹುವಚನರೂಪವು क्रोष्टूनाम् ಒಂದೇ ಆಗುತ್ತದೆ. ಸಂಬೋಧನೈಕವಚನವು क्रोष्टो. ಉಳಿದ ಕಡೆಯಲ್ಲಿ ಈ ಶಬ್ದವು उಕಾರಾಂತ ಪುಲ್ಲಿಂಗನಾಮದಂತೆ ನಡಿಯುತ್ತದೆ.

೩೪. जरा, निर्जर ಈ ಶಬ್ದಗಳಿಗೆ ಸ್ವರಾದಿ ಪ್ರತ್ಯಯಗಳು ಪರವಾಗಲು ವಿಕಲ್ಪದಿಂದ जरस्, निर्जरस् ಎಂಬ ಆದೇಶಗಳು ಕ್ರಮವಾಗಿ ಆಗುತ್ತವೆ. जरा ಶಬ್ದವು आಕಾರಾಂತ ಸ್ತ್ರೀಲಿಂಗನಾಮದಂತೆಯೂ निर्जर ಶಬ್ದವು अಕಾರಾಂತ ನಾಮಗಳಂತೆಯೂ ನಡಿಯುತ್ತವೆ.

೩೫. अर्वन् ಶಬ್ದದ ಪ್ರಥಮೈಕವಚನವು अर्वा ಸಂಬೋಧನೈಕವಚನ अर्वन्, ಉಳಿದ ಕಡೆಯಲ್ಲಿ ಇದು वत् ಅಂತ (भगवत्) ಶಬ್ದದಂತೆ ನಡಿಯುತ್ತದೆ. ಈ ಶಬ್ದದ ಪೂರ್ವದಲ್ಲಿ ನಿಷೇಧವಾಚಕ अन् ಎಂಬ ಪದವು ಸೇರಲು ಇದು आत्मन् ಶಬ್ದದಂತೆ ನಡಿಯುತ್ತದೆ.

೩೬. उशनस् ಶಬ್ದದ ಪ್ರಥಮೈಕವಚನವು उशना, ಸಂಬೋಧನೈಕವಚನವು उशनन्, उशन, ಅಥವಾ उशनः ಆಗುತ್ತವೆ; ಉಳಿದ ಕಡೆಯಲ್ಲಿ चन्द्रमस् ಶಬ್ದದಂತೆ ನಡಿಯುತ್ತದೆ.

೩೭. ದ್ವಿತೀಯಾ ಬಹುವಚನ ಹಿಡಿದು ಮುಂದಿನ ವಿಭಕ್ತಿಗಳ ಸ್ವರಾದಿ ಪ್ರತ್ಯಯಗಳು ಪರವಾಗಲು ಕೆಲವು ನಾಮಗಳ ಕಡೆಯ वाह् ಎಂಬ ಭಾಗಕ್ಕೆ ऊह् ಆದೇಶವಾಗಿ ಅದು ತತ್ಪೂರ್ವದ अ, आಗಳಿಗೆ ಕೂಡಿಕೊಂಡು औहವಾಗು

ತ್ತದೆ. ಉದಾ: विश्ववाह् + अस् = विश्व + ऊह् + अस् = विश्वौह् + अः = विश्वौहः (ದ್ವಿ. ಬಹು.) ಈ ಶಬ್ದಗಳ ಅಂತ್ಯ ಹಕಾರಕ್ಕೆ, लिह् ಶಬ್ದಕ್ಕೆ ಹೇಳಿದ ಸಂಧಿಕಾರ್ಯಗಳಾಗುತ್ತವೆ. ಉದಾ: विश्ववाट्-ड् (ಪ್ರ. ಏ.), विश्ववाड्-भ्याम् (ತೃ. ದ್ವಿ.).

೩೮. ವ್ಯಂಜನಾದಿ ಪ್ರತ್ಯಯಗಳು ಪರವಾಗಲು तुरासाह्ದೊಳಗಿನ ಸಕಾರಕ್ಕೆ ಷಕಾರಾದೇಶವಾಗುವದು. ಉದಾ: तुराषाड्भ्याम्, तुराषाट्सु.

೩೯. दोषन् (ಪು. ನ.), असन् (ನ.), दत् (ಪು.), पद् (ಪು.), नस् (ಸ್ತ್ರೀ.), मास् (ಪು.), हृद् (ನ.), मांस् (ನ.), पृत् (ಸ್ತ್ರೀ.), स्नु (ಪು. ನ.), शकन् (ನ.), उदन् (ನ.), आसन् (ನ.) निश् (ಸ್ತ್ರೀ.) ಶಬ್ದಗಳು ಗೌಣವಾಗಿರುತ್ತವೆ. ಅವುಗಳಿಗೆ ಮೊದಲಿನ ಐದು ರೂಪಗಳಿಲ್ಲ. ಉಳಿದ ಕಡೆಯಲ್ಲಿ ಸಾಮಾನ್ಯ ನಿಯಮಗಳನ್ನನುಸರಿಸಿ ಅವು ನಡಿಯುತ್ತವೆ. मास् ಮತ್ತು मांस् ಶಬ್ದಗಳ स्‌ಕಾರಕ್ಕೆ ವ್ಯಂಜನಾದಿ ಪ್ರತ್ಯಯಗಳು ಪರವಾಗಲು ಲೋಪ ಬರುತ್ತದೆ; ಆದರೆ मास् ಶಬ್ದದ स्‌ಕಾರಕ್ಕೆ सु ಪ್ರತ್ಯಯ ಪರವಾಗಲು ಲೋಪ ಬರುವದಿಲ್ಲ.

यदा महान्वैयाकरणः पाणिनिः समजायत तदा व्याकरणविषये प्राचां कानिचिन्मतानि प्रतीचां मतेभ्यो भिन्नान्यासन् ।

पूर्वेषां संप्रदायमनुसृत्य ग्रन्थारम्भे देवतां स्तौमि ।

विधवायाः पुनरुद्वाहः सशास्त्र इत्येके[1] शास्त्रविरुद्ध इत्यन्ये कलौ प्रतिषिद्ध इत्यपरे वदन्ति ।

विवाहविधावर्यमणं पूषणं चाधिकृत्य मन्त्रान्पठन्ति ।

अपराधं विना पत्युर्नारी तस्मै प्रकुप्यति ।

प्रजापीडनजो वह्नी राज्ञः श्रियं कुलं प्राणांश्च दहति ।

यस्मिञ्शकटे सोमो राजा[2] नीयते तस्य धुर्यन्यतरोऽनड्वान्युक्तः स्यादन्यतरो विमुक्तोऽथ राजानमुपाहरेयुः ।

यूनां बुद्धिः शास्त्रैः संस्क्रियते ।

पत्या परित्यक्ता विधवा वा यान्यं पतिं विन्दते सा पुनर्भूर्भवति ।

दिवि यथा संख्यातीतास्तारकास्तथैव दाशरथौ रामे गुणाः ।

तस्याश्चार्वङ्ग्याः स्त्रिया लावण्यं पश्यन्तो जना अक्ष्णां फलं प्रापुः ।

---

1) ೧೭ನೇ ಪಾಠ ನಿಯಮ ೪ ನೋಡು.

2) ಸೋಮಬಳ್ಳಿಗೆ "ರಾಜಾ (ಅರಸು)" ಎಂಬ ಹೆಸರು ಕೊಡಲ್ಪಟ್ಟಿರುವದು. उपाहरेयुः ಎಂಬ ಕ್ರಿಯಾಪದದ ಕರ್ತೃವಾದ ऋत्विजः ಎಂಬ ಪದವು ಇಲ್ಲಿ ಅಧ್ಯಾಹೃತವಾಗಿದೆ.

इन्द्रियं वा एतदस्मिँल्लोके यद्दधि । यद्दध्नाभिषिञ्चतीन्द्रियमेवा[1] स्मिंस्त[2] द्दधाति ।

मधुराभिर्गीर्भिः साधुं सान्त्वयामास गोविन्दः । स साधुश्च तमाशीर्भिरनुगृह्येष्टं प्रदेशं जगाम ।

[3]अस्ना रक्षः संसृजतात् ।

एकः शब्दः सम्यग्ज्ञातः सम्यक्प्रयुक्तश्च स्वर्गे लोके कामधुग्भवतीति वैयाकरणानां मतम् ।

पुण्येऽहनि पुरोधास्तं राज्येऽभिषिषेच मन्त्रं चेमं पपाठ ।

याभिरिन्द्रमभ्यषिञ्चत्प्रजापतिः सोमं राजानं वरुणं यमं मनुं ताभिरद्भिरभिषिञ्चामि त्वामहं राज्ञां त्वमधिराजो भवेह ।

देवासुरा वा एषु लोकेषु संयेतिरे । त एतस्यां प्राच्यां दिशि येतिरे तांस्ततोऽसुरा अजयन् । ते दक्षिणस्यां दिशि येतिरे तांस्ततोऽसुरा अजयन् । ते प्रतीच्यां दिशि येतिरे तांस्ततोऽसुरा अजयन् । त उदीच्यां दिशि येतिरे तांस्ततोऽसुरा अजयन् ।

आदित्यचन्द्रावनिलोऽनलश्च
द्यौर्भूमिरापो हृदयं यमश्च ।
अहश्च रात्रिश्च उभे च संध्ये
धर्मोऽपि जानाति नरस्य वृत्तम् ॥

अवश्यं नश्वरे देहे दुर्दमे च यमे द्विषि ।
हास्यं नास्याद्विनिर्याति यत्पुंसामिदमद्भुतम् ॥
सत्यं संसृतिगर्तेयं दुःखैः पूर्णा निरन्तरम् ।
यतस्तद्व्यतिरेकेण नान्यत्किंचिदिहाप्यते ॥
अनित्ये प्रियसंवासे संसारे चक्रवद्गतौ ।
पथि संगतमेवैतद्भ्राता माता पिता सखा ॥
हृदि विद्ध इवात्यर्थं यया संतप्यते जनः ।

---

[1]) अस्मिन् ಯಾವನ ಮೇಲೆ ನೀರಿನ ಅಥವಾ ಮೊಸರಿನ ಅಭಿಷೇಕ ಮಾಡಲ್ಪಟ್ಟಿರುವದೋ ಅವನಲ್ಲಿ.

[2]) तत् ಇದರ ಅರ್ಥವು ಇಲ್ಲಿ “ಅದರಿಂದ”, “ಆ ಕಾರಣದಿಂದ” ಎಂದಿರುವದು.

[3]) ಯಜ್ಞದಲ್ಲಿ ಕೊಂದ ಬಲಿಯ ರಕ್ತವನ್ನು ಭೂತ ಪಿಶಾಚಿಗಳಿಗೆ ಕೊಡುತ್ತಾರೆ. तात् ಪ್ರತ್ಯಯವನ್ನು ಹಚ್ಚಿ ವಿಕಲ್ಪದಿಂದ ಆಜ್ಞಾರ್ಥದಲ್ಲಿ ಪ್ರಥಮ ಮಧ್ಯಮ ಪುರುಷೈಕವಚನಗಳ ರೂಪಗಳನ್ನು ಮಾಡುವದುಂಟು. ಈ तात् ಪ್ರತ್ಯಯವು ದುರ್ಬಲವಾಗಿರುವದು.

पीडितोऽपि हि मेधावी न तां वाचमुदीरयेत् ॥
तस्य पृथ्वी प्रसूतेऽर्थं धर्ममर्थः प्रसूयते ।
प्रसौति विजयं धर्मः स च प्रस्रवति श्रियम् ॥
गर्हते न तथा श्वानं चाण्डालं च न गर्हति ।
गर्हयत्याहवे भग्नं यथासौ क्षत्रियं नरम् ॥
हते भर्तरि वैक्लव्यात्क्लिन्दन्ति तदरिस्त्रियः ।
अजस्रैरश्रुभिस्तासां क्लिद्यन्ति नयनानि च ॥
ददात्यसौ धनं भूरि ब्राह्मणेभ्यो दिनेदिने ।
ददते ब्राह्मणास्तस्मै संतुष्टा नित्यमाशिषः ॥
असौ स्वश्लाघमानोऽपि कत्थते नात्मनो गुणान् ।
कथयन्ति जना एव तस्य तानद्भुतान् भुवि ॥
वृश्चिकानां भुजङ्गानां दुर्जनानां च वेधसा ।
विभज्य नियतं न्यस्तं विषं पुच्छे मुखे हृदि ॥
चन्दनैश्चर्चितेव द्यौर्दिशः काशैरिव श्रिताः ।
क्षीरेण क्षालितेवोर्वी शर्वरीशे विराजति ॥
यथामिषं जले मत्स्यैर्भक्ष्यते श्वापदैर्भुवि ।
आकाशे पक्षिभिश्चैव तथा सर्वत्र वित्तवान् ॥
नक्रः स्वस्थानमासाद्य गजेन्द्रमपि कर्षति ।
स एव प्रच्युतः स्थानाच्छुनापि परिभूयते ॥
बुद्धिमान्पुरुषो जह्याद्भिन्नां नावमिवाम्भसि ।
अप्रवक्तारमाचार्यमनधीयानमृत्विजम् ॥
जाड्यं धियो हरति सिञ्चति वाचि सत्यं
मानोन्नतिं दिशति पापमपाकरोति ।
चेतः प्रसादयति दिक्षु तनोति कीर्तिं
सत्संगतिः कथय किं न करोति पुंसाम् ॥
मानुषाणां[1] प्रमाणं स्याद्भुक्तिर्वै दशवार्षिकी ।
विहंगानां तिरश्चां च यावदेव समाश्रयः ॥
कृष्णसारे ददच्चक्षुस्त्वयि चाधिज्यकार्मुके ।

---

1) ಇದರಿಂದ ಯಾವದೊಂದು ಒಡವೆಯ ಬಾಧ್ಯತೆ ಬಾಳುವ ಅವಧಿಯು ತೋರಿಸಲ್ಪಡುತ್ತದೆ.

मृगानुसारिणं साक्षात्पश्यामीव पिनाकिनम्[1] ॥
नाधर्मश्चरितो लोके सद्यः फलति गौरिव ।
शनैरावर्तमानस्तु कर्तुर्मूलानि कृन्तति ॥

ಭರತನು ತನ್ನ ಪಟ್ಟಾಭಿಷೇಕಕಾಲದಲ್ಲಿ ಬ್ರಾಹ್ಮಣರಿಗೆ ನೂರಗಟ್ಲೆ ಆಕಳುಗಳನ್ನು (गो) ಕೊಟ್ಟನು. ದೀರ್ಘತಮಾ ಎಂಬವನು ಅವನು ಕೊಡುವಾಗ (दृश्) ನೋಡಿದನು.

ಕೆಲವು ದಿವಸಗಳ ಕೆಳಗೆ (पूर्व) ಬ್ರಾಹ್ಮಣರು ಆಕಳ ಮಾಂಸವನ್ನೂ ಕುರೀ ಮಾಂಸವನ್ನೂ ತಿನ್ನುತ್ತಿದ್ದರು.

ಉತ್ತರದ ಜನರು (उदच्) ದಾಸ್ಯವು ಮನುಷ್ಯರ ಸ್ವಭಾವಕ್ಕೆ ವಿರುದ್ಧವಾದದ್ದೆಂದು ಮನಗಂಡು ದಕ್ಷಿಣದವರೊಡನೆ (अवाच्) ಕದನವಾಡಿದರು.

ಶುಕ್ರನೆಂಬವನು (उशनस्) ದೈತ್ಯರ ಗುರುವು, ಬೃಹಸ್ಪತಿಯು ದೇವತೆಗಳ ಗುರುವು ಇದ್ದರು. ಇವರಿಬ್ಬರು ರಾಜ್ಯದಾಡಳತೆಯ ಬಗ್ಗೆ ಮಾಡಿದ ಹೆಸರಾದ ಗ್ರಂಥಗಳು ಇವೆ.

ಅವರು ಗುಡ್ಡವನ್ನು ತೋಡುವದಕ್ಕೆ ಆರಂಭ ಮಾಡಿ ಬಹು ದಿವಸಗಳ (अहन् ತೃತೀಯಾ) ನಂತರ ಅದನ್ನು ಮುಗಿಸಿದರು.

ದಳವಾಯಿಯು ಆ ಗ್ರಾಮದ ಮುಖ್ಯಸ್ಥನಿಗೆ (ग्रामणी), ನಮ್ಮ ದಂಡಿನವರಿಗೆ ಧಾನ್ಯ ಕೊಡುವಿಯೋ ಎಂದು ಕೇಳಿದನು.

ಚಿತ್ರಕೂಟದ ಹತ್ತರಿದ್ದ ಗುಡಿಸಲವು ನೆರೆಹೊರೆಯಲ್ಲಿದ್ದ ಋಷಿಗಳಿಂದ (परिव्राज्) ಕಟ್ಟಲ್ಪಟ್ಟಿತು.

ಹೆಂಗಸರು (स्त्री) ಹುಡುಗರನ್ನು ಸಂರಕ್ಷಿಸತಕ್ಕದ್ದು, ಗಂಡಸರು (पुंस्) ದುಡಿದು ಹಣ ಸಂಪಾದಿಸತಕ್ಕದ್ದು.

ದಿಲೀಪನ ಕುದುರೆಯು ಒಮ್ಮೆ ಇಂದ್ರನಿಂದ (वृत्रहन्, मघवन्) ಒಯ್ಯಲ್ಪಟ್ಟಿತು.

ಆರಂಭದಲ್ಲಿ ನೀರು (अप्) ಮಾತ್ರವಿತ್ತು. ಆ ನೀರಿನ ಮೇಲೆ ಅನಾದ್ಯನಂತನಾದ (स्वयंभू) ಬ್ರಹ್ಮನು ತೋರಿದನು. ಈ ಎಲ್ಲ ಒಡವೆಗಳು ಆ ಬ್ರಹ್ಮನಿಂದ (स्वयंभू) ಹುಟ್ಟಿದವು.

ಅವನು ಒಂದು ಕಣ್ಣಿನಿಂದ (अक्षि) ಕುರುಡನಿದ್ದಾನೆ.

---

[1] ದುಷ್ಯಂತನೆಂಬ ಅರಸು ಒಂದು ಜಿಂಕೆಯ ಬೆನ್ನಟ್ಟಿ ಹೋಗುವಾಗ ಅವನ ಸಾರಥಿಯು ಅಂದದ್ದು.

ಕುಂದಬಳ್ಳಿಯ ಹೂವಿನೊಳಗಿನ ರಸವು ಗುಂಗೀ ಹುಳಗಳಿಂದ (षड्लिह) ಕುಡಿಯಲ್ಪಟ್ಟಿತು.

ಆನೆಗಳ ಎಲುಬಿನಿಂದ (अस्थि) ಮೂರ್ತಿಗಳು ಮಾಡಲ್ಪಡುತ್ತವೆ.

ಸತ್ಯಮಾರ್ಗದಿಂದ (पथिन्) ನಡೆಯುವವನು ಸುಖ ಹೊಂದುವನು.

ಗ್ರೀಸ ದೇಶದಲ್ಲಿ ಎರಡು ಗುಡ್ಡಗಳಿದ್ದವು. ಅವುಗಳಿಗೆ "ನಾಯಿಯ (श्वन्) ತಲೆ" ಎಂದು ಹೆಸರಿತ್ತು.

ನಿನ್ನ ಗಂಡನು (पति) ಬಡವರಿಗೆ ಹಣ ಕೊಡೆಂದು ನಿನಗೆ ಅಪ್ಪಣೆ ಮಾಡಿ ರುತ್ತಾನೆ.

ಅವನ ಜೊತೆಗಾರನು (सखि) ಕಾಶಿಗೆ ಹೋದದರಿಂದ ಅವನು ಇಲ್ಲಿ ಒಬ್ಬನೇ ಇರುತ್ತಾನೆ.

ಅರ್ಯಮನ (अर्यमन्) ಹೆಸರು ಝುಂದ ಧರ್ಮಪುಸ್ತಕದಲ್ಲಿ ಬರೆದಿರುತ್ತದೆ.

ಆ ಪುಸ್ತಕಗಳಲ್ಲಿ ಯಾವದಾದರೂ ಒಂದನ್ನು (एकतम) ನನಗೆ ಕೊಡು.

ವೇದ ಪಠಿಸುವ ಬ್ರಾಹ್ಮಣರು ಮಳೆಗಾಲದಲ್ಲಿ ಒದರುವ ಕಪ್ಪೆಗಳಂತೆ (वर्षाभ्व) ಕಾಣಿಸುತ್ತಾರೆ (भा).

---

## ಕೋಶ ೧೬.

अक्षि (ನ.) ಕಣ್ಣು.
अजस्र (ವಿ.) ತೆರಪಿಲ್ಲದ, ಎಡೆಬಿಡದ.
अत्यर्थम् (ಅ.) ಬಹಳವಾಗಿ, ಅತಿಶಯವಾಗಿ.
अद्भुत (ವಿ.) ಆಶ್ಚರ್ಯವಾದ.
अधर (ವಿ.) ಕೆಳಗಿನ, ಕಿರಿ.
अधर्म (ಪು.) ಕೆಟ್ಟ ಕೆಲಸ.
अनडुह् (ಪು.) ಎತ್ತು.
अनल (ಪು.) ಬೆಂಕಿ.
अनिल (ಪು.) ಗಾಳಿ.
अप् (ಸ್ತ್ರೀ. ನಿತ್ಯಬಹುವಚನ) ನೀರು.
अपर (ಸ.) ಎರಡನೇ, ಮತ್ತೊಂದು.
अप्रवक्तृ (ಪು.) ಮಾತಾಡದಂಥವ, ಕಲಿಸ ದಂಥವ.
अर्यमन् (ಪು.) ಒಂದು ದೇವತೆ; ಸತ್ತ ಪೂರ್ವಿಕ ರಲ್ಲಿ ಅಥವಾ ಹಿರಿಯರಲ್ಲಿ ಒಬ್ಬ.
अर्वन् (ಪು.) ಕುದುರೆ.
अवर (ಸ.) ಕೀಳ, ಹಿಂದಿನ, ಕೆಳಗಿನ.
अवश्यम् (ಅ.) ನಿಶ್ಚಯವಾಗಿ.
अवाच् (ವಿ.) ತೆಂಕಣದ, ದಕ್ಷಿಣದ.
असन् (ನ.) ನೆತ್ತರ.
असृज् (ನ.) ನೆತ್ತರ.
अहन् (ನ.) ದಿವಸ, ಹಗಲು.
आमिष (ಪು. ನ.) ಮಾಂಸ.
आशिस् (ಸ್ತ್ರೀ.) ಅನುಗ್ರಹ, ವರ.
आसन् (ನ.) ಬಾಯಿ.
आस्य (ನ.) ಬಾಯಿ.
आहव (ಪು.) ಕಾಳಗ.
इंद्रिय (ನ.) ಶಕ್ತಿ, ಬಲ (ಅವಯವಗಳ).
ईर् (೧ನೇ ಗ. ಪ., ೧೦ನೇ ಗ. ತನ್ನ ಪೂರ್ವಕ) ಮಾತಾಡು, ಉಚ್ಚರಿಸು, ಅನ್ನು.
उत्तर (ಸ.) ಮೇಲಿನ, ತರುವಾಯ ಬಂದ, ತರುವಾಯ.
उदच् (ವಿ.) ಉತ್ತರ ದಿಕ್ಕಿನ, ಬಡಗಣ.
उदन् (ನ.) ನೀರು.

उन्नति (ಸ್ತ್ರೀ.) ಗಾಂಭೀರ್ಯ, ದೊಡ್ಡಸ್ತಿಕೆ.

उर्वी (ಸ್ತ್ರೀ.) ಭೂಮಿ.

उशनस् (ಪು.) ಅಸುರರ ಗುರು, ಶುಕ್ರಾಚಾರ್ಯ.

ऋभुक्षिन् (ಪು.) ಇಂದ್ರನ ಹೆಸರು.

कपाल (ಪು. ನ.) ತಲೆ, ತಲೆಬುರುಡೆ.

कामदुह् (ವಿ.) ಇಷ್ಟೆಯನ್ನು ಪೂರೈಸುವ, ಕೋರಿಕೆಯನ್ನು ಕೊನೆಗಾಣಿಸುವ.

कार्मुक (ನ.) ಬಿಲ್ಲು.

अधिज्यकार्मुक (ವಿ.) ಹೆದೆ ಏರಿಸಿದ ಬಿಲ್ಲುಳ್ಳ.

काश (ಪು. ನ.) ಒಂದು ಬಿಳಿ ಹೂವು.

कुल (ನ.) ಕುಟುಂಬ, ವಂಶ.

कृ (अप+आ ಪೂರ್ವಕ) ತೆಗೆದುಹಾಕು.

कृ (अधि ಪೂರ್ವಕ) ಗುರಿ ಇಡು, ಲಕ್ಷಿಸು.

अधिकृत्य ವಿಷಯವಾಗಿ, ಲಕ್ಷಿಸಿ.

कृष्णसार (ಪು.) ಜಿಂಕೆ, ಚಿಗರಿ.

क्लिद् (೪ನೇ ಗ. ಪ.) ಹಸಿಯಾಗು, ತಣ್ಣಗಾಗು.

क्लिन्द् (೧ನೇ ಗ. ಪ.) ಹಲುಬು, ಮರುಗು, ಶೋಕ ಪಡು.

क्षीर (ನ.) ಹಾಲು.

गर्ह् (೧ನೇ ಗ. ಪ., ೧೦ನೇ ಗ.) ಜರಿಯು, ಹಳಿಯು, ಧಿಕ್ಕರಿಸು.

गिर् (ಸ್ತ್ರೀ.) ಮಾತು.

गृह् (೧ನೇ ಗ. ಆ.) ಧಿಕ್ಕರಿಸು, ಜರಿದುಬಿಡು.

गो (ಪು.) ಎತ್ತು, (ಸ್ತ್ರೀ.) ಆಕಳು, ಮಾತು, ಪೃಥ್ವಿ.

ग्रामणी (ಪು.) ಗ್ರಾಮದ ಮುಖ್ಯಸ್ಥ.

ग्लौ (ಪು.) ಚಂದ್ರ.

चक्रवद्गति (ವಿ.) ಗಾಲಿಯಂತೆ ಚಲನೆಯುಳ್ಳ, ಹಗಲೆಲ್ಲ ತಿರುಗುವ.

चन्दन (ನ.) ಗಂಧದ ಕಟ್ಟಿಗೆ.

चरित (ವಿ.) ಮಾಡಿದ, ರೂಢಿ ಮಾಡಿದ.

चर्चित (ವಿ.) ಪೂಸಿದ, ಸಾರಿಸಿದ, ಲೇಪಿಸಿದ.

चाण्डाल (ಪು.) ಹೊಲೆಯ, ಜಾತಿಭ್ರಷ್ಟ.

चार्वङ्गी (ಸ್ತ್ರೀ.) ಸುಂದರ ಹೆಂಗಸು, ಚಲುವೆ.

चेतस् (ನ.) ಮನಸ್ಸು, ಬುದ್ಧಿ.

जन् (सम् ಪೂರ್ವಕ) ಹುಟ್ಟು, ಊರ್ಜಿತ ಸ್ಥಿತಿಯನ್ನು ಹೊಂದು.

जाड्य (ನ.) ದಡ್ಡತನ, ಮಂದತ್ವ.

तन्त्री (ಸ್ತ್ರೀ.) ತಂಬೂರೆ, ವೀಣೆ.

तदरिस्त्री (ಸ್ತ್ರೀ.) ಅವನ ವೈರಿಯ ಹೆಂಡತಿ.

तद्व्यतिरेक (ಪು.) [व्यतिरेक (ಪು.) ಅಗಲುವಿಕೆ, ತ್ಯಾಗ.] ಅವನಿಂದ ಅಗಲುವಿಕೆ, ಅವನ ತ್ಯಾಗ.

तप् (೪ನೇ ಗ. ಆ. सम् ಪೂರ್ವಕ) ದುಃಖಪಡು, ಕಷ್ಟ ಪಡು.

तरी (ಸ್ತ್ರೀ.) ನಾವು.

तादृश् (ವಿ.) ಅಂಥ, ಆ ಪ್ರಕಾರದ; (ಅ.) ಆ ಪ್ರಕಾರವಾಗಿ.

तिर्यच् (ಪು.) ಕ್ಷುದ್ರಪ್ರಾಣಿ; (ವಿ.) ಓರೆಯಾದ.

तुरासाह् (ಪು.) ಇಂದ್ರನ ಹೆಸರು.

त्विष् (ಸ್ತ್ರೀ.) ಹೊಳಪು, ಶೋಭೆ, ವೈಭವ.

दत् (ಪು.) ಹಲ್ಲು.

ददत् (ವ. ಕೃ.) ಕೊಡುವ.

दक्षिण (ನ.) ತೆಂಕಣದ.

दधि (ನ.) ಮೊಸರು.

दाशरथि (ಪು.) ದಶರಥನ ಮಗ, ರಾಮಚಂದ್ರ.

दिव् (ಸ್ತ್ರೀ.) ದಿವಸ, ಹಗಲು, ಸ್ವರ್ಗ.

दिश् (ಸ್ತ್ರೀ.) ದಿಕ್ಕು, ಸ್ಥಲ.

दुर्दम (ವಿ.) ಹಿಡಿಯಲಸಾಧ್ಯ, ದುರ್ವಾರ.

दृश् (ಸ್ತ್ರೀ.) ದೃಷ್ಟಿ, ಕಣ್ಣು.

देवेज् (ವಿ.) ದೇವಪೂಜಕ, ಪೂಜಾರಿ.

दोषन् (ಪು. ನ.) ಬಾಹು, ಭುಜ, ತೋಳು.

द्यो (ಸ್ತ್ರೀ.) ಆಕಾಶ, ಸ್ವರ್ಗ.

धी (ಸ್ತ್ರೀ.) ಬುದ್ಧಿ.

धुर् (ಸ್ತ್ರೀ.) ನೊಗ.

नक्र (ಪು.) ಮೊಸಳೆ.

नश्वर (ವಿ.) ಹಾಳಾಗುವಂಥ, ನಾಶವಾಗುವಂಥ.

नस् (ಸ್ತ್ರೀ.) ಮೂಗು.
नियतम् (ಅ.) ನಿಶ್ಚಯವಾಗಿ.
निरन्तरम् (ಅ.) ತೆರಪಿಲ್ಲದೆ, ಎಡೆಬಿಡದೆ.
निर्जर (ಪು.) ದೇವತೆ.
निर्दय (ವಿ.) ಕ್ರೂರ, ಕೆಟ್ಟ, ಕಠೋರವಾದ.
निश् (ಸ್ತ್ರೀ.) ರಾತ್ರಿ.
पत् (೧ನೇ ಗ. ಪ.) ಅಸ್ನು, ಓಡು.
पति (ಪು.) ಗಂಡ, ಎರೆಯು, ಒಡೆಯು.
पथिन् (ಪು.) ಮಾರ್ಗ, ದಾರಿ.
पद् (ಪು.) ಅಡಿ, ಪಾದ.
पपी (ಪು.) ಸೂರ್ಯ; ಪಾಲಕ, ರಕ್ಷಕ.
पर (ಸ.) ಬೇರೆ, ಮತ್ತೊಂದು, ಇನ್ನೊಂದು.
परित्यक्त (ವಿ.) ಬಿಟ್ಟುಬಿಟ್ಟ, ತ್ಯಜಿಸಲ್ಪಟ್ಟ.
परिव्राज् (ಪು.) ಸನ್ಯಾಸಿ, ಬೈರಾಗಿ, ಋಷಿ.
पिनाकिन् (ಪು.) ಶಿವನ ಹೆಸರು.
पुंस् (ಪು.) ಮನುಷ್ಯ, ಗಂಡಸು.
पुनर्भू (ಸ್ತ್ರೀ.) ಉಡಕೆಯಾದ ಸ್ತ್ರೀಯು.
पुर् (ಸ್ತ್ರೀ.) ಪಟ್ಟಣ.
पुरोधस् (ಪು.) ಪುರೋಹಿತ.
पूर्ण (ವಿ.) ತುಂಬಿದ.
पूर्व (ಸ.) ಮೊದಲಿನ, ಮೂಡಣದ.
पृत् (ಸ್ತ್ರೀ.) ದಂಡು, ಸೈನ್ಯ.
प्रच्युत (ವಿ.) ಬಿದ್ದ, ಕಳಚಿ ಬಿದ್ದ, ಭ್ರಷ್ಟವಾದ.
प्रजापीडनज (ವಿ.) ಪ್ರಜೆಗಳಿಗೆ ಆದ ದುಃಖದಿಂದ ಹುಟ್ಟಿದ.
प्रतिषिद्ध (ವಿ.) ನಿಷೇಧಿಸಿದ (प्रति + सिध् ಧಾತುವಿನ ಕ. ಭೂ. ಕೃ.).
प्रत्यच् (ವಿ.) ಪಶ್ಚಿಮದ.
प्रधी (ವಿ.) ಚುರುಕುಬುದ್ಧಿಯುಳ್ಳ.
प्रयुक्त (ವಿ.) ಉಪಯೋಗಿಸಿದ, ಕೆಲಸಕ್ಕೆ ಹಚ್ಚಿದ (प्र + युज् ಧಾತುವಿನ ಕ. ಭೂ. ಕೃ.).
प्राच् (ವಿ.) ಪೂರ್ವದ, ಮೂಡಣದ.
प्रियसंवास (ಪು.) ಗೆಳೆಯರ ಕೂಡ ಇರುವಿಕೆ.
फल् (೧ನೇ ಗ. ಪ.) ಕಾಯಾಗು.

भग्न (ವಿ.) ಮುರಿದು ಬಿದ್ದ, (ರಣಾಂಗಣದಿಂದ) ಓಡಿಹೋದ (भञ्ज् ಧಾತುವಿನ ಕ. ಭೂ. ಕೃ.).
भज् (वि ಪೂರ್ವಕ) ಭಾಗ ಮಾಡು.
भुजङ्ग (ಪು.) ಹಾವು.
भुक्ति (ಸ್ತ್ರೀ.) ಅನುಭೋಗ, ಬಾಧ್ಯತೆ, ಉಪಭೋಗ.
भू (ಸ್ತ್ರೀ.) ಭೂಮಿ, ಪೃಥ್ವಿ.
भू (परि ಪೂರ್ವಕ) ಗೆಲ್ಲು, ಜರಿಯು, ಹಳಿಯು, ಧಿಕ್ಕರಿಸು.
भ्रू (ಸ್ತ್ರೀ.) ಹುಬ್ಬು.
मघवन् (ಪು.) ಇಂದ್ರನ ಹೆಸರು.
मथिन् (ಪು.) ಕಡೆಗೋಲು.
मधुलिह् (ಪು.) ಗುಂಗೀಹುಳ.
मांस्, मांस (ನ.) ಖಂಡ.
मानोन्नति (ಸ್ತ್ರೀ.) [मान (ಪು.) ವೈಭವ, ದೊಡ್ಡಸ್ತಿಕೆ] ದೊಡ್ಡಸ್ತಿಕೆಯ ಹೆಚ್ಚಳ.
मास् (ಪು.) ತಿಂಗಳು.
मृगानुसारिन् (ವಿ.) ಜಿಂಕೆಯ ಬೆನ್ನು ಹತ್ತಿ ಓಡುವವ.
यत् (सम् ಪೂರ್ವಕ) ಹೋರಾಡು, ಒದ್ದಾಡು.
यम (ಪು.) ಅಂತಕ.
ययी (ಪು.) ಹಾದಿ, ಮಾರ್ಗ.
या (वि + निर् ಪೂರ್ವಕ) ಹೋಗು, ಹೊರವಡು.
राज् (೧ನೇ ಗ. ಪ. ಆ. (वि ಪೂರ್ವಕ) ಶೋಭಿಸು, ಹೊಳೆಯು.
राज् (ಪು.) ಅರಸು; (ವಿ.) ಹೊಳೆಯುವ.
रै (ಪು.) ಸಂಪತ್ತು, ಭಾಗ್ಯ.
लावण्य (ನ.) ಸೌಂದರ್ಯ, ಮನೋಹರತೆ.
वर्षाभू (ಪು.) ಕಪ್ಪೆ.
वह्नि (ಪು.) ಬೆಂಕಿ.
वित्तवत् (ವಿ.) ಐಶ್ವರ್ಯವುಳ್ಳ, ಧನವಂತ.
विद्ध (ವಿ.) ನಟ್ಟ, ಚುಚ್ಚಿದ, ಹೊಡಆ ತಿಂದ.
विश् (ಪು.) ವೈಶ್ಯ ಜಾತಿಯವ; (ಸ್ತ್ರೀ.) ಪ್ರಜೆಗಳು, ಜನರು.

विश्वपा (ಪು.) ಲೋಕರಕ್ಷಕ, ದೇವರು.
विश्ववाह् (ಪು.) ಲೋಕರಕ್ಷಕ, ಲೋಕಪಾಲಕ.
विश्वसृज् (ಪು.) ಸೃಷ್ಟಿಕರ್ತ, ಬ್ರಹ್ಮ.
वृत् (आ ಪೂರ್ವಕ) ತಿರುಗು, ಹಿಂದಿರುಗು.
वृत्रहन् (ಪು.) ಇಂದ್ರನ ಹೆಸರು.
वृश्चिक (ಪು.) ಚೇಳು.
वैक्लव्य (ನ.) ವೇದನೆ, ಪ್ರಾಣಸಂಕಟ.
वैयाकरण (ಪು.) ವ್ಯಾಕರಣಕರ್ತ.
व्याकरण (ನ.) ಭಾಷೆಯ ವಿಧಿಗಳನ್ನು ಹೇಳುವ ಶಾಸ್ತ್ರ.
शकट (ಪು. ನ.) ಚಕ್ಕಡಿ, ಭಂಡಿ.
शकुन् (ನ.) ಶಕುನ.
शंखध्मा (ಪು.) ಶಂಖ ಊದುವವ.
शनैस् (ಅ.) ಮಂದವಾಗಿ.
शर्वरीश (ಪು.) [शर्वरी (ಸ್ತ್ರೀ.) ರಾತ್ರಿ] ಚಂದ್ರ.
श्री (ಸ್ತ್ರೀ.) ಐಶ್ವರ್ಯ, ಲಕ್ಷ್ಮೀದೇವಿ.
श्वन् (ಪು.) ನಾಯಿ.
श्वापद (ಪು.) ಮೃಗ, ಪಶು.
सखि (ಪು.) ಗೆಳೆಯ, ಮಿತ್ರ, ಸ್ನೇಹಿತ.
संख्यातीत (ವಿ.) ಅಗಣ್ಯ, ಲೆಕ್ಕವಿಲ್ಲದ (अतीत ಮೀರಿದ).
संतुष्ट (ವಿ.) ಸಮಾಧಾನ ಹೊಂದಿದ, ತೃಪ್ತಿ ಹೊಂದಿದ.
संप्रदाय (ಪು.) ವಾಡಿಕೆ, ಪದ್ಧತಿ, ಹಿರಿಯರಿಂದ ಬಂದ ನೇಮ.
संसृतिगर्ता (ಸ್ತ್ರೀ.) [संसृति (ಸ್ತ್ರೀ.) ಸಂಸಾರ, ಪ್ರಪಂಚ, गर्ता (ಸ್ತ್ರೀ.) ತಗ್ಗು, ಕುಣಿ] ಸಂಸಾರದ ತಗ್ಗು.
सत्संगति (ಸ್ತ್ರೀ.) ಒಳ್ಳೇ ಜನರ ಸಹವಾಸ.
सद् (आ ಪೂರ್ವಕ, ೧ನೇ ಗ. ಪ.) ಸಮೀಪಿಸು, ಬರು.
सद् (प्र ಪೂರ್ವಕ, ಪ್ರೇರಣಾರ್ಥಕ) ಸಂತೋಷಪಡಿಸು, ಒಲಿಸು.
सद्यस् (ಅ.) ಒಮ್ಮಿಂದೊಮ್ಮೆ, ಫಕ್ಕನೇ, ಶೀಘ್ರವಾಗಿ.
सम्यच् (ವಿ.) ಒಳ್ಳೇ.
सम्राज् (ಪು.) ದೊಡ್ಡ ಅರಸು, ಚಕ್ರವರ್ತಿ.
साक्षात् (ಅ.) ಎದುರಿಗೆ, ಸಮಕ್ಷಮ, ಕೇವಲ.
सु (೧ನೇ ಗ. ಪ., ೨ನೇ ಗ. ಪ. प्र ಪೂರ್ವಕ) ಹಡಿಯು, ಹುಟ್ಟಿಸು.
सू (೧ನೇ ಗ. ಆ. प्र ಪೂರ್ವಕ) ಹಡಿಯು, ಹುಟ್ಟಿಸು.
सू (೪ನೇ ಗ. ಆ. प्र ಪೂರ್ವಕ) ಹಡಿಯು, ಹುಟ್ಟಿಸು.
सृज् (सम् ಪೂರ್ವಕ) ಕೂಡಿಸು, ಹೊಂದಿಸು, ಒತ್ತಟ್ಟಿಗೆ ತರು, ಸಂಯೋಗಿಸು.
स्त्री (ಸ್ತ್ರೀ.) ಹೆಂಗಸು, ಹೆಂಡತಿ.
स्नु (ಪು. ನ.) ಶಿಖರ, ತುದಿ.
स्वप्नाय् (ನಾಮಸಾಧಿತ ಕ್ರಿಯಾಪದ, ಆ.) ಕನಸಿನಲ್ಲಿರು, ಕನಸಿನಲ್ಲಿ ಮಾತಾಡು.
स्वयंभू (ವಿ.) ತನ್ನಿಂದ ತಾನೇ ಇರುವ, ಆದ್ಯಂತವಿಲ್ಲದ.
हास्य (ನ.) ನಗೆ.
हृ (उप+अव ಪೂರ್ವಕ, ೧ನೇ ಗ. ಪ. ಆ.) ತರು, ತಕ್ಕೊಳ್ಳು.

---

ಸಂಪಾದಿಸು, ಗಳಿಸು उप+अर्ज् (೧ನೇ ಗ. ಪ. ೧೦ನೇ ಗ.).
ಪ್ರಾರಂಭ अग्र (ನ.), आदि (ಪು.).
ಕುರುಡ अन्ध (ವಿ.).
ಸಾಕು, ಪೋಷಿಸು सम्+वर्धय (सम्+वृध् ಧಾತುವಿನ ಪ್ರೇರಣಾರ್ಥಕ) पोषणं ಅಥವಾ भरणं कृ.
ಕಟ್ಟು, ರಚಿಸು निर्+मा (೩ನೇ ಗ. ಪ.).
ನೂರಗಟ್ಟಲೆ शतशः (ಅ.).
ಕರೆ अभि+धा, ಕರೆಯಲ್ಪಟ್ಟ अभिहित.
ಒದರು (ಕಪ್ಪೆಯಂತೆ) आ+रट् (೧ನೇ ಗ. ಪ.).
ದೀರ್ಘತಮಾ दीर्घतमस् (ಪು.).
ತೋಡು उद्+खन्.

ತೋಡಲಿಕ್ಕೆ ತत्खनितुम् (ಹೇತ್ವರ್ಥಕ ಅವ್ಯಯ).
ಕಾಳು धान्य (ನ.).
ಕ್ರೂರವಾದ ಮಾನವಾನಹ, निरनुक्रोशं (ಕರ್ಮ).
ರಾಜನೀತಿ नीतिशास्त्र (ನ.).
ಮಳೆಗಾಲ वर्षा (ಸ್ತ್ರೀ. ನಿತ್ಯಬಹುವಚನ).
ಧರ್ಮಸಂಬಂಧದ ಪುಸ್ತಕ धर्मग्रन्थ (ಪು.).
ಹೆಸರು ಪಡೆದ, ಹೆಸರಾದ अभिमत, प्रसिद्ध.
ರಚನೆಯಿಂದ ಹೆಸರು ಪಡೆದಂಥವರಿಬ್ಬರು कर्तृत्वेनाभिमतौ.
ಆಳುತನ दास्य (ನ.).
ವಾಸ್ತವ್ಯ, ನಿಜಸ್ಥಿತಿ ऋत (ನ.).

## ೧೭ನೇ ಪಾಠ.

೧. ಸಂಸ್ಕೃತ ಸಂಖ್ಯಾವಾಚಕಗಳು ಯಾವವಂದರೆ:—

| | | | | | |
|---|---|---|---|---|---|
| १ एक | ಒಂದು | ೧ | ११ एकादशन् | ಹನ್ನೊಂದು | ೧೧ |
| २ द्वि | ಎರಡು | ೨ | १२ द्वादशन् | ಹನ್ನೆರಡು | ೧೨ |
| ३ त्रि | ಮೂರು | ೩ | १३ त्रयोदशन् | ಹದಿಮೂರು | ೧೩ |
| ४ चतुर् | ನಾಲ್ಕು | ೪ | १४ चतुर्दशन् | ಹದಿನಾಲ್ಕು | ೧೪ |
| ५ पञ्चन् | ಐದು | ೫ | १५ पञ्चदशन् | ಹದಿನೈದು | ೧೫ |
| ६ षष् | ಆರು | ೬ | १६ षोडशन् | ಹದಿನಾರು | ೧೬ |
| ७ सप्तन् | ಏಳು | ೭ | १७ सप्तदशन् | ಹದಿನೇಳು | ೧೭ |
| ८ अष्टन् | ಎಂಟು | ೮ | १८ अष्टादशन् | ಹದಿನೆಂಟು | ೧೮ |
| ९ नवन् | ಒಂಬತ್ತು | ೯ | १९ { नवदशन् / एकोनविंशति } | ಹತ್ತೊಂಬತ್ತು | ೧೯ |
| १० दशन् | ಹತ್ತು | ೧೦ | २० विंशति | ಇಪ್ಪತ್ತು | ೨೦ |

ಈ ಸಂಖ್ಯಾವಾಚಕಗಳು ೧೯ರ ವರೆಗೂ ವಿಶೇಷಣಗಳೆಂದು ಹೇಳಬಹುದು; ಅಂದರೆ ವಿಶೇಷ್ಯಗಳ ವಚನ ವಿಭಕ್ತಿಗಳು ಅವುಗಳಿಗೆ ಹತ್ತುತ್ತವೆ. ಮೊದಲಿನ ನಾಲ್ಕಕ್ಕಂತೂ ವಿಶೇಷ್ಯಗಳ ಲಿಂಗಗಳೂ ಹತ್ತುತ್ತವೆ.

| | | | | | |
|---|---|---|---|---|---|
| ೨. २० विंशति | ಇಪ್ಪತ್ತು | ೨೦ | ६० षष्टि | ಅರವತ್ತು | ೬೦ |
| ३० त्रिंशत् | ಮೂವತ್ತು | ೩೦ | ७० सप्तति | ಎಪ್ಪತ್ತು | ೭೦ |
| ४० चत्वारिंशत् | ನಾಲ್ವತ್ತು | ೪೦ | ८० अशीति | ಎಂಬತ್ತು | ೮೦ |
| ५० पञ्चाशत् | ಐವತ್ತು | ೫೦ | ९० नवति | ತೊಂಬತ್ತು | ೯೦ |

ಇವು ನಾಮಗಳೆಂದೆನ್ನಬಹುದು. ಇವುಗಳ ವಿಶೇಷ್ಯಗಳು ಯಾವ ಲಿಂಗ ಉಳ್ಳವುಗಳು ಇದ್ದಾಗ್ಯೂ, ಇವು ಸ್ತ್ರೀಲಿಂಗ ಏಕವಚನದಲ್ಲಿಯೇ ಉಳಿಯುತ್ತವೆ. ಉದಾ: विंशतिर्ब्राह्मणाः ಅಂದರೆ ಇಪ್ಪತ್ತು ಮಂದಿ ಬ್ರಾಹ್ಮಣರು; ಬೇರೆ ನಾಮಗಳಂತೆ ಇವುಗಳಿಗೂ ದ್ವಿಬಹುವಚನಗಳುಂಟು, ಆದರೆ ಅವುಗಳನ್ನು ಪ್ರಯೋಗಿಸಿದರೆ, ವಾಕ್ಯರಚನೆಯೇ ಭಿನ್ನವಾಗುವದು. ಉದಾ: ब्राह्मणानां विंशती ಅಂದರೆ

ಎರಡು ಇಪ್ಪತ್ತು ಮಂದಿ ಬ್ರಾಹ್ಮಣರು; ब्राह्मणानां विंशतयः ಅಂದರೆ ಬಹಳ ಇಪ್ಪತ್ತು ಮಂದಿ ಬ್ರಾಹ್ಮಣರು. ब्राह्मणानां विंशतिः ಒಂದು ಇಪ್ಪತ್ತು ಜನ ಬ್ರಾಹ್ಮಣರು ಎಂದು ಸಹ ಪ್ರಯೋಗಿಸಬಹುದು.

೩. ಮೇಲಿನ ದಶಕವಾಚಕನಾಮಗಳ ನಡುವಿನ ಸಂಖ್ಯೆಗಳನ್ನು ತೋರಿಸುವದಕ್ಕೋಸ್ಕರ ಆಯಾ ದಶಕವಾಚಕನಾಮಗಳ ಹಿಂದೆ एकದಿಂದ नवन् ವರೆಗಿನ ಶಬ್ದಗಳನ್ನು ಕೂಡಿಸುವದುಂಟು[1]. ಆದರೆ नवन् ಶಬ್ದವನ್ನು ಕೂಡಿಸಿ ಸಮಾಸ ಮಾಡುವದಕ್ಕೆ ಬದಲಾಗಿ ಬಹುತರ एकोन ಎಂಬ ಶಬ್ದವನ್ನು ಅದರ ಮುಂದಿನ ದಶಕವಾಚಕನಾಮಕ್ಕೆ ಕೂಡಿಸಿ ಸಮಸ್ತಪದವನ್ನು ಮಾಡುವ ರೂಢಿಯುಂಟು. ಈ ಸಮಾಸಗಳಲ್ಲಿ ಪೂರ್ವಪದದ ಅಂತ್ಯ न ಕ್ಕೆ ಲೋಪ ಬರುವದು. ಸಮಾಸಗಳಲ್ಲಿ द्वि, त्रि, अष्टन् ಇವು ಕ್ರಮವಾಗಿ द्वा, त्रयः, अष्टा ಎಂಬ ರೂಪಾಂತರವನ್ನು ಹೊಂದುವವು; ಆದರೆ चत्वारिंशत्, पञ्चाशत्, षष्टि, सप्तति, नवति ಈ ನಾಮಗಳು ಪರಪದಗಳಾಗಿದ್ದರೆ, ಇವು ಈ ರೂಪಾಂತರವನ್ನು ವಿಕಲ್ಪದಿಂದ ಹೊಂದುವವು. अशीति ಶಬ್ದವು ಪರಪದವಾಗಿದ್ದರಂತೂ ಈ ರೂಪಾಂತರವನ್ನು ಹೊಂದುವದೇ ಇಲ್ಲ, ಅಂದರೆ द्वि त्रि ಎಂಬ ಮೂಲ ರೂಪಗಳೇ ಉಳಿಯುತ್ತವೆ. विंशति ಮೊದಲಾದ ಶಬ್ದಗಳ ದ್ವಿಬಹುವಚನಗಳ ಬಗ್ಗೆ ಮೇಲೆ ಹೇಳಿದ ನಿಯಮವು ಈ ಸಂಖ್ಯಾವಾಚಕಗಳಿಗೂ ಹತ್ತುತ್ತದೆ. शत (ನೂರು) ಶಬ್ದವು ನಿತ್ಯ ನಪುಂಸಕಲಿಂಗ.

| | | | | | | | |
|---|---|---|---|---|---|---|---|
| ३१ | एकत्रिंशत् | ಮೂವತ್ತೊಂದು | ೩೧ | ३६ | षट्त्रिंशत्[2] | ಮೂವತ್ತಾರು | ೩೬ |
| ३२ | द्वात्रिंशत् | ಮೂವತ್ತೆರಡು | ೩೨ | ३७ | सप्तत्रिंशत् | ಮೂವತ್ತೇಳು | ೩೭ |
| ३३ | त्रयस्त्रिंशत् | ಮೂವತ್ತಮೂರು | ೩೩ | ३८ | अष्टात्रिंशत् | ಮೂವತ್ತೆಂಟು | ೩೮ |
| ३४ | चतुस्त्रिंशत् | ಮೂವತ್ತನಾಲ್ಕು | ೩೪ | ३९ | नवत्रिंशत् / एकोनचत्वारिंशत् | ಮೂವತ್ತರೊಂಬತ್ತು | ೩೯ |
| ३५ | पञ्चत्रिंशत् | ಮೂವತ್ತೈದು | ೩೫ | | | | |
| ४२ | द्विचत्वारिंशत् / द्वाचत्वारिंशत् | ನಾಲ್ವತ್ತೆರಡು | ೪೨ | | | | |
| ४३ | त्रिचत्वारिंशत् / त्रयश्चत्वारिंशत् | ನಾಲ್ವತ್ತಮೂರು | ೪೩ | | | | |

[1] ಕನ್ನಡ ಪದ್ಧತಿಗೆ ಇದು ವಿಪರೀತವಾದದ್ದು. ಕನ್ನಡದಲ್ಲಿ ಒಂದು, ಎರಡು ಎಂಬವು ದಶಕವಾಚಕಸಂಖ್ಯೆಗಳ ಮುಂದೆ ಬರುತ್ತವೆ. ಹತ್ತು + ಒಂದು = ಹನ್ನೊಂದು, ಇಪ್ಪತ್ತೆರಡು, ನಾಲ್ವತ್ತೈದು ಇತ್ಯಾದಿ.

[2] ಟೀಪು — ಇಲ್ಲಿ ट्, तಕಾರಗಳ ಸಂಯೋಗವಾದಾಗ್ಯೂ तಕಾರಕ್ಕೆ टಕಾರಾದೇಶವಾಗುವದಿಲ್ಲ; ಯಾಕಂದರೆ ಶಬ್ದಾಂತ್ಯ ಅಥವಾ ಪದಾಂತ್ಯ ಮೂರ್ಧನ್ಯ ವರ್ಣಗಳಿಗೆ ದಂತ್ಯ ವರ್ಣಗಳು ಪರವಾಗಲು ಆ ಪರವಾದ ದಂತ್ಯ ವರ್ಣಗಳಿಗೆ ಮೂರ್ಧನ್ಯ ವರ್ಣಗಳು ಆದೇಶವಾಗುವದಿಲ್ಲ.

| | | |
|---|---|---|
| ४८ { अष्टचत्वारिंशत्<br>अष्टाचत्वारिंशत् } | ನಾಲ್ವತ್ತೆಂಟು | ೪೮ |
| इत्यादि. | | |
| ८२ द्व्यशीति | ಎಂಬತ್ತೆರಡು | ೮೨ |
| ८३ त्र्यशीति | ಎಂಬತ್ತಮೂರು | ೮೩ |
| ८८ अष्टाशीति | ಎಂಬತ್ತೆಂಟು | ೮೮ |
| १००० सहस्र | ಸಾವಿರ | ೧೦೦೦ |
| १०००० दशसहस्र | ಹತ್ತುಸಾವಿರ | ೧೦೦೦೦ |

## ವಿಭಕ್ತಿರೂಪಗಳು.

### ಪುಲ್ಲಿಂಗ.

೪. एक ಶಬ್ದವು ಸರ್ವನಾಮಗಳಂತೆ ನಡಿಯುತ್ತದೆ. "ಜನ" ಎಂಬ ಅರ್ಥದಲ್ಲಿ ಅದಕ್ಕೆ ದ್ವಿಬಹುವಚನಗಳುಂಟು. द्वि ಶಬ್ದವು ನಿತ್ಯದ್ವಿವಚನದಲ್ಲಿ ನಡಿಯುವದು. ಇದು द्व ಎಂಬ ರೂಪಾಂತರ ಹೊಂದಿ अಕಾರಾಂತ ನಾಮಗಳಂತೆ ನಡಿಯುತ್ತದೆ. ಉದಾ: द्वौ (ಪ್ರ. ದ್ವಿ.), द्वाभ्याम् (ತೃ. ಚ. ಪ.), द्वयोः (ಷ. ಸ.). त्रि ಹಿಡಿದು ಮುಂದಿನ ಸಂಖ್ಯಾವಾಚಕಗಳು ನಿತ್ಯಬಹುವಚನದಲ್ಲಿ ನಡಿಯುತ್ತವೆ. त्रि ಶಬ್ದವು इಕಾರಾಂತ ಪುಲ್ಲಿಂಗ ನಾಮಗಳಂತೆ ನಡಿಯುತ್ತದೆ. ಆದರೆ ಷಷ್ಠೀ ಬಹುವಚನದ ರೂಪವು ಮಾತ್ರ त्रयाणाम् ಆಗುತ್ತದೆ.

चतुर् ಶಬ್ದದ (ಪ್ರಥ. ಬ.) चत्वारः, (ಷಷ್ಠೀ ಬ.) चतुर्णाम्, (ಸಪ್ತ. ಬ.) चतुर्षु ಆಗುತ್ತವೆ. ಉಳಿದ ರೂಪಗಳು ಸಾಮಾನ್ಯ ನಿಯಮಕ್ಕನುಸರಿಸಿ ಆಗುತ್ತವೆ.

ಉಳಿದ ಸಂಖ್ಯಾವಾಚಕಗಳ ಪ್ರಥಮಾ ದ್ವಿತೀಯಾ ವಿಭಕ್ತಿಗಳ ಪ್ರತ್ಯಯಗಳಿಗೆ ಲೋಪ ಬರುತ್ತದೆ. ಸ್ವರಾದಿ ಪ್ರತ್ಯಯಗಳು ಪರವಾಗಲು ಅಂತ್ಯ अन्ಕ್ಕೆ आन् ಆದೇಶವಾಗುತ್ತದೆ; ಉಳಿದ ಕಡೆಯಲ್ಲಿ नಕಾರಕ್ಕೆ ಲೋಪ ಬರುತ್ತದೆ. ಉದಾ: पञ्च (ಪ್ರ. ದ್ವಿ.), पञ्चभिः (ತೃ.), पञ्चभ्यः (ಚ. ಪ.), पञ्चानाम् (ಷ.), पञ्चसु (ಸ.); षट्-ड् (ಪ್ರ. ದ್ವಿ.), षड्भिः (ತೃ.); षड्भ्यः (ಚ. ಪ.), षण्णाम् (ಷ.), षट्सु (ಸ.). ಇದರಂತೆಯೇ नवन्, दशन्, कति (ಎಷ್ಟು) ಶಬ್ದಗಳು ನಡಿಯುತ್ತವೆ.

अष्टन् ಶಬ್ದವು ಮತ್ತೂ ಒಂದು ಪ್ರಕಾರ ನಡಿಯುತ್ತದೆ; ಆಗ ಅದರ ರೂಪಗಳು अष्टौ (ಪ್ರ. ದ್ವಿ.), अष्टाभिः (ತೃ.), अष्टाभ्यः (ಚ. ಪ.), अष्टानाम् (ಷ.), अष्टासु (ಸ.) ಆಗುತ್ತವೆ.

### ಸ್ತ್ರೀಲಿಂಗ.

೫. एका, द्वा ಶಬ್ದಗಳು सर्वा ಶಬ್ದದಂತೆ ನಡಿಯುತ್ತವೆ. त्रि, चतुर् ಶಬ್ದಗಳ ಸ್ತ್ರೀಲಿಂಗರೂಪಗಳು तिसृ, चतसृ ಆಗುತ್ತವೆ; ಅವುಗಳ ವಿಭಕ್ತಿರೂಪಗಳು

ಹ್ಯಾಗಂದರೆ:— तिस्रः, चतस्रः (ಪ್ರ. ದ್ವಿ.), तिसृभिः, चतसृभिः (ತೃ.), तिसृभ्यः, चतसृभ्यः (ಚ. ಪ.), तिसृणाम्, चतसृणाम् (ಷ.), तिसृषु, चतसृषु (ಸ.).

ಉಳಿದ ಸಂಖ್ಯಾವಾಚಕಗಳೆಲ್ಲ ಪುಲ್ಲಿಂಗದಂತೆ ನಡಿಯುತ್ತವೆ.

ನಪುಂಸಕಲಿಂಗ.

| | | | | | |
|---|---|---|---|---|---|
| ೬. | एक | एकम् | ಪ್ರ. ದ್ವಿ. | ಉಳಿದ ಕಡೆಯಲ್ಲಿ ಪುಲ್ಲಿಂಗದಂತೆ. | |
| | द्वि | द्वे | " | " | " |
| | त्रि | त्रीणि | " | " | " |
| | चतुर् | चत्वारि | " | " | " |

ಉಳಿದ ಸಂಖ್ಯಾವಾಚಕಗಳೆಲ್ಲ ಪುಲ್ಲಿಂಗದಂತೆ ನಡಿಯುತ್ತವೆ.

೭. एक, द्वि, त्रि, चतुर्, षष् ಎಂಬ ಸಂಖ್ಯಾವಾಚಕಗಳಿಗೆ ಸರಿಯಾದ ಕ್ರಮಸಂಖ್ಯಾವಾಚಕಗಳು ಯಾವವಂದರೆ: प्रथम, द्वितीय, तृतीय, चतुर्थ, षष्ठ. प्रथम ಶಬ್ದಕ್ಕೆ ಬದಲಾಗಿ अग्रिम, आदिम ಶಬ್ದಗಳನ್ನೂ, चतुर्थಕ್ಕೆ ಬದಲಾಗಿ तुर्य, तुरीय ಶಬ್ದಗಳನ್ನೂ ಪ್ರಯೋಗಿಸುವದುಂಟು. दशन् ವರೆಗೆ ಉಳಿದ ಸಂಖ್ಯಾವಾಚಕಗಳ ಅಂತ್ಯ नಕಾರ ಲುಪ್ತ ಮಾಡಿ ಅದರ ಬದಲಾಗಿ मವನ್ನು ಸೇರಿಸಲು ಕ್ರಮಸಂಖ್ಯಾವಾಚಕಗಳು ಆಗುತ್ತವೆ. ಉದಾ: पञ्चम, दशम ಇ. एकादशन्‌ದಿಂದ नवदशन्‌ದ ವರೆಗೆ ಬರೇ न् ಲೋಪ ಮಾಡಲು ಕ್ರಮಸಂಖ್ಯಾವಾಚಕಗಳಾಗುತ್ತವೆ. ಉದಾ: एकादशः, द्वादशः ಇತ್ಯಾದಿ.

೮. विंशति ಮತ್ತು ಅದರ ಮುಂದಿನ ಸಂಖ್ಯಾವಾಚಕಗಳಿಗೆ तम ಪ್ರತ್ಯಯವನ್ನು ಸೇರಿಸಲು ಕ್ರಮಸಂಖ್ಯಾವಾಚಕಗಳಾಗುತ್ತವೆ. ಉದಾ: विंशतितमः, एकविंशतितमः, त्रिंशत्तमः ಇ. विंशति ಶಬ್ದದ ಕೊನೆಯ तिಗೂ ಉಳಿದ ವ್ಯಂಜನಾಂತ ಸಂಖ್ಯಾವಾಚಕ ಶಬ್ದಗಳ ಕಡೆಯ ವ್ಯಂಜನಕ್ಕೂ ಲೋಪ ಬಂದು ಕ್ರಮಸಂಖ್ಯಾವಾಚಕಗಳಾಗುವದೊಂದು ರೀತಿಯುಂಟು. ಉದಾ: विंशः, एकविंशः, त्रिंशः, एकत्रिंशः ಇತ್ಯಾದಿ. ಸ್ವರಾಂತ ಸಾಮಾಸಿಕ ಸಂಖ್ಯಾವಾಚಕನಾಮಗಳ ಕಡೆಯ ಸ್ವರಕ್ಕೆ अ ಆದೇಶವಾಗಿ ಕ್ರಮಸಂಖ್ಯಾವಾಚಕಗಳಾಗುತ್ತವೆ. ಉದಾ: एकषष्टः ಅಥವಾ एकषष्टितमः; ಆದರೆ षष्टि ಇದರ ಕ್ರಮವಾಚಕವು षष्टितमः. षष्टः ಆಗದು; शत ಇದರಿಂದ ಕ್ರಮಸಂಖ್ಯಾವಾಚಕನಾಮವು शततम ಆಗುವದು.

೯. प्रथम, अग्रिम, आदिम, द्वितीय, तृतीय, तुर्य, तुरीय ಶಬ್ದಗಳಿಗೆ आ ಪ್ರತ್ಯಯ ಹಚ್ಚಲು ಸ್ತ್ರೀಲಿಂಗರೂಪಗಳಾಗುತ್ತವೆ. ಉಳಿದ ಕ್ರಮಸಂಖ್ಯಾವಾಚಕಗಳ ಅಂತ್ಯ अಕಾರವನ್ನು ಲುಪ್ತ ಮಾಡಿ ईಕಾರವನ್ನು ಸೇರಿಸಲು ಸ್ತ್ರೀಲಿಂಗರೂಪಗಳಾಗುತ್ತವೆ. ಉದಾ: चतुर्थी, पञ्चमी, एकविंशी, एकविंशतितमी ಇತ್ಯಾದಿ.

೧೦. प्रथम ಶಬ್ದದ ಪ್ರಥಮಾ ಬಹುವಚನ प्रथमे ಅಥವಾ प्रथमाः ಆಗುತ್ತದೆ. द्वितीय, तृतीय ಶಬ್ದಗಳ ಚ. ಪ. ಷಷ್ಠೀ ಸಪ್ತಮಿಾ ಏಕವಚನಗಳ ರೂಪಗಳು ವಿಕಲ್ಪದಿಂದ अकारांत ಸರ್ವನಾಮಗಳಂತೆಯೂ, द्वितीया तृतीया ಶಬ್ದಗಳ ಚತುರ್ಥೀ ಪಂಚಮಿಾ ಷಷ್ಠೀ ಸಪ್ತಮಿಾ ಏಕವಚನಗಳ ರೂಪಗಳು ವಿಕಲ್ಪದಿಂದ आकारांत ಸರ್ವನಾಮಗಳಂತೆಯೂ ಆಗುತ್ತವೆ. ಉದಾ: द्वितीयस्मै ಅಥವಾ द्वितीयाय; द्वितीयायै ಅಥವಾ द्वितीयस्यै ಇತ್ಯಾದಿ.

೧೧. द्वि, त्रि, चतुर् ಎಂಬ ಶಬ್ದಗಳಿಗೆ स् ಪ್ರತ್ಯಯವನ್ನೂ, ಮತ್ತು ಮುಂದಿನ ಸಂಖ್ಯಾವಾಚಕಗಳಿಗೆ कृत्वस् ಪ್ರತ್ಯಯವನ್ನೂ ಹಚ್ಚಲಾಗಿ "ಸಾರೆ", "ಸರ್ತಿ" ಎಂಬ ಅರ್ಥವನ್ನು ಹೇಳುವ ಕ್ರಿಯಾವಿಶೇಷಣಗಳಾಗುತ್ತವೆ. ಆದರೆ कृत्वस् ಪ್ರತ್ಯಯದ ಹಿಂದಿನ ಪದಾಂತ್ಯ र्‌ಕ್ಕೆ ಲೋಪ ಬರುವದು. ಉದಾ: द्विः, त्रिः, चतुः, पञ्चकृत्वः, शतकृत्वः, नवकृत्वः, सकृत् ಶಬ್ದವು ಒಮ್ಮೆ ಈ ಅರ್ಥವನ್ನು ಹೇಳುವ ಕ್ರಿಯಾವಿಶೇಷಣವು.

೧೨. 'ಎಷ್ಟು,' 'ಅಷ್ಟು' ಅರ್ಥವನ್ನು ಹೇಳುವದಕ್ಕೆ यत्, तद्, एतत् ಶಬ್ದಗಳಿಗೆ वत् ಪ್ರತ್ಯಯವನ್ನೂ इदम्, किम् ಶಬ್ದಗಳಿಗೆ यत् ಪ್ರತ್ಯಯವನ್ನೂ ಹಚ್ಚುವದುಂಟು. ಈ ಪ್ರತ್ಯಯಗಳ ಪೂರ್ವದಲ್ಲಿ ಈ ಶಬ್ದಗಳು ಕ್ರಮವಾಗಿ या, ता, एता, इ, कि ರೂಪಗಳನ್ನು ಧರಿಸುತ್ತವೆ. ಉದಾ: यावत्, तावत्, इयत्, कियत् ಇತ್ಯಾದಿ. ಇವುಗಳ ಪ್ರಥಮೈಕವಚನಗಳು यावान्, तावान् ಆಗುತ್ತವೆ.

पञ्चाशते ब्राह्मणेभ्यः प्रत्यहं कृष्णवर्मान्नं ददाति ।
गुरोः परिचर्यां कुर्वतस्तस्य द्विचत्वारिंशदहानि व्यतीयुः ।
चतस्रो विद्याश्चतुष्षष्टिं कलाश्च चन्द्रापीडोऽशिक्षत ।
चत्वारि शृङ्गा[1] त्रयोऽस्य पादा द्वे शीर्षे सप्त हस्तासो[2]ऽस्य[3] ।
श्रावणस्य कृष्णपक्षेऽष्टम्यां तिथौ देवकी कृष्णं सुषुवे ।
त्रिः सप्तकृत्वः परशुरामः पृथिवीमक्षत्रियामकरोत् ।
सप्तदश सामिधेनीरनुब्रूयात् ।

---

[1] शृङ्ग (ನ.) ಶಬ್ದದ ಪ್ರಥಮಾ ಬಹುವಚನ (ವೈದಿಕಪ್ರಯೋಗ).

[2] हस्त (ಪುಲ್ಲಿಂಗ) ಶಬ್ದದ ಪ್ರಥಮಾ ಬಹುವಚನ (ವೈದಿಕಪ್ರಯೋಗ).

[3] ಪವಿತ್ರವಾದ ಅಗ್ನಿಯನ್ನು ಹೊತ್ತಿಸುವಾಗ ಇದನ್ನು ಉಚ್ಚರಿಸುವ ರೂಢಿಯುಂಟು. ಇದರಲ್ಲಿ ಅಗ್ನಿಯ ಕಲ್ಪಿತಾಕಾರದ ವರ್ಣನೆಯುಂಟು.

ता एताः सप्तर्चोऽ[1]न्वाह । तासां त्रिः प्रथमामन्वाह त्रिरुत्तमां ता एकादश संपद्यन्ते ।

त्रयस्त्रिंशद्वै देवा अष्टौ वसव एकादश रुद्रा द्वादशादित्याः प्रजापतिश्च वषट्कारश्च ।

[2]शतमनूच्यमायुष्कामस्य[3] । शतायुर्वै पुरुष आयुष्येवैनं[4] तद्-[5]धाति[6] । त्रीणि च शतानि च षष्टिश्चानूच्यानि यज्ञकामस्य । त्रीणि च वै शतानि षष्टिश्च संवत्सरस्याहानि । तावान्संवत्सरः संवत्सरः प्रजापतिः प्रजापतिर्यज्ञः । उपैनं यज्ञो नमति यस्यैवं विद्वांस्त्रीणि च शतानि च षष्टिं चान्वाह । सप्त च शतानि विंशतिश्चानूच्यानि प्रजापशुकामस्य । सप्त च वै शतानि विंशतिश्च संवत्सरस्याहोरात्राः ।

संविभाजयति श्रीमान् स वित्तेन द्विजोत्तमान् ।
धर्मषष्ठांशभागेन तेऽपि संविभजन्ति तम् ॥
गर्भाष्टमेऽब्दे कुर्वीत ब्राह्मणस्योपनायनम् ।
गर्भादेकादशे राज्ञो गर्भात्तु द्वादशे विशः ॥
त्रिराचामेदपः पूर्वं द्विः प्रमृज्यात्ततो मुखम् ।
खानि चैव स्पृशेदद्भिरात्मानं शिर एव च ॥
जीवन्तोऽपि मृताः पञ्च व्यासेन परिकीर्तिताः
दरिद्रो व्याधितो मूर्खः प्रवासी नित्यसेवकः ॥
अनारम्भो हि कार्याणां प्रथमं बुद्धिलक्षणम् ।
प्रारब्धस्यान्तगमनं द्वितीयं बुद्धिलक्षणम् ॥

---

1) ಇದರ ಕರ್ತೃ होता ಅಧ್ಯಾಹೃತವಾಗಿರುವದು. ಒಂದು ವಿಧಿಯಲ್ಲಿ होता ಇವನು ಅನ್ನತಕ್ಕ ಪದ್ಯಗಳ ವಿಷಯವಾಗಿ ಇದು ಬರೆದಿದೆ.

2) अग्निष्टोम ಯಜ್ಞದ प्रातरनुवाक ಎಂಬದೊಂದು ವಿಧಿಯುಂಟು; ಅದರಲ್ಲಿ ಋತ್ವಿಜರು ಪದ್ಯಗಳನ್ನು ಅನ್ನುತ್ತಾರೆ. ಅವೆಷ್ಟು ಅನ್ನಬೇಕು? ಯಾಕೆ ಅನ್ನಬೇಕು? ಎಂಬದನ್ನು ಈ ವಾಕ್ಯದಲ್ಲಿ ಹೇಳಿರುತ್ತದೆ.

3) आयुष्कामस्य ಇದರ ಸಂಬಂಧವು यजमान ಎಂಬ ಅಧ್ಯಾಹೃತಪದಕ್ಕೆ.

4) एनं ಅಂದರೆ यजमानं.

5) तद् ಇಲ್ಲಿ तस्मात् ಎಂಬ ಅರ್ಥವನ್ನು ಹೇಳುತ್ತದೆ.

6) ಇದರ ಕರ್ತೃ होता ಅಧ್ಯಾಹೃತವಾಗಿರುವದು.

नष्टे मृते प्रव्रजिते क्लीबे च पतिते पतौ[1] ।
पञ्चस्वापत्सु नारीणां पतिरन्यो विधीयते ॥
तिस्रः कोट्योऽर्धकोटी च यानि लोमानि मानवे ।
तावत्कालं वसेत्स्वर्गे भर्तारं यानुगच्छति ॥

ಆ ತಿಂಗಳ ೭೩ನೇ ದಿವಸ ಪಂಡಿತರ ಸಭೆಯು ನೆರೆದಿತ್ತು.

ಆಗ ತೊಂಬತ್ತರೊಂಬತ್ತು ಜನರನ್ನು ಪರೀಕ್ಷಿಸಲಾಗಿ ಅವರಲ್ಲಿ ಐವತ್ತು ನಾಲ್ಕು ಮಂದಿ ವ್ಯಾಕರಣಶಾಸ್ತ್ರ ಬಲ್ಲವರು ಹೊರಟರು.

ಹದಿನೆಂಟು ಪುರಾಣಗಳೂ ಇಪ್ಪತ್ತುನಾಲ್ಕು ಸ್ಮೃತಿಗಳೂ ಉಂಟೆಂದು ವಿದ್ವಾಂಸರು ಹೇಳುತ್ತಾರೆ.

ಮೊದಲು ಋಕ್, ಯಜುಃ, ಸಾಮ ಎಂಬ ಮೂರು ವೇದಗಳಿದ್ದವು; ಮುಂದೆ ನಾಲ್ಕನೇದೊಂದು ಉಂಟಾಯಿತು.

ಯಜುರ್ವೇದದಲ್ಲಿ ಈಗ ಎರಡು ಮುಖ್ಯ ಶಾಖೆಗಳುಂಟು.

ಮನುಸ್ಮೃತಿಯಲ್ಲಿ ಹನ್ನೆರಡು ಅಧ್ಯಾಯಗಳುಂಟು, ಏಳನೇದರಲ್ಲಿ ರಾಜಧರ್ಮಗಳು ಹೇಳಲ್ಪಟ್ಟವೆ.

ಆಶ್ವಿನ ಶುದ್ಧ ದಶಮಿಯಲ್ಲಿ ದಕ್ಷಿಣದ ಜನರು ಬನ್ನಿಯ ಎಲೆಗೆ ಚಿನ್ನವೆಂದು ಹೆಸರಿಟ್ಟು, ಅದನ್ನು ತಮ್ಮ ತಮ್ಮೊಳಗೆ ಹಂಚುತ್ತಾರೆ.

ಐದು ಜನ ಪಾಂಡವರು ತಮ್ಮ ಹಗೆಗಳನ್ನೆಲ್ಲ ಕೊಂದರು.

ರಾಮನು ರಾವಣನ ಹತ್ತು ತಲೆಗಳನ್ನು ಕಡಿದನು.

ಅವನು ನಾಲ್ಕು ವಿದ್ಯೆಗಳಲ್ಲಿಯೂ ಆರು ಶಾಸ್ತ್ರಗಳಲ್ಲಿಯೂ ಅರವತ್ತು ನಾಲ್ಕು ಕಲೆಗಳಲ್ಲಿಯೂ ಪ್ರವೀಣನಾದನು.

ಅವನಿಗೆ ಹೋಗೆಂದು ನಾನು ಮೂರು ಸಾರಿ ಹೇಳಿದೆನು, ಆದರೂ ಅವನು ಹೋಗಲಿಲ್ಲಾದ ಕಾರಣ ಅವನನ್ನು ಒದ್ದೆನು.

ಎಂಟು ದಿಕ್ಕುಗಳಿಗೆ ಎಂಟು ದೇವತೆಗಳುಂಟೆಂದು ಹಿಂದೂ ಜನರು ನಂಬುತ್ತಾರೆ.

ಮಹಾಭಾರತದ ಹದಿನೆಂಟು ಪರ್ವಗಳಲ್ಲಿ ಮೂರನೇದು ಮೇಲಾದದ್ದು, ಯಾಕಂದರೆ ಅದರಲ್ಲಿ ಹಲವು ಸೊಗಸಾದ ಕಥೆಗಳುಂಟು.

---

[1] ಈ ರೂಪವು ಪಾಣಿನಿಯ ನಿಯಮಕ್ಕೆ ಸರಿಯಾಗಿಲ್ಲ (೧೬ನೇ ಪಾಠ, ೩ನೇ ನಿಯಮ ನೋಡು).

ವೈದ್ಯನು ಈ ಔಷಧವನ್ನು[1] ನಾಲ್ವತ್ತೆರಡು ದಿವಸ ತೆಗೆದುಕೋ ಎಂದು ನನಗೆ ಹೇಳಿರುತ್ತಾನೆ.

ನಾನು ರಘುವಂಶದ ಹದಿನೇಳು ಸರ್ಗಗಳನ್ನೂ, ಕುಮಾರಸಂಭವದ ಏಳು ಸರ್ಗಗಳನ್ನೂ, ಒಂಬತ್ತು ನಾಟಕಗಳನ್ನೂ ಪತಂಜಲಿಯ ಮಹಾಭಾಷ್ಯದ ಎಂಬತ್ತಾರು ಪುಟಗಳನ್ನೂ ಕಲಿತಿರುತ್ತೇನೆ.

---

## ಕೋಶ ೧೭.

अक्षत्रिय (ವಿ.) ಕ್ಷತ್ರಿಯರು ರಹಿತವಾದ.

अनारम्भ (ಪು.) ಆರಂಭ ಮಾಡದೆ ಇರೋಣ.

अनूच्य (अनु+वच् ಧಾತುವಿನ ಭೂ. ಕೃ.) ಅನ್ವಿತಕ್ಕ.

अन्तगमन (ನ.) ಕೊನೆಗಾಣಿಸುವದು.

अन्वाह (अनु+आह) ಅನ್ನುತ್ತಾನೆ, ಪಠಿಸುತ್ತಾನೆ.

अब्द (ಪು.) ವರ್ಷ.

अर्धकोटी (ಸ್ತ್ರೀ.) [अर्ध (ನ.), कोटी (ಸ್ತ್ರೀ.) ೧೦೦ ಲಕ್ಷ] ೫೦ ಲಕ್ಷ.

अहोरात्र (ಪು.) ಹಗಲಿರುಳು, ಹಗಲುರಾತ್ರಿ.

आयुष्काम (ಪು.) ಬಹು ದಿವಸ ಬಾಳಲಿಕ್ಕೆ ಇಚ್ಛಿಸುವವ.

इ (व्यति ಪೂರ್ವಕ) ಕಳೆದು ಹೋಗು, ಹೋಗು, ದಾಟು.

उत्तम (ವಿ.) ಕಡೆಯು, ಶ್ರೇಷ್ಠ.

उपनयन, उपनायन (ನ.) ವ್ರತಬಂಧ, ಮುಂಜಿಯ ಸಂಸ್ಕಾರ.

कला (ಸ್ತ್ರೀ.) ಕಲೆ.

कार्य (ನ.) ಕೆಲಸ, ಉದ್ಯೋಗ.

कीर्तित (परि ಪೂರ್ವಕ, कृत् ೧೦ನೇ ಗ. ಹೇಳು) ಹೇಳಿದ.

कृष्ण (ಪು.) ವಿಷ್ಣುವಿನ ೮ನೇ ಅವತಾರ.

कृष्णपक्ष (ಪು.) ವದ್ಯಪಕ್ಷ; ಮುಂಗಾಳಿನ ದಿವಸಗಳು, ವದ್ಯ ೧ರಿಂದ ಅಮಾವಾಸ್ಯೆಯ ವರೆಗೆ.

कृष्णवर्मन् (ಪು.) ಒಬ್ಬ ಮನುಷ್ಯನ ಹೆಸರು.

क्लीब (ಪು. ನ.) ನಪುಂಸಕ, ಬಲಹೀನ.

ख (ನ.) ದೇಹದ್ವಾರಗಳು, ಬಾಯಿ ಮೂಗು ಕಿವಿ ಇತ್ಯಾದಿ.

गर्भाष्टम (ವಿ.) ಗರ್ಭೋತ್ಪತ್ತಿಯಿಂದ ಎಂಟನೇದು.

चन्द्रापीड (ಪು.) ಒಬ್ಬ ರಾಜಪುತ್ರನ ಹೆಸರು.

चम् (೧ನೇ ಗ. ಪ. आ ಪೂರ್ವಕ) ಆಚಮನ ಮಾಡು.

तावत्कालम् (ಅ.) ಅಲ್ಲಿ ತನಕ, ಅಷ್ಟು ಕಾಲದ ವರೆಗೆ, ಆ ವರೆಗೆ.

देवकी (ಸ್ತ್ರೀ.) ಕೃಷ್ಣನ ತಾಯಿ.

द्विजोत्तम (ಪು.) ಬ್ರಾಹ್ಮಣರಲ್ಲಿ ಉತ್ತಮನಾದವನು.

धर्मषष्ठांशभाग (ಪು.) ಧರ್ಮದ ಆರನೇ ಅಂಶದ ಪಾಲು.

पतित (ವಿ.) ಪಾಪಿ, ಭ್ರಷ್ಟ.

पद् (೪ನೇ ಗ. ಆ. सम् ಪೂರ್ವಕ) ಆಗು, ಸಂಭವಿಸು.

परिचर्या (ಸ್ತ್ರೀ.) ಸೇವೆ.

---

[1] ಕಾಲವಾಚಕನಾಮುಗಳಿಗೆ ದ್ವಿತೀಯಾವಿಭಕ್ತಿ ಬರುವದು.

ಪ್ರಜಾಪತಿ (ಪು.) ಬ್ರಹ್ಮದೇವರು.

ಪ್ರಜಾಪಶುಕಾಮ [ಪ್ರಜಾ (ಸ್ತ್ರೀ.) ಸಂತತಿ, ಪಶು (ಪು.) ದನ] ಮಕ್ಕಳು ದನಗಳನ್ನು ಇಚ್ಛಿಸುವವ.

ಪ್ರವಾಸಿನ್ (ಪು.) ಹಾದಿಕಾರ, ಮಾರ್ಗಸ್ಥ.

ಪ್ರವ್ರಜಿತ (ವಿ.) ಊರಿಂದ ಹೊರಗೆ ಹಾಕಲ್ಪಟ್ಟ, ಬೈರಾಗಿ.

ಬುದ್ಧಿಲಕ್ಷಣ (ನ.) [ಬುದ್ಧಿ (ಸ್ತ್ರೀ.) ಜಾಣತನ, ಲಕ್ಷಣ (ನ.) ಕುರುಹು] ಜಾಣತನದ ಕುರುಹು.

ಭಜ್ (ಸಮ್ + ವಿ ಪೂರ್ವಕ, ೧ನೇ ಗ.) ಪಾಲು ಕೊಡು, ಹಂಚು, ಕೊಡು.

ಭಾಜ್ (ಸಮ್ + ವಿ ಪೂರ್ವಕ, ೧೦ನೇ ಗ.) ಪಾಲುಕೊಡು, ಹಂಚು, ಕೊಡು.

ಮೃಜ್ (ಪ್ರ ಪೂರ್ವಕ) ತೊಳೆ, ಸಾಫ ಮಾಡು.

ಲೋಮನ್ (ನ.) ಕೂದಲು.

ವಷಟ್ಕಾರ (ಪು.) ಅಗ್ನಿಯಲ್ಲಿ ಆಹುತಿಕೊಡುವಾಗ್ಗೆ ಅನ್ನುವ ವೌಷಟ್ ಎಂಬ ಶಬ್ದವು. ಇದೊಂದು ದೇವತೆ ಎಂದು ಜನರ ನಂಬಿಗೆಯುಂಟು.

ವಿದ್ಯಾ (ಸ್ತ್ರೀ.) ವಿದ್ಯೆ.

ವಿದ್ವಸ್ (ವಿ.) ತಿಳುವಳಿಕೆಯುಳ್ಳ, ಬಲ್ಲ.

ವೈಶ್ಯ (ಪು.) ವೈಶ್ಯಜಾತಿ.

ವ್ಯಾಧಿತ (ವಿ.) ಬೇನೆಯುಳ್ಳ.

ವ್ಯಾಸ (ಪು.) ಒಬ್ಬ ಋಷಿಯ ಹೆಸರು, ಮಹಾಭಾರತದ ಕರ್ತನು.

ಶತಾಯುಸ್ (ವಿ.) ನೂರು ವರ್ಷ ಆಯುಷ್ಯವುಳ್ಳ.

ಶೃಙ್ಗ (ನ.) ಕೋಡು.

ಶ್ರಾವಣ (ಪು.) ಹಿಂದೂವರ್ಷದ ಆರನೇ ತಿಂಗಳು.

ಸಂವತ್ಸರ (ಪು.) ವರ್ಷ.

ಸಾಮಿಧೇನೀ (ಸ್ತ್ರೀ.) ಹೋಮಾಗ್ನಿಯನ್ನು ಹೊತ್ತಿಸುವಾಗ ಅನ್ನತಕ್ಕ ಋಕ್ಕು.

---

ಆಶ್ವಿನ ಆಶ್ವಿನ (ಪು.).

ಶುದ್ಧ ೧ರಿಂದ ಹುಣ್ಣಿಮೆ ವರೆಗೆ ೧೫ದಿನ ಶುಕ್ಲ-ಪಕ್ಷ (ಪು.).

ಹೆಸರು ಅಭಿಧಾನ (ವಿ.).

ಕರೆಯುವ ಅಭಿದಧಾನ (ವಿ.).

ಸರ್ಗ ಸರ್ಗ (ಪು.).

ಸಭೆ ಸಮಾಜ (ಪು.), ಪರಿಷದ್ (ಸ್ತ್ರೀ.), ಸಭಾ (ಸ್ತ್ರೀ.).

ಔಷಧ ಕೊಡುವವ ವೈದ್ಯ (ಪು.), ಭಿಷಜ್ (ಪು.).

ನಾಟಕ ನಾಟಕ (ನ.).

ಮಾಡತಕ್ಕ ಕೆಲಸ ಧರ್ಮ (ಪು.).

ಎಣಿಸಿದ, ಹೇಳಿದ ಪರಿಕೀರ್ತಿತ (ವಿ.), ಪರಿ-ಗಣಿತ (ವಿ.).

ಸಿಕ್ಕ, ದೊರಕಿದ ಲಬ್ಧ (ವಿ.), ಸಮಧಿಗತ (ವಿ.).

ಒಳ್ಳೇ ಸಮೀಚೀನ (ವಿ.), ನಿಪುಣ (ವಿ.).

ಆಕಾಶದ ಒಂದು ಭಾಗವನ್ನು ಕಾಯುವವ ದಿಕ್ಪಾಲ (ಪು.).

ನೆರೆದ ಮಿಲಿತ (ವಿ.).

ಒದೆ ಲತ್ತಯಾ ಪ್ರಹೃ (೧ನೇ ಗ. ಪ.), ಲತ್ತಾ (ಸ್ತ್ರೀ.).

ಮೊದಲು ಆದೌ (ಆದಿ ಶಬ್ದದ ಸಪ್ತಮಿ), ಅಗ್ರೇ (ಅಗ್ರ ಶಬ್ದದ ಸಪ್ತಮಿ).

ಪರ್ವ ಪರ್ವನ್

ಬನ್ನಿ ಶಮೀ (ಸ್ತ್ರೀ.)

## ೧೮ನೇ ಪಾಠ.

### ವಿಶೇಷಣಗಳ ಆಧಿಕ್ಯಾತಿಶಯಾರ್ಥಕ ರೂಪಗಳು.

೧. ಗುಣದ ಆಧಿಕ್ಯವನ್ನು ತೋರಿಸುವದಕ್ಕೆ ಮೂಲವಿಶೇಷಣಕ್ಕೆ ईयस् ಎಂಬ ಪ್ರತ್ಯಯವೂ, ಅತಿಶಯಾರ್ಥವನ್ನು ತೋರಿಸುವದಕ್ಕೆ इष्ठ ಎಂಬ ಪ್ರತ್ಯಯವೂ ಹಚ್ಚಲ್ಪಡುತ್ತವೆ. ಈ ಪ್ರತ್ಯಯಗಳು ಹತ್ತಲಾಗಿ ಸ್ವರಾಂತ ಶಬ್ದಗಳ ಕಡೆಯ ಸ್ವರಕ್ಕೂ, ವ್ಯಂಜನಾಂತ ಶಬ್ದಗಳ ಕಡೆಯ ವ್ಯಂಜನಕ್ಕೂ ಅದರ ಹಿಂದಿನ ಸ್ವರಕ್ಕೂ ಲೋಪ ಬರುವದು. ಉದಾ: लघु ಮೂಲರೂಪ, लघीयस् ಆಧಿಕ್ಯಾರ್ಥರೂಪ, लघिष्ठ ಅತಿಶಯಾರ್ಥರೂಪ, महत् ಮೂ. ರೂ., महीयस् ಆ. ರೂ., महिष्ठ ಅ. ರೂ.

ಈ ಪ್ರತ್ಯಯಗಳು ಗುಣವಾಚಕವಿಶೇಷಣಗಳ ಮೇಲೆ ಬರುತ್ತವೆ; ಮುಂದೆ ಹೇಳುವ तर, तम ಪ್ರತ್ಯಯಗಳಂತೆ ಕೃದಂತಗಳ ಮೇಲೆಯೂ ಬೇರೆ ಧಾತುಸಾಧಿತಗಳ ಮೇಲೆಯೂ ಇವು ಬರುವದಿಲ್ಲ.

೨. पृथु, मृदु, भृश, कृश, दृढ, परिवृढ ಶಬ್ದಗಳ ಉಪಾಂತ್ಯ ಋಕಾರಕ್ಕೆ र ಆದೇಶವಾಗುವದು. ಉದಾ: पृथु ಮೂ. ರೂ., प्रथीयस् ಆ. ರೂ., प्रथिष्ठ ಅ. ರೂ., दृढ ಮೂ. ರೂ., द्रढीयस् ಆ. ರೂ., द्रढिष्ठ ಅ. ರೂ., ಇತ್ಯಾದಿ.

೩. स्थूल, दूर, ह्रस्व, क्षिप्र, क्षुद्र ಶಬ್ದಗಳ ಅಂತ್ಯಸ್ವರಕ್ಕೂ ಉಪಾಂತ್ಯವ್ಯಂಜನಕ್ಕೂ ಲೋಪ ಬರುವದು; ಮತ್ತು ಉಳಿದ ಸ್ವರಕ್ಕೆ ಗುಣವಾಗುವದು. ಉದಾ: ह्रस्व-ह्रसीयस्, ह्रसिष्ठ; क्षिप्र-क्षेपीयस्, क्षेपिष्ठ; क्षुद्र-क्षोदीयस्, क्षोदिष्ठ; स्थूल-स्थवीयस्, स्थविष्ठ.

युवन् ಶಬ್ದದ वन् ಎಂಬ ಭಾಗಕ್ಕೆ ಲೋಪ ಬರುವದು, ಮತ್ತು ಉಳಿದ ಸ್ವರಕ್ಕೆ ಗುಣವಾಗುವದು. युवन्-यवीयस्, यविष्ठ.

೪. ಉಳ್ಳ (ನಾಮದಿಂದ ಹೇಳಲ್ಪಡುವ ಒಡವೆಯು ನನ್ನಲ್ಲಿ ಉಂಟು) ಎಂಬ ಅರ್ಥವನ್ನು ಹುಟ್ಟಿಸುವ ಪ್ರತ್ಯಯಗಳಿಗೆ ಲೋಪ ಬರುತ್ತದೆ. ಉದಾ: बलवत्-बलीयस्, बलिष्ठ.

೫. ಕೆಲವು ಆಧಿಕ್ಯಾತಿಶಯಾರ್ಥಕರೂಪಗಳು ಅನಿಯಮಿತವಾಗಿ ಆಗುತ್ತವೆ. ಅವು ಯಾವವಂದರೆ:—

| ಮೂ. ರೂ. | | ಆ. ರೂ. | ಅ. ರೂ. |
|---|---|---|---|
| प्रशस्य | (ಹೊಗಳತಕ್ಕ) | श्रेयस् | श्रेष्ठ |
| वृद्ध | (ವಯಸ್ಸಾದ) | ज्यायस्<br>वर्षीयस् | ज्येष्ठ<br>वर्षिष्ठ |

| ಮೂ. ರೂ. | | ಅ. ರೂ. | ಅ. ರೂ. |
|---|---|---|---|
| अन्तिक | (ಹತ್ತರದ. ಸಮೀಪದ) | नेदीयस् | नेदिष्ठ |
| बाढ | (ದೃಢ, ಗಟ್ಟಿ, ಒಳ್ಳೇ) | साधीयस् | साधिष्ठ |
| प्रिय | (ಅಕ್ಕರದ) | प्रेयस् | प्रेष्ठ |
| स्थिर | (ಗಟ್ಟಿಯಾದ) | स्थेयस् | स्थेष्ठ |
| स्फिर | (ದಪ್ಪ, ಬಹಳ ದಪ್ಪ) | स्फेयस् | स्फेष्ठ |
| गुरु | (ಜಡ, ದೊಡ್ಡ) | गरीयस् | गरिष्ठ |
| उरु | (ಅಗಲವಾದ) | वरीयस् | वरिष्ठ |
| बहुल | (ಬಹಳ) | बंहीयस् | बंहिष्ठ |
| दीर्घ | (ಉದ್ದ) | द्राघीयस् | द्राघिष्ठ |
| बहु | (ಬಹಳ) | भूयस् | भूयिष्ठ |
| युवन् | (ಎಳೇ, ಹರೆಯ) | { यवीयस् / कनीयस् | { यविष्ठ / कनिष्ठ |
| अल्प | (ತುಸು) | { कनीयस् / अल्पीयस् | { कनिष्ठ / अल्पिष्ठ |

೬. ಆಧಿಕ್ಯಾರ್ಥಕ सकारांत ಶಬ್ದಗಳನ್ನು ೧ನೇ ಪುಸ್ತಕ ೨೬ನೇ ಪಾಠದಲ್ಲಿ ಹೇಳಿದಂತೆ ನಡಿಸಬೇಕು. ಈ ಶಬ್ದಗಳಿಗೆ ई ಪ್ರತ್ಯಯವನ್ನೂ ಅತಿಶಯಾರ್ಥಕ ಶಬ್ದಗಳಿಗೆ आ ಪ್ರತ್ಯಯವನ್ನೂ ಹಚ್ಚಲು ಸ್ತ್ರೀಲಿಂಗರೂಪಗಳಾಗುತ್ತವೆ.

೭. ಹಿಂದೆ ಹೇಳಿದ ಪ್ರತ್ಯಯಗಳಲ್ಲದೆ ಆಧಿಕ್ಯಾರ್ಥದಲ್ಲಿ तर ಪ್ರತ್ಯಯವೂ, ಅತಿಶಯಾರ್ಥದಲ್ಲಿ तम ಪ್ರತ್ಯಯವೂ ಕೆಲವು ಕಡೆಯಲ್ಲಿ ಹತ್ತುವದುಂಟು. ಈ ಪ್ರತ್ಯಯಗಳು ವಿಶೇಷಣಗಳಿಗೆ ಹತ್ತುವವಲ್ಲದೆ ನಾಮಗಳಿಗೂ ಕ್ರಿಯಾವಿಶೇಷಣಗಳಿಗೂ ಕ್ರಿಯಾಪದಗಳಿಗೂ ಹತ್ತುತ್ತವೆ. ಕ್ರಿಯಾಪದಗಳಿಗೆ ಹತ್ತುವಾಗ ಇವುಗಳ ರೂಪಗಳು तराम्, तमाम् ಎಂದಾಗುತ್ತವೆ. ಕೆಲವು ಅವ್ಯಯಗಳಿಗೆ ಸಹ ಇವೇ[1] ರೂಪಗಳು ಹತ್ತುತ್ತವೆ. ಈ ಪ್ರತ್ಯಯಗಳು ಹತ್ತುವಾಗ ಶಬ್ದಗಳಿಗೆ ಏನೂ ವಿಕಾರವಾಗುವದಿಲ್ಲ. लघु-लघुतर-लघुतम; पाचक-पाचकतर-पाचकतम; पचतितराम्-पचतितमाम् (ಕ್ರಿ.); उच्चैस्तराम्-उच्चैस्तमाम् (ಅವ್ಯ.); उच्चैस्तरः-उच्चैस्तमः (ವಿ.).

೮. तर, तम ಪ್ರತ್ಯಯಾಂತವಾದ ವಿಶೇಷಣಗಳಿಗೆ आ ಪ್ರತ್ಯಯ ಹಚ್ಚಲು ಸ್ತ್ರೀಲಿಂಗರೂಪಗಳಾಗುತ್ತವೆ.

---

[1] तराम्, तमाम् ಪ್ರತ್ಯಯಗಳನ್ನು ಹೊಂದಿದ ಅವ್ಯಯಗಳು ಅವ್ಯಯಗಳಂತೆ ವ್ಯವಹರಿಸುವವು. तर, तम ಪ್ರತ್ಯಯಗಳನ್ನು ಹೊಂದಿದ ಅವ್ಯಯಗಳು ವಿಶೇಷಣಗಳಂತೆ ಪ್ರಯೋಗಿಸಲ್ಪಡುವವು.

೯. "ಉಳ್ಳ" ಎಂಬ ಅರ್ಥದಲ್ಲಿ ನಾಮಗಳಿಗೆ मत् ಪ್ರತ್ಯಯವು ಹತ್ತುತ್ತದೆ. ಉದಾ: धी बुद्धि — धीमत् ಬುದ್ಧಿಯುಳ್ಳ.

೧೦. अ, आ ಅಥವಾ म् ಇವುಗಳು ಅಂತದಲ್ಲಿ ಅಥವಾ ಉಪಾಂತದಲ್ಲಿ ಉಳ್ಳ ನಾಮಗಳಿಗೆ मत् ಪ್ರತ್ಯಯವು ಹತ್ತಲಾಗಿ ಇದರ मಕ್ಕೆ व ಆದೇಶವಾಗುವದು. ಉದಾ: धनवत्, विद्यावत्, यशस्वत्, भास्वत्, किंवत्, लक्ष्मीवत्.

यवमत्, भूमिमत् ಮುಂತಾದ ಕೆಲವು ಅಪವಾದಗಳುಂಟು.

೧೧. अಕಾರಾಂತ ನಾಮಗಳಿಗೆ ಇದೇ ಅರ್ಥದಲ್ಲಿ इन् ಎಂಬದೊಂದು ಪ್ರತ್ಯಯವಾದರೂ ಹತ್ತುವದು. ಈ ಪ್ರತ್ಯಯದ ಹಿಂದಿನ अಕಾರಕ್ಕೆ ಲೋಪ ಬರುವದು. ಉದಾ: दण्डिन् धनिन्. ಕೆಲವು[1] ನಾಮಗಳಿಗೆ ಇದೇ ಅರ್ಥದಲ್ಲಿ विन् ಎಂಬ ಪ್ರತ್ಯಯವಾದರೂ ಹತ್ತುವದು.

೧೨. "ಅಂಥ" ಎಂಬ ಅರ್ಥದಲ್ಲಿ ಸರ್ವನಾಮಗಳಿಗೆ दृश् (ನಾ.), दृश (ಪು. ನ.), दृशी (ಸ್ತ್ರೀ.) ಪ್ರತ್ಯಯಗಳು ಹತ್ತುತ್ತವೆ. ಈ ಪ್ರತ್ಯಯಗಳು ಹತ್ತಲಾಗಿ ಸರ್ವನಾಮದ ಅಂತ್ಯಾಕ್ಷರಕ್ಕೆ आಕಾರಾದೇಶವಾಗುವದು; ಉದಾ: एतत् + दृश = एत + आ + दृश = एतादृश: तादृश, त्वादृश, मादृश, युष्मादृश, अस्मादृश ಇತ್ಯಾದಿ. ಆದರೆ इदम्, किम्, अदस् ಇವುಗಳು ई, की, अमू ಎಂಬ ರೂಪಾಂತರಗಳನ್ನು ಹೊಂದುತ್ತವೆ. ईदृश् - कीदृश् - अमूदृश्.

೧೩. "ಅದರಂತೆ ವರ್ತಿಸುವ" ಎಂಬ ಅರ್ಥದಲ್ಲಿ ಕೆಲವು ನಾಮಗಳಿಗೂ ಅವ್ಯಯಗಳಿಗೂ कृ; भू ಧಾತುಗಳ ಮತ್ತು ಒಮ್ಮೊಮ್ಮೆ अस् (ಆಗು) ಧಾತುವಿನ ರೂಪಗಳು ಹತ್ತುತ್ತವೆ. ಈ ರೂಪಗಳ ಹಿಂದಿನ ಶಬ್ದಗಳಿಗೆ ಕೆಲವು ವಿಕಾರಗಳಾಗುತ್ತವೆ. ಅವು ಯಾವವೆಂದರೆ—

೧೪. (ಅ) ಅಂತ್ಯ अ, आಕಾರಗಳಿಗೆ ईಕಾರವಾಗುವದು; ಆದರೆ ಅವ್ಯಯಗಳ अ, आಕಾರಗಳಿಗೆ ಈ ಕಾರ್ಯವಾಗುವದಿಲ್ಲ.

(ಬ) ಅಂತ್ಯ इ, उಗಳು ದೀರ್ಘವಾಗುವವು.

(ಕ) ಅಂತ್ಯ ऋಕಾರಕ್ಕೆ री ಆಗುವದು.

(ಡ) ಅಂತ್ಯ नಕಾರಕ್ಕೂ मनस्, अरुस्, चक्षुस्, चेतस्, रजस्, रहस् ಶಬ್ದಗಳ ಅಂತ್ಯ सಕಾರಕ್ಕೂ ಲೋಪ ಬರುವದು; ತರುವಾಯ ಅ, ಬ, ಕದಲ್ಲಿ ಹೇಳಿದ ಕಾರ್ಯಗಳು ಆಗುವವು. ಉದಾ: धनीकरोति, धनीभवति, गङ्गीभवति, दिवाभूता, शुचीभूता, पटूभवनम्, मात्रीकरोति, भ्रात्रीकरोति, आत्मीभवनम्, चक्षू-करोति, रजीभवति.

---

[1] माया, मेधा, स्रज्, ಮತ್ತು अस्संत ನಾಮಗಳಿಗೆ ಈ ಪ್ರತ್ಯಯವು ಹತ್ತುವದು. मायाविन्, स्रग्विन्, यशस्विन् ಇತ್ಯಾದಿ.

ऋग्वेदात्सामवेदस्य महिमा भूयान् ।

यज्ञकर्मायोध्यां गच्छन्नध्वनोऽर्धाङ्गुयोऽतिक्रम्याश्राम्यत् ।

कृष्णस्य सुभद्रा यवीयसी स्वसा ।

सर्वेषु कुसुमेषु शिरीषकुसुमं म्रदिष्ठम् ।

निःश्रेयसाय कर्मपथाज्ज्ञानमार्गः साधीयान् । श्रेष्ठस्तु सर्वेषां भक्तिमार्गः ।

परमात्माणोरप्यणीयान्महतोऽपि महीयान्वर्तते ।

धार्तराष्ट्रेभ्यः पाण्डवाः कृष्णसाहाय्याद्बलीयांसः किं तु तेषां योधसमाजो गरीयान् ।

दुःखितस्य वृत्तान्तश्रवणेनार्द्रीभवन्ति हृदयान्यनुकम्पिनां महात्मनाम् ।

यो यज्ञकर्माणि यथाविधि करोति स प्रजावान्पशुमांस्तेजस्वी ब्रह्मवर्चस्वी यशस्वांश्च भवति ।

विष्णुशर्मण एकपञ्चाशत्पुत्रा आसन् । तेषां ये मध्यमाद्देवदत्ताज्ज्यायांसः पञ्चविंशतिस्ते कनीयोभिः पञ्चविंशत्या कलहं चक्रुः ।

सर्वासु नदीषु भागीरथी द्राघिष्ठा विस्तारे वरिष्ठा च । तस्याः सलिलं यमुनायाः शुचितरम् । पर्वतेषु हिमालयः प्रथिष्ठः ।

अहो दीप्तिमतोऽपि विश्वसनीयतास्य राज्ञो वपुषः ।

इदृशी मे मन्दभाग्यता यन्न केवलं भर्तुर्विरहो दारकयोरपि ।

हा सौम्य हनुमन्क पुनस्त्वादृशस्य साधोर्महोपकारिणः संभवोऽस्मिञ्जगति ।

नैतद्विद्मः कतरन्नो गरीयो यद्वा जयेम यदि वा नो जयेयुः ।

नेयं मे जटा किं तु वेणीकृतः कचानां कलाप इत्यब्रवीत्काचित्स्त्री ।

दासीभूतां सर्पाणां जनन्याः सेवां कुर्वतीं स्वमातरं बन्धनान्मुमोच गरुडः ।

तपश्चरन्रावणः स्वीयानि नव शिरांसि शिवायोपायनीचकारेति शृणुमः ।

प्रियतमस्य पुण्डरीकस्य मरणेन सशोकया महाश्वेतया तिरस्कृता विषया दूरीकृतो बान्धवजनोऽङ्गीकृतमरण्येऽवस्थानम् ।

एकः पुरुषः प्रियतमायाः प्रासादस्योपरितनीं भूमिं प्रवेष्टुमिच्छुर्वातायनादधोवलम्बमानमहिं रज्जूकृत्यारुरोह ।

उपरते भर्तरि यत्प्राणाः परित्यज्यन्ते तन्मौर्ख्यम् । उत्तरा विराटदुहिता बालिका विनयवति धीमति विक्रान्ते च पञ्चत्वमभिमन्यावुपगतेऽपि प्राणान्न जहौ । अन्या अपि सहस्रशः कन्यका अभर्तृमत्यो जाताः सत्यो जीवितानि न तत्यजुरिति श्रूयते ।

जीवनाय मनुजन्मनामिह भ्राम्यतामथ कदापि स प्रभुः ।
त्वादृशो भवति भाग्ययोगतो वेत्ति यः सदसतां यदन्तरम् ॥

ದಶರಥನ ಮೂವರು ಹೆಂಡರಲ್ಲಿ ಕೌಸಲ್ಯೆಯು ಎಲ್ಲಕ್ಕೂ ಹಿರಿಯಳು (वृद्ध). ಕೈಕೇಯಿಯು ಎಲ್ಲಕ್ಕೂ ಚಿಕ್ಕವಳು (युवन्).

ಸೀತೆಯ ಮೈಕಟ್ಟು ದ್ರೌಪದಿಯ ಮೈಕಟ್ಟಿಗಿಂತ ತೆಳ್ಳಗಿತ್ತು (तनु).

ಹೆಚ್ಚು ದೊಡ್ಡದು (बहु) ಹೆಚ್ಚು ಚಿಕ್ಕದ್ದಕ್ಕೆ (लघु) ಸರಿಯಾಗುವದೆಂಬದು ಅಬದ್ಧ.

ಎಲ್ಲ ಪಶುಗಳಲ್ಲಿ ಕುದುರೆಯು ಹೆಚ್ಚು ವೇಗವುಳ್ಳದ್ದು (आशु).

ಗುಣವುಳ್ಳವರೇ (सद्गुण, पुण्य) ಸುಖಿಗಳು, ಅವರಿಗೇ ಮಾನ ಯೋಗ್ಯ.

ಕೃಷ್ಣನಿಗೆ ಸತ್ಯಭಾಮೆಗಿಂತ ರುಕ್ಮಿಣಿಯು ಪ್ರಿಯಳಿದ್ದಳು (प्रिय).

ಕೆಡಗಾಲ ಬಂದಾಗ ಬಳಗದವರು ಸಹ ಹಗೆಗಳಾಗುತ್ತಾರೆ (विपक्ष).

ಹಣ (वसु), ಧೈರ್ಯ, ಕೀರ್ತಿ ಅಥವಾ ಭೂಮಿ ಉಳ್ಳವರಿಗೆ ಏನು ಹೆಸರುಗಳುಂಟು?

ಎಲ್ಲರೂ ಒಂದೇ ಮನಸ್ಸಿನವರಾಗಿ (एकचित्त) ಈ ಬಲೆಯನ್ನು ತಕ್ಕೊಂಡು ಹಾರಿಹೋಗತಕ್ಕದ್ದು.

ಇಂದ್ರನು ಬಹಳ ಪರಾಕ್ರಮವುಳ್ಳವನು (ओजस्विन्) ಆದದರಿಂದಲೂ ಅತಿ ಬಲವುಳ್ಳವನಾದದರಿಂದಲೂ ದೇವತೆಗಳು ಅವನಿಗೆ ಪಟ್ಟ ಕಟ್ಟಿದರು.

ಮೂಲ ವಾಕ್ಯದ ಅರ್ಥವು ಟೀಕೆಯಿಂದ ಒಮ್ಮೊಮ್ಮೆ ಸ್ಪಷ್ಟವಾಗುತ್ತದೆ (विशद). ಒಮ್ಮೊಮ್ಮೆ ಹೆಚ್ಚು ತೊಂದರೆಯುಳ್ಳದ್ದಾಗುತ್ತದೆ (गूढ).

ದಮಯಂತಿಯು ಆ ಕಾಲದ ಎಲ್ಲ ಸ್ತ್ರೀಯರಲ್ಲಿ ಬಹಳ ರೂಪವತಿಯೂ (सुन्दर, चारु), ಗಂಡನಲ್ಲಿ ಬಹಳ ಭಕ್ತಿಯುಳ್ಳವಳೂ (अनुरक्त, भक्त) ಆಗಿದ್ದಳು.

ಈ ಸಮಯದಲ್ಲಿ ನಿನ್ನ ಅಂತಃಕರಣವು ಪ್ರೀತಿಯಿಂದ ಕರಗಿಹೋಗಿದೆ (द्रव).

ರಥಗಳಿಗೆ ಹಚ್ಚಲ್ಪಡುವ ಎತ್ತುಗಳು ಸಾಧಾರಣ ಎತ್ತುಗಳಿಗಿಂತ ಹೆಚ್ಚು ಪುಷ್ಟವಾಗಿರುತ್ತವೆ (पीवर).

ಎಲೈ ಸೀತೆ, ನಿನ್ನಂಥ (त्वद्) ಉತ್ತಮ ಸ್ವಭಾವದವಳೂ ಸರಳವಾದವಳೂ ಪ್ರೇಮವುಳ್ಳವಳೂ (अनुराग, प्रणय), ಹೆಂಗಸರಲ್ಲಿ ಮತ್ತೆ ಯಾವಳೂ ಇಲ್ಲ. ನನ್ನಂಥ (मद्) ನಿರ್ದಯನೂ ಕಠೋರನೂ ಗಂಡಸರಲ್ಲಿ ಯಾವನೂ ಇಲ್ಲ.

---

## ಕೋಶ ೧೮.

अणु (ವಿ.) ಸಣ್ಣ, ಸ್ವಲ್ಪ, ಚಿಕ್ಕ.
अणु (ಪು.) ಕಣ.
अधस् (ಅ.) ಕೆಳಗೆ.
अध्वन् (ಪು.) ಮಾರ್ಗ, ದಾರಿ.
अनुकम्पिन् (ವಿ.) ಕನಿಕರವುಳ್ಳ.
अन्तर (ನ.) ಹೆಚ್ಚು ಕಡಿಮೆ, ವ್ಯತ್ಯಾಸ.
अभिमन्यु (ಪು.) ಅರ್ಜುನನ ಮಗನ ಹೆಸರು.
अरुस् (ಪು. ನ.) ಗಾಯ, ಹುಣ್ಣು, ವ್ರಣ.
अवलम्बमान (ವಿ.) ತೂಗಾಡುವ, ಜೋತಾಡುವ.
अवस्थान (ನ.) ವಾಸಸ್ಥಾನ, ಇರುವ ಸ್ಥಳ.
अहि (ಪು.) ಹಾವು, ಸರ್ಪ.
आर्द्र (ವಿ.) ನೆನೆದ, ತೊಯಿದ, ಹಸಿ.
आशु (ಅ.) ಬೇಗ.
इच्छु (ವಿ.) ಆಶಿಸುವ, ಕೋರುವ.
उत्तरा (ಸ್ತ್ರೀ.) ವಿರಾಟನೆಂಬ ಅರಸನ ಮಗಳು.
उपरितन (ವಿ.) ಮೇಲಿನ.
उपायन (ನ.) ಕಾಣಿಕೆ, ಸಂಭಾವನೆ.
एकमनस् (ವಿ.) ಒಂದು ಮನಸ್ಸಿನ, ಏಕಚಿತ್ತವುಳ್ಳ.
ओजस् (ನ.) ಪರಾಕ್ರಮ
कच (ಪು.) ಕೂದಲು.
कर्मपथ (ಪು.) (कर्मन् ನ. ಕೃತ್ಯ, पथिन् ಮಾರ್ಗ).
कलह (ಪು.) ಜಗಳ, ಕಡದಾಟ.
कलाप (ಪು.) ಗಂಟು, ಸಮೂಹ.
कृश (ವಿ.) ದುರ್ಬಲ, ತೆಳ್ಳನ.
कृष्णसाहाय्य (ನ.) ಕೃಷ್ಣನ ಸಹಾಯ.
अति + क्रम् (೧ನೇ ಗ. ಪ.) ದಾಟು, ಮಿೀರು.
क्षुद्र (ವಿ.) ಕೀಳ.
गरुड (ಪು.) ಗರುಡ ಪಕ್ಷಿ.
जटा (ಸ್ತ್ರೀ.) ಜಡೆಗಟ್ಟಿದ ಕೂದಲು.
जीवन (ನ.) ಬದುಕು, ಉಪಜೀವನ.
जीवित (ನ.) ಪ್ರಾಣ.
ज्ञानमार्ग (ಪು.) ಸಾಯುಜ್ಯ ಸುಖವನ್ನು ಪಡಿಯುವದಕ್ಕೆ ದೇವರ ಜ್ಞಾನವನ್ನು ಮಾಡಿಕೊಳ್ಳುವ ಉಪಾಯವು.
दारक (ಪು.) ಮಗ, ಗಂಡು ಕೂಸು.
दीप्ति (ಸ್ತ್ರೀ.) ಪ್ರಕಾಶ, ಹೊಳಪು, ತೇಜ.
दृढ (ವಿ.) ಸ್ಥಿರ, ಗಟ್ಟಿ.
निःश्रेयस (ನ.) ಮೋಕ್ಷ.
परिवृढ (ಪು.) ಒಡೆಯ.
पुण्डरीक (ಪು.) ಒಬ್ಬ ಋಷಿಕುಮಾರನ ಹೆಸರು; ತಾವರೆ, ಕಮಲ.
पृथु (ವಿ.) ವಿಶಾಲ, ದೊಡ್ಡ.
बन्धन (ನ.) ಅಡ್ಡಿ, ಸೆರೆ.
बालिका (ಸ್ತ್ರೀ.) ಹುಡಿಗೆ.
ब्रह्मवर्चस्विन् (ವಿ.) ವೇದೋಕ್ತಕರ್ಮಗಳನ್ನು ಮಾಡಿದ್ದರಿಂದ ತೇಜವುಳ್ಳ, ವೈದಿಕ ತೇಜವುಳ್ಳ.
भक्तिमार्ग (ಪು.) ಸಾಯುಜ್ಯ ಸುಖವನ್ನು ಪಡಿಯುವದಕ್ಕೆ ಭಕ್ತಿಯ ಉಪಾಯವು.

भाग्ययोग (ಪು.) [भाग्य (ನ.) ಸುದೈವ, योग (ಪು.) ಕೂಡುವಿಕೆ] ಸುದೈವದ ಯೋಗ.

भृश (ವಿ.) ಅತಿ, ಭಾರಿ.

मध्यम (ವಿ.) ನಡುವಿನ; (ನ.) ನಡುವು, ಟೊಂಕ.

मनुजन्मन् (ಪು.) ಮನುವಿನಿಂದ ಹುಟ್ಟಿದವನು, ಮನುಷ್ಯ.

मन्दभाग्यता (ಸ್ತ್ರೀ.) ದುರ್ದೈವ, ದುರ್ಭಾಗ್ಯ, ಅಪಾಯ.

महाश्वेता (ಸ್ತ್ರೀ.) ಒಬ್ಬ ಗಂಧರ್ವ ಕನ್ನಿಕೆಯ ಹೆಸರು.

महोपकारिन् (ವಿ.) ಬಹಳ ದಯವುಳ್ಳ, ಬಹಳ ಧರ್ಮಿಷ್ಠ.

मौर्ख्य (ನ.) ಮೂರ್ಖತನ, ದಡ್ಡತನ.

यज्ञवर्मन् (ಪು.) ಒಬ್ಬ ಮನುಷ್ಯನ ಹೆಸರು.

यथाविधि (ಅ.) ವಿಧಿಯ ಪ್ರಕಾರ, ಶಾಸ್ತ್ರೋಕ್ತವಾಗಿ.

यमुना (ಸ್ತ್ರೀ.) ನದಿಯ ಹೆಸರು, ಕಾರ್ಮಡು.

युग (ಪು.) ನೊಗ.

योधसमाज (ಪು.) ಶೂರರ ಸಮುದಾಯ, ಸೈನ್ಯ.

रज्जु (ಸ್ತ್ರೀ.) ಹಗ್ಗ.

उप+रम् (೧ನೇ ಗ. ಪ.) ಸಾಯು.

रहस् (ನ.) ಏಕಾಂತ; (ಅ.) ಏಕಾಂತವಾಗಿ.

लघु (ವಿ.) ಸಣ್ಣ, ಚಿಕ್ಕ.

वपुस् (ನ.) ಶರೀರ, ದೇಹ.

विक्रान्त (ವಿ.) ಪರಾಕ್ರಮವುಳ್ಳ, ಧೈರ್ಯವುಳ್ಳ.

विश्वसनीयता (ಸ್ತ್ರೀ.) ನಂಬಿಗೆ ಹುಟ್ಟಿಸುವ ಸಾಮರ್ಥ್ಯ.

विषय (ಪು.) ಇಂದ್ರಿಯ ಸುಖವನ್ನುಂಟು ಮಾಡುವ ಪದಾರ್ಥ.

विष्णुशर्मन् (ಪು.) ಒಬ್ಬ ಮನುಷ್ಯನ ಹೆಸರು.

विस्तार (ಪು.) ಅಳತೆ, ಪರಿಮಾಣ.

वृत्तान्तश्रवण (ನ.) ಚರಿತ್ರವನ್ನು ಕೇಳೋಣ.

वेणि, वेणी (ಸ್ತ್ರೀ.) ಹೆರಳು.

शिरीष (ನ.) ಒಂದು ತರದ ಹೂವು.

शुचि (ವಿ.) ಶುದ್ಧ.

संभव (ಪು.) ಸಾಧ್ಯತ್ವ.

सदसत् (ವಿ.) ಚಲೋದು ಮತ್ತು ಕೆಟ್ಟದ್ದು.

सलिल (ನ.) ನೀರು.

सशोक (ವಿ.) ದುಃಖದಿಂದ ಕಷ್ಟ ಪಡುವ, ದುಃಖಿ.

सहस्रशः (ಅ.) ಸಾವಿರಗಟ್ಲೆ.

सुभद्रा (ಸ್ತ್ರೀ.) ಅರ್ಜುನನ ಹೆಂಡತಿ.

सेवा (ಸ್ತ್ರೀ.) ಸೇವೆ, ಚಾಕರಿ.

सौम्य (ವಿ.) ನಮ್ರ, ಸಾಧು.

हनूमत् (ಪು.) ರಾಮನ ಭಕ್ತನಾದ ವಾನರನ ಹೆಸರು, ಪ್ರಾಣದೇವರು.

ह्रस्व (ವಿ.) ಕಿರಿದಾದ.

---

ಅನರ್ಥಕ अयुक्त (ವಿ.), अनुपपन्न (ವಿ.).

ವಿಪರೀತ प्रातिकूल (ವಿ.).

ಶರೀರಾಕಾರ तनु (ಸ್ತ್ರೀ.), वपुस् (ನ.), आकृति (ಸ್ತ್ರೀ.).

ಭಾಷ್ಯಕಾರ, ವ್ಯಾಖ್ಯಾನಿ टीकाकार (ಪು.), टीकाकृत् (ಪು.).

ವಾಡಿಕೆಯ साधारण (ವಿ.), सामान्य (ವಿ.).

ಕ್ರೂರ, ಕಠೋರ नृशंस (ವಿ.).

ಕಟ್ಟಿದ, ಜೋಡಿಸಿದ नियुक्त (ವಿ.), भूरि-नियुक्तः (ವಿ.).

ಕೈಕೇಯಿ (ದಶರಥನ ಚಿಕ್ಕ ಹೆಂಡತಿಯ ಹೆಸರು) कैकेयी (ಸ್ತ್ರೀ.).

ಕೌಸಲ್ಯಾ (ದಶರಥನ ಹಿರಿಹೆಂಡತಿಯ ಹೆಸರು) कौसल्या (ಸ್ತ್ರೀ.).

ನಿಮಿಷ क्षण (ಪು.).

ಬಲೆ जाल (ನ.).

ಉತ್ತಮ ಸ್ವಭಾವದ ವಿಶುದ್ಧಶೀಲ (ವಿ.).
ಸಂಬಂಧಿಕ, ನೆಂಟ, ಆಪ್ತ ಇಷ್ಟ (ಪು.), ಇಷ್ಟ-ಜನ (ಪು.), ಜ್ಞಾತಿ (ಪು.).
ರುಕ್ಮಿಣೀ (ಕೃಷ್ಣನ ಹೆಂಡತಿಯ ಹೆಸರು) ರುಕ್ಮಿಣೀ (ಸ್ತ್ರೀ.).
ಓಡೋಣ, ಓಡುವಿಕೆ ವಿದ್ರವಣ (ನ.).
ಕಠೋರ ನಿರ್ಘೃಣ (ವಿ.).
ಸತ್ಯಭಾಮೆ (ಕೃಷ್ಣನ ಹೆಂಡತಿಯ ಹೆಸರು) ಸತ್ಯಭಾಮಾ (ಸ್ತ್ರೀ.).
ಅಭಿಪ್ರಾಯ ಅರ್ಥ (ಪು.).
ನಿಷ್ಕಪಟ, ಸರಳವಾದ ಋಜು (ವಿ.), ಆರ್ಜವ-ಯುಕ್ತ (ವಿ.), ಸರಲ (ವಿ.).

## ೧೪ನೇ ಪಾಠ.

### ಸಮಾಸಗಳು.

### ದ್ವಂದ್ವವೂ ತತ್ಪುರುಷವೂ.

ಎರಡು ಪದಗಳು[1] ಕೂಡಿ ಒಂದೇ ಪದವಾಗಿ ಒಂದು ಅರ್ಥವನ್ನು ಹೇಳುತ್ತಿದ್ದರೆ, ಅದಕ್ಕೆ ಸಮಾಸ ಅಥವಾ ಸಮಸ್ತಪದವೆನ್ನುವರು. ಸಂಸ್ಕೃತದಲ್ಲಿ ಒಂದು ಸಮಸ್ತಪದವು ಮತ್ತೊಂದು ಪದಕ್ಕಾಗಲಿ ಸಮಾಸಕ್ಕಾಗಲಿ ಕೂಡಿ ಹೊಸದೊಂದು ಸಮಸ್ತಪದವಾಗುವದು; ಅಥವಾ ಒಮ್ಮೆಲೇ ಅನೇಕ ಪದಗಳು ಕೂಡಿ ಒಟ್ಟಾಗಿ ಒಂದೇ ಸಮಸ್ತಪದವಾಗಬಹುದು. ಈ ಮೇರೆಗೆ ಸಂಸ್ಕೃತದಲ್ಲಿ ಒಂದು ಸಮಾಸದೊಳಗೆ ಬೇಕಾದಷ್ಟು ಪದಗಳು ಸೇರಬಹುದು. ಸಮಾಸಗಳಲ್ಲಿ ಪದಗಳ ರಚನಾನುಕ್ರಮವನ್ನೂ ಅರ್ಥಾನುಕ್ರಮವನ್ನೂ ಅನುಸರಿಸಿ, ಕೆಲವು ವಿಧಗಳನ್ನು ಕಲ್ಪಿಸಿರುತ್ತಾರೆ[2]. ಅವು ಯಾವವಂದರೆ—(ಅ) ದ್ವಂದ್ವ, (ಬ) ತತ್ಪುರುಷ, (ಕ) ಬಹುವ್ರೀಹಿ, (ಡ) ಅವ್ಯಯಿೀಭಾವ.

(ಅ) ದ್ವಂದ್ವಸಮಾಸ.—(೧) ಒಂದೇ ಕ್ರಿಯೆಯ ಒಂದೇ ಸಂಬಂಧವುಳ್ಳ ಅನೇಕ ಪದಗಳು ಕೂಡಿ ಆಗುವ ಸಮಾಸಕ್ಕೆ ದ್ವಂದ್ವಸಮಾಸವೆಂಬ ಹೆಸರು. ಈ ಸಮಾಸದ ಪದಗಳೆಲ್ಲ ನಾಮಪದಗಳೇ ಇರುವವು. ಸಮಾಸ ಮಾಡದಿದ್ದರೆ, ಇವನ್ನೆಲ್ಲ ಉಭಯಾನ್ವಯಿೀ ಅವ್ಯಯಗಳಿಂದ ಒಂದಕ್ಕೊಂದು ಕೂಡಿಸಬೇಕಾಗುವದು. ಉದಾ: ರಾಮಶ್ಚ ಕೃಷ್ಣಶ್ಚ=ರಾಮಕೃಷ್ಣೌ; ರಾಮಶ್ಚ ಲಕ್ಷ್ಮಣಶ್ಚ ಭರತಶ್ಚ ಶತ್ರುಘ್ನಶ್ಚ= ರಾಮಲಕ್ಷ್ಮಣಭರತಶತ್ರುಘ್ನಾಃ.

---

[1] ಪದವೆಂದರೆ ನಾಮ, ಸರ್ವನಾಮ, ವಿಶೇಷಣ, ಅವ್ಯಯ.

[2] ಬೇಕಾದ ಎರಡು ಅಥವಾ ಹೆಚ್ಚು ಪದಗಳು ಒಂದಕ್ಕೊಂದು ಕೂಡಿ ಸಮಾಸವಾಗಲಾರದು. ಸಂಸ್ಕೃತ ಭಾಷಾರೂಢಿಗೆ ಸರಿಯಾಗಿ ಕೆಲವು ಬಗೆಯ ಸಮಾಸಗಳು ಮಾತ್ರ ಆಗುತ್ತವೆ. ತಿಳಿಯದ ಜನರು ಇದನ್ನರಿಯದೆ ಸಂಸ್ಕೃತ ಭಾಷಾಪದ್ಧತಿಗೆ ಗ್ರಾಹ್ಯವಲ್ಲದಂಥ ಸಂಯೋಗಗಳನ್ನು ಮಾಡಿ ಅವುಗಳನ್ನು ಸಮಾಸದಂತೆ ಪ್ರಯೋಗಿಸುವರು. ಸಮಾಸಗಳ ಬಗ್ಗೆ ಸಂಸ್ಕೃತ ವ್ಯಾಕರಣಕಾರರು ಅನೇಕ ವಿಧಗಳನ್ನು ಹೇಳಿರುತ್ತಾರೆ; ಅವುಗಳಲ್ಲಿ ಕೆಲವನ್ನು ಮಾತ್ರ ಈ ಪುಸ್ತಕದಲ್ಲಿ ಹೇಳಿರುತ್ತೇವೆ. ಸಮಾಸಗಳ ಸಂಬಂಧದಿಂದ ಹೆಸರಾದ ಗ್ರಂಥಕಾರರ ರೂಢಿಯನ್ನನುಸರಿಸಿ ನಡಿಯುವದೇ ವಿಹಿತವು.

(೨) (ಅ) ಎರಡೇ ಏಕವಚನಾಂತ ಶಬ್ದಗಳು ಕೂಡಿ ದ್ವಂದ್ವಸಮಾಸವಾದರೆ, ಸಮಸ್ತಪದವು ದ್ವಿವಚನಾಂತವಾಗುವದು. ಉಳಿದ ಕಡೆಯಲ್ಲಿ ಬಹುವಚನಾಂತವಾಗುವದು.

(ಬ) ಸಮಾಸದೊಳಗಿನ ಕಡೆಯ ನಾಮದ ಲಿಂಗವೇ ಎಲ್ಲ ಸಮಸ್ತಪದದ ಲಿಂಗವೆಂದು ತಿಳಿಯತಕ್ಕದ್ದು. ಉದಾ: कुक्कुटमयूर्याविमे ಅಥವಾ मयूरीकुक्कुटा-विमौ.

(ಕ) ದ್ವಂದ್ವಸಮಾಸವು ಸಮಾಹಾರಾರ್ಥವುಳ್ಳದ್ದು, ಅಂದರೆ ಎಲ್ಲ ಅವಯವಗಳು ಕೂಡಿ ಒಂದೇ ಗುಂಪು ಎಂಬ ಅರ್ಥವುಳ್ಳದ್ದು ಆಗಿದ್ದರೆ, ಸಮಾಹಾರ ದ್ವಂದ್ವವೆನಿಸುತ್ತದೆ. ಇದು ಯಾವಾಗಲೂ ನಪುಂಸಕವೂ ಏಕವಚನಾಂತವೂ ಆಗಿರುವದು. ಉದಾ: आहारनिद्राभयम्. ಕ್ರಿಮಿಕೀಟಕವಾಚಕವೂ ಪ್ರಾಣ್ಯಂಗ ವಾಚಕವೂ ಸೇನಾಂಗವಾಚಕವೂ ಜಾತಿದ್ವೇಷಿಗಳ ವಾಚಕವೂ ಅಚೇತನ ಪದಾರ್ಥಜಾತಿವಾಚಕವೂ ಆದ ಶಬ್ದಗಳ ಸಮುಚ್ಚಯವಿದ್ದಲ್ಲಿ ಈ ಸಮಾಸವಾಗುತ್ತದೆ. ಉದಾ: यूकालिक्षम्. पाणिपादम्, रथिकाश्वारोहम्, अहिनकुलम्, धाना-शष्कुलि; ಉಳಿದ ಕಡೆಯಲ್ಲಿ ಮಾತಾಡುವವನ ವಿವಕ್ಷೆ ಇದ್ದಂತೆ ಆಗುವದು.

(೩) ದ್ವಂದ್ವದಲ್ಲಿ ಋಕಾರಾಂತ ಬಂಧುವಾಚಕ ಅಥವಾ ವಿದ್ಯಾಸಂಬಂಧ ವಾಚಕನಾಮಗಳ ಮುಂದೆ ಮತ್ತೊಂದು ಋಕಾರಾಂತ ನಾಮವಾಗಲಿ पुत्र ಶಬ್ದವಾಗಲಿ ಬಂದರೆ, ಮೊದಲಿನ ನಾಮದ ಋಕಾರಸ್ಥಾನದಲ್ಲಿ आಕಾರಾದೇಶವಾಗುವದು. ಉದಾ: होतापोतारौ, मातापितरौ, पितापुत्रौ.

(೪) ತಾಲವ್ಯ ವರ್ಣವಾಗಲಿ द्, ष्, ह् ಗಳಾಗಲಿ ಸಮಾಹಾರದ್ವಂದ್ವದ ಕಡೆಯಲ್ಲಿ ಬಂದರೆ, ಅದರ ಮುಂದೆ अಕಾರಾಗಮವಾಗುವದು. ಉದಾ: वाक्त्व-चम्, त्वक्स्रजम्, शमीदृषदम्, वाक्त्विषम्, छत्रोपानहम् ಇತ್ಯಾದಿ. ಸಮಾಹಾರವಿಲ್ಲದಿದ್ದರೆ, अಕಾರಾಗಮ ಬರುವದಿಲ್ಲ. ಉದಾ: प्रावृट्शरदौ.

(ಬ) ತತ್ಪುರುಷಸಮಾಸ.—(೧) ತತ್ಪುರುಷಸಮಾಸವು ಎರಡು ಪದಗಳು ಕೂಡಿ ಆಗುತ್ತದೆ. ಆ ಎರಡರಲ್ಲಿ ಮೊದಲನೇದು ಎರಡನೇದಕ್ಕೆ[1] ಅರ್ಥವ್ಯಕ್ತಿ ಕೊಡುವದು, ಅಥವಾ ಅದರ ಗುಣ ವಿಶೇಷಿಸುವದು, ಅಂದರೆ ಪ್ರಥಮೇತರ ವಿಭಕ್ತ್ಯಂತವಾಗಿ ಅಥವಾ ಗುಣವಾಚಕವಾಗಿ ಅದಕ್ಕೆ ಸಂಬಂಧಿಸುವದು. ಈ ಸಮಾಸದಲ್ಲಿ ಬಹುತರ ಎರಡನೇ ಪದವೇ ಮುಖ್ಯವಾಗಿರುತ್ತದೆ, ಅಂದರೆ ಕ್ರಿಯೆಗೆ ಸಂಬಂಧಿಸುತ್ತದೆ. ಪ್ರಥಮೇತರ ವಿಭಕ್ತ್ಯಂತ ಪೂರ್ವಪದವುಳ್ಳ ಸಮಾಸಕ್ಕೆ ತತ್ಪುರುಷವೆಂತಲೂ ಗುಣವಾಚಕ ಪೂರ್ವಪದವುಳ್ಳ ಸಮಾಸಕ್ಕೆ ಕರ್ಮಧಾರಯ

---

[1] ಕ್ವಚಿತ್ತಾಗಿ ಮೊದಲನೇ ಪದವು ಮುಖ್ಯ ಅಂದರೆ ಪ್ರಧಾನವಾಗುತ್ತದೆ. ಉದಾ: नृसिंह.

ಸಮಾಸವೆಂತಲೂ ಅನ್ನುವರು. ಉದಾ: (೧) राज्ञः पुरुषः = राजपुरुषः (ತ.), (೨) पुरुषो व्याघ्र इव = पुरुषव्याघ्रः (ಕ.); (೩) गम्भीरो नादः = गम्भीरनादः (ಕ.).

(೨) ತತ್ಪುರುಷಸಮಾಸದಲ್ಲಿ ಪೂರ್ವಪದಕ್ಕಿರುವ ವಿಭಕ್ತಿಗಳಿಗೆ ಸರಿಯಾಗಿ ಆರು ಭೇದಗಳುಂಟು.

(ಅ) ದ್ವಿತೀಯಾತತ್ಪುರುಷ — (೧) ದ್ವಿತೀಯಾಂತ ನಾಮಪದಗಳು श्रित, अतीत, गत, पतित, अत्यस्त, प्राप्त, आपन्न ಶಬ್ದಗಳ ಸಂಗಡ ಕೂಡಲಾಗಿ ದ್ವಿತೀಯಾತತ್ಪುರುಷಸಮಾಸವಾಗುವದು. ಉದಾ: कृष्णं श्रितः = कृष्णश्रितः, दुःखमापन्नः = दुःखापन्नः, स्वर्गं गतः = स्वर्गगतः

(೨) ಯಾವದೊಂದು ಕ್ರಿಯೆಯು ಅಥವಾ ಸ್ಥಿತಿಯು ಎಡೆಬಿಡದೆ ಇಷ್ಟು ಹೊತ್ತು ಸಾಗಿ ಕೆಂಡು ಹೇಳುವ ಕಾಲಾರ್ಥಕ ದ್ವಿತೀಯಾಂತ ನಾಮಪದಗಳು ಆ ಕ್ರಿಯಾವಾಚಕ ಅಥವಾ ಸ್ಥಿತಿವಾಚಕ ನಾಮಪದಗಳ ಸಂಗಡ ಕೂಡಲು ದ್ವಿತೀಯಾತತ್ಪುರುಷಸಮಾಸವಾಗುವದು. ಉದಾ: मुहूर्तं सुखम् = मुहूर्तसुखम्.

(ಬ) ತೃತೀಯಾತತ್ಪುರುಷ — ತೃತೀಯಾಂತ ನಾಮಪದಗಳು ಕೆಳಗೆ ವಿವರಿಸಿದ ಬೇರೆ ಶಬ್ದಗಳ ಸಂಗಡ ಕೂಡಲಾಗಿ ಈ ಸಮಾಸವಾಗುವದು.

(೧) ಪರಿಮಾಣವಾಚಕ ಅಥವಾ ಕಾರ್ಯವಾಚಕನಾಮಗಳ ಸಂಗಡ. ಉದಾ; शङ्कुलया खण्डः = शङ्कुलाखण्डः.

(೨) पूर्व, सदृश, सम, ऊन ಮತ್ತು ಊನಾರ್ಥಕ ಇತರ ಶಬ್ದಗಳ ಸಂಗಡ ಉದಾ: मासेन पूर्वः = मासपूर्वः, मात्रा सदृशः = मातृसदृशः; ಮತ್ತು कलह, निपुण, मिश्र, श्लक्ष्ण ಶಬ್ದಗಳ ಸಂಗಡ. ಉದಾ: वाचा कलहः = वाक्कलहः.

(೩) ಕರ್ತ್ರರ್ಥಕ ಅಥವಾ ಕರಣಾರ್ಥಕ ತೃತೀಯಾಂತ ನಾಮಪದಗಳು ಕೃದಂತಗಳ ಸಂಗಡ ಕೂಡಲಾಗಿ ತೃತೀಯಾ ತತ್ಪುರುಷಸಮಾಸವಾಗುವದು. ಉದಾ: हरिणा त्रातः = हरित्रातः, नखैर्भिन्नः = नखभिन्नः.

(೪) ರುಚಿಯು ಸಲುವಾಗಿ ಅನ್ನದೊಡನೆ ಕೂಡಿಸಿ ತಿನ್ನುವ ಪದಾರ್ಥವಾಚಕನಾಮವು ಅನ್ನವಾಚಕಪದದ ಸಂಗಡ ಕೂಡಲಾಗಿ ತೃತೀಯಾತತ್ಪುರುಷಸಮಾಸವಾಗುವದು. ಉದಾ: दध्नौदनः = दध्योदनः ಇತ್ಯಾದಿ.

(ಕ) ಚತುರ್ಥೀತತ್ಪುರುಷ — ಚತುರ್ಥ್ಯಂತ ನಾಮಪದಗಳು, —

(೧) ಆ ಪದಗಳು ಹೇಳುವ ಪದಾರ್ಥವನ್ನು ಹುಟ್ಟಿಸುವ ದ್ರವ್ಯವಾಚಕನಾಮಪದಗಳ ಸಂಗಡ ಉದಾ: यूपाय दारु = यूपदारु. ಅಥವಾ

(೨) अर्थ, बलि, हित, रक्षित ಶಬ್ದಗಳ ಸಂಗಡ ಕೂಡಲಾಗಿ ಚತುರ್ಥೀತತ್ಪುರುಷಸಮಾಸವಾಗುವದು. ಉದಾ: गवे हितम् = गोहितम्; गवे रक्षितम् = गोरक्षितम्; भूतेभ्यो बलिः = भूतबलिः.

अर्थ ಶಬ್ದಾಂತ ತತ್ಪುರುಷಸಮಾಸವು ವಿಶೇಷಣವಾಗಿ ವಿಶೇಷ್ಯದ ಲಿಂಗವಚನಗಳನ್ನು ಧರಿಸುತ್ತದೆ. ಉದಾ: द्विजायायम् = द्विजार्थ ओदनः, द्विजायेयम् = द्विजार्था यवागूः, द्विजायेदम् = द्विजार्थं पयः, भूतेभ्यो बलिः = भूतबलिः.

(ಡ) ಪಂಚಮೀತತ್ಪುರುಷ—ಪಂಚಮ್ಯಂತ ನಾಮಪದಗಳು,—

(೧) ಭಯ, ಭೀತ, ಭೀತಿ, ಭೀ ಶಬ್ದಗಳ ಸಂಗಡ. ಉದಾ: चोराद्भयम्=चोरभयम्, व्याघ्राद्भीतिः=व्याघ्रभीतिः. ಮತ್ತು ಒಮ್ಮೊಮ್ಮೆ

(೨) अपेत, अपोढ, मुक्त, पतित, अपत्रस्त ಶಬ್ದಗಳ ಸಂಗಡ ಕೂಡಲಾಗಿ ಪಂಚಮೀತತ್ಪುರುಷಸಮಾಸವಾಗುವದು. ಉದಾ: सुखादपेतः=सुखापेतः, चक्रान्मुक्तः=चक्रमुक्तः, स्वर्गात्पतितः=स्वर्गपतितः.

(ಇ) (೧) ಷಷ್ಠ್ಯಂತ ನಾಮಪದಗಳು ಬೇರೆ ನಾಮಪದಗಳ ಸಂಗಡ ಕೂಡಲಾಗಿ ಷಷ್ಠೀತತ್ಪುರುಷಸಮಾಸವಾಗುವದು. ಉದಾ: राज्ञः पुरुषः=राजपुरुषः. ಆದರೆ ಇದಕ್ಕೆ ಅಪವಾದಗಳು ಬಹಳ.

अक ಪ್ರತ್ಯಯಾಂತ तृ ಪ್ರತ್ಯಯಾಂತ ಅನ್ವರ್ಥಕನಾಮಗಳು ಉತ್ತರಪದಗಳಾದರೆ, ಷ. ತ. ಸಮಾಸವಾಗುವದಿಲ್ಲ. ಉದಾ: अपां स्रष्टा, ओदनस्य पाचकः घटस्य कर्ता ಇತ್ಯಾದಿ; अप्स्रष्टा, ओदनपाचकः, घटकर्ता ಆಗುವದಿಲ್ಲ.

ಆದರೆ ಇದಕ್ಕೆ ಪ್ರತ್ಯಪವಾದಗಳು ಕೆಲವು ಇರುವವು. देवपूजकः, ब्राह्मणयाजकः ಎಂಬ ಸಮಾಸಗಳಾಗುತ್ತವೆ. नृणां द्विजः श्रेष्ठः; सताम् षष्ठः; आश्चर्यो गवां दोहोऽगोपेन ಮುಂತಾದ ಉದಾಹರಣೆಗಳಲ್ಲಿ ಷಷ್ಠ್ಯಂತ ನಾಮಗಳಿಗೂ ಅವುಗಳ ಮುಂದಿನ ಪದಗಳಿಗೂ ಸಮಾಸವಾಗುವದಿಲ್ಲ.

(೨) ಷಷ್ಠ್ಯಂತ ನಾಮಪದಗಳು पूर्व, अपर, अवर, उत्तर ಎಂಬ ಶಬ್ದಗಳ ಸಂಗಡ ಕೂಡಲಾಗಿ ಸಮಾಸವಾಗುವವು. ಆದರೆ ಈ ಶಬ್ದಗಳು ಸಮಾಸದೊಳಗೆ ಪೂರ್ವಪದಸ್ಥಾನದಲ್ಲಿ ಬರುವವು. ಇದೇ ಮೇರೆಗೆ ಕಾಲವಾಚಕ ಷಷ್ಠ್ಯಂತನಾಮವು ಅದರ ಭಾಗವಾಚಕ ನಾಮಗಳ ಸಂಗಡ ಕೂಡಲಾಗಿ ಷಷ್ಠೀತತ್ಪುರುಷಸಮಾಸವಾಗುವದು. ಆದರೆ ಭಾಗವಾಚಕ ಶಬ್ದವು ಪೂರ್ವಪದಸ್ಥಾನದಲ್ಲಿ ಬರುವದು. ಈ ಸಮಾಸಗಳು ಷಷ್ಠ್ಯಂತ ನಾಮಗಳು ಹೇಳುವ ಪದಾರ್ಥಗಳ ಭಾಗವನ್ನು ಹೇಳುವವು. ಉದಾ: पूर्वं कायस्य=पूर्वकायः, चरमं रात्रेः=चरमरात्रः, मध्यमह्नः;=मध्याह्नः ಇತ್ಯಾದಿ.

(೩) ಒಂದು ಸಂಗತಿಯು ವರ್ತಿಸಿ ಇಷ್ಟು ದಿವಸವಾಯಿತೆಂದು ಅವಧಿಯನ್ನು ಹೇಳುವ ನಾಮಪದವು ಆ ಸಂಗತಿಯನ್ನು ಹೇಳುವ ನಾಮಪದದ ಸಂಗಡ ಕೂಡಲಾಗಿ ಷಷ್ಠೀತತ್ಪುರುಷಸಮಾಸವಾಗುವದು. ಉದಾ: संवत्सरो मृतस्य यस्य (ಯಾವನು ಸತ್ತು ಒಂದು ವರುಷವಾಯಿತೋ ಅವನು)=संवत्सरमृतः, मासजातः,

(ಫ) ಸಪ್ತಮ್ಯಂತ ನಾಮಪದಗಳು शौण्ड, धूर्त, प्रवीण, निपुण, पण्डित, पटु, कुशल, सिद्ध, शुष्क, पक्व, बन्ध ಮುಂತಾದ ಶಬ್ದಗಳ ಸಂಗಡ ಕೂಡಲಾಗಿ ಸಪ್ತಮೀತತ್ಪುರುಷ ಸಮಾಸವಾಗುವದು. ಉದಾ: वाचि पटुः=वाक्पटुः, सभायाम् पण्डितः=सभापण्डितः, आतपे शुष्कः=आतपशुष्कः.

೩. ಕೆಳಗೆ ವಿವರಿಸಿದ ಪ್ರಸಂಗಗಳಲ್ಲಿ ಕರ್ಮಧಾರಯಸಮಾಸವಾಗುತ್ತದೆ.

(ಅ) ಉಪಮಾನಪದಗಳು ಉಪಮಾನೋಪಮೇಯಪದಗಳಿಗೆ ಸಾಧಾರಣವಾದ ಧರ್ಮವನ್ನು ಅಥವಾ ಉಪಮಾಹೇತುವನ್ನು ಹೇಳುವ ಪದಗಳಿಗೆ ಕೂಡಿದರೆ. ಉದಾ: घन इव श्यामः=घनश्यामः.

(ಬ) ಉಪಮೇಯಪದಗಳು व्याघ्र, चन्द्र, कमल, पद्म ಮುಂತಾದ ಉಪಮಾನಪದಗಳಿಗೆ ಕೂಡಿದರೆ. ಉದಾ: पुरुषो व्याघ्र इव = पुरुषव्याघ्रः, मुखं चन्द्र इव = मुखचन्द्रः, नेत्रं कमलमिव = नेत्रकमलम्, पादः पद्ममिव = पादपद्मम्. ಅಥವಾ मुखमेव चन्द्रः = मुखचन्द्रः, नेत्रमेव कमलम् = नेत्रकमलम्, ಹೀಗೂ ವಿಗ್ರಹ ಮಾಡಬಹುದು.

(ಕ) ಲಕ್ಷಣ ವರ್ಣಿಸುವ ನಾಮಪದಗಳು ಆ ಲಕ್ಷಣವುಳ್ಳ ನಾಮಪದಗಳಿಗೆ ಕೂಡಿದರೆ. ಉದಾ: नीलं च तदुत्पलं च = नीलोत्पलं, गम्भीरश्चासौ नादश्च = गम्भीरनादः.

(ಡ) ಒಂದರ ಹಿಂದೊಂದು ಆದ ಸಂಗತಿಗಳನ್ನು ಹೇಳುವ ಕೃದಂತಗಳು ಒಂದಕ್ಕೊಂದು ಕೂಡಿದರೆ. ಉದಾ: आदौ स्नातः पश्चादनुलिप्तः = स्नातानुलिप्तः.

೪. ನಿಷೇಧಾರ್ಥಕ अ ಅಥವಾ अन् ಕೂಡಿ ಆಗುವ ಸಮಾಸವು ತತ್ಪುರುಷದ ಜಾತಿಯ ಒಂದು ಸಮಾಸವು; ಅದಕ್ಕೆ नञ् ತತ್ಪುರುಷವೆನ್ನುತ್ತಾರೆ. ಉದಾ: अब्राह्मणः, अनर्थः.

೫. ಕರ್ಮಧಾರಯಸಮಾಸದ ಪೂರ್ವಪದವು ಸಂಖ್ಯಾವಾಚಕವಿದ್ದರೆ, ಅದಕ್ಕೆ ಸಂಸ್ಕೃತದಲ್ಲಿ ದ್ವಿಗು ಎಂಬ ಹೆಸರು. ಈ ಸಮಾಸವು ಸಮಾಹಾರಾರ್ಥವುಳ್ಳದ್ದು. ಉದಾ: त्रयाणां भुवनानां समाहारः = त्रिभुवनम्. ಸಂಖ್ಯಾವಾಚಕ ಪೂರ್ವಪದವುಳ್ಳ ಕರ್ಮಧಾರಯಸಮಾಸವು ಯಾವಾಗಲೂ ದ್ವಿಗುಸಮಾಸವಾಗುವದು.

೬. ಸಮಾಸದೊಳಗೆ ವಿವಕ್ಷಿತ ಪ್ರಸಂಗಗಳಲ್ಲಿ ಕೆಲವು ಶಬ್ದಗಳ ಅಂತ್ಯಸ್ವರಕ್ಕೆ ಅಂತ್ಯಸ್ಥಾನದಲ್ಲಿ ಸ್ವರವಿಲ್ಲದಿದ್ದರೆ, ಅಂತ್ಯ ವರ್ಣಕ್ಕೂ ಅದರ ಹಿಂದಿನ ಸ್ವರಕ್ಕೂ ಲೋಪ ಬಂದು ತರುವಾಯ ಆ ಸ್ಥಾನದಲ್ಲಿ अ ಆಗಮ ಬರುವದು; ಆ ಶಬ್ದಗಳೂ ಪ್ರಸಂಗಗಳೂ ಯಾವವೆಂದರೆ:

(ಅ) पथिन् ಶಬ್ದಕ್ಕೆ ಯಾವತ್ತು ಸಮಾಸಗಳ ಕಡೆಯಲ್ಲಿ. ಉದಾ: स्वर्गपथः

(ಬ) सखि ಮತ್ತು राजन् ಶಬ್ದಗಳಿಗೆ ತತ್ಪುರುಷಸಮಾಸದ ಕಡೆಯಲ್ಲಿ. ಉದಾ: मद्रराजः, कृष्णसखः.

(ಕ) रात्रि ಶಬ್ದಕ್ಕೆ ತತ್ಪುರುಷಸಮಾಸದ ಕಡೆಯಲ್ಲಿ, ಆದರೆ ಆ ಸಮಾಸದ ಪೂರ್ವಪದವು ಸಂಖ್ಯಾವಾಚಕವಾಗಲಿ ಅವ್ಯಯವಾಗಲಿ पूर्व, अपर ಮುಂತಾದ ಭಾಗವಾಚಕ ಶಬ್ದಗಳಾಗಲಿ, सर्व, संख्यात, पुण्य ಎಂಬ ಶಬ್ದಗಳಾಗಲಿ ಇರಲಿಕ್ಕೆ ಬೇಕು. ಉದಾ: द्विरात्रं, अतिरात्र, पूर्वरात्रः.

(ಡ) रात्रि ಶಬ್ದಕ್ಕೆ ದ್ವಂದ್ವಸಮಾಸದ ಕಡೆಯಲ್ಲಿ, अहः ಶಬ್ದವು ಹಿಂದೆ ಇದ್ದಾಗ್ಗೆ. ಉದಾ: अहोरात्रः

(ಇ) अहन् ಶಬ್ದಕ್ಕೆ ತತ್ಪುರುಷಸಮಾಸಾಂತದಲ್ಲಿ ಕೆಳಗಿನ ನೇಮದ ಪ್ರಕಾರ अह्न ರೂಪವಾಗದಿದ್ದಾಗ. ಉದಾ: पुण्याहं, द्व्यहः, उत्तमाहः.

೭. ಪೂರ್ವಪದವು ಅವ್ಯಯವಾಗಲಿ पूर्व, अपर ಮುಂತಾದ ಭಾಗವಾಚಕ ಶಬ್ದಗಳಾಗಲಿ सर्व, संख्यात ಶಬ್ದಗಳಾಗಲಿ ಇದ್ದು ತತ್ಪುರುಷಸಮಾಸಾಂತದಲ್ಲಿ अहन् ಶಬ್ದವು ಬಂದರೆ, ಅದು अह्न ಎಂಬ ರೂಪವನ್ನು ಹೊಂದುವದು. ಉದಾ: सर्वाह्णः, पूर्वाह्णः.

೮. ಸಮಾಸಾಂತವಾದ ऋच्. पुर्, धुर् (ನೊಗ ಎಂಬರ್ಥವಿಲ್ಲದಲ್ಲಿ) ಶಬ್ದಗಳಿಗೂ ತತ್ಪುರುಷಸಮಾಸಾಂತವಾದ गो ಶಬ್ದಕ್ಕೂ अಕಾರಾಗಮ ಬರುವದು. ಉದಾ: अर्धर्चः, विष्णुपुरम्, रणधुरा, परमगवः.

೯. (ಅ) ತತ್ಪುರುಷದಲ್ಲಿ ಕಡೆಯ ನಾಮದ ಲಿಂಗವೇ ಎಲ್ಲ ಸಮಾಸದ ಲಿಂಗವೆಂದು ತಿಳಿಯಬೇಕು. ಉದಾ: राजपुरुषः, नखभिन्नः, स्त्रा-त्रम्.

(ಬ) ಸಮಾಹಾರಾರ್ಥ ದ್ವಿಗುಸಮಾಸವು ನಪುಂಸಕವಾಗಿರುವದು; ಆದರೆ अಕಾರಾಂತ ದ್ವಿಗುಸಮಾಸವು ಬಹುಶಃ ಸ್ತ್ರೀಲಿಂಗವಾಗಿ ಈಕಾರಾಂತವಾಗುತ್ತದೆ. ಉದಾ: पञ्चगवं (पञ्चन् ಮತ್ತು गो ಶಬ್ದಗಳಿಂದ), पञ्चपात्रं, त्रिलोकी.

(ಕ) रात्र, अह्न, अह ಶಬ್ದಗಳು ಕಡೆಯಲ್ಲಿದ್ದಾಗ ತತ್ಪುರುಷಸಮಾಸವು ನಿತ್ಯ ಪುಲ್ಲಿಂಗವಿರುತ್ತದೆ. ಆದರೆ रात्र ಶಬ್ದದ ಹಿಂದೆ ಸಂಖ್ಯಾವಾಚಕವಿದ್ದಲ್ಲಿಯೂ अह ಶಬ್ದದ ಹಿಂದೆ पुण्य ಶಬ್ದವಿದ್ದಲ್ಲಿಯೂ ಸಮಾಸವು ನಪುಂಸಕವಾಗುತ್ತದೆ. ಉದಾ: पूर्वरात्रः, मध्याह्नः, सप्ताहः, द्विरात्रम्, पुण्याहम्.

೧೦. ನಪುಂಸಕ ದ್ವಿಗು ದ್ವಂದ್ವಗಳ ಕಡೆಯಲ್ಲಿ ದೀರ್ಘ ಸ್ವರವಿದ್ದರೆ, ಅದು ಹ್ರಸ್ವವಾಗುವದು; ओ, औಕಾರಗಳ ಹ್ರಸ್ವವು उಕಾರವೂ, ए, ऐಕಾರಗಳ ಹ್ರಸ್ವವು इಕಾರವೂ ಎಂದು ತಿಳಿಯಬೇಕು. ಉದಾ: द्विखारि (द्वि ಮತ್ತು खारी ಧಾನ್ಯ ಅಳೆಯುವದೊಂದು ಮಾಪು).

प्रयागे चतुरहमुषित्वा काशीपथमुपययावुद्दालकः ।

रविवासरस्य चरमरात्रे संसाराङ्गारतप्तः कश्चित्पुरुषश्चिच्छेदात्मनः शिरः ।

आश्विनस्याद्ये नवरात्रे दुर्गाया महोत्सवः क्रियते ।

ननु प्रभाता रजनी । तच्छीघ्रं शयनं परित्यजामि । अथवा लघुलघूत्थितापि किं करोमि । न मे दुःखादुचितेषु प्रभातकरणीयेषु हस्तपादं प्रसरति ।

अस्मिन्कलौ खलोत्सृष्टदुष्टवाग्बाणदारुणे ।
कथं जीवेज्जगन्न स्युः संनाहाः सज्जना यदि ॥
इज्याध्ययनदानानि तपः सत्यं धृतिः क्षमा ।
अलोभ इति मार्गोऽयं धर्मस्याष्टविधः स्मृतः ॥
रोगशोकपरीतापबन्धनव्यसनानि च ।
[1]आत्मापराधवृक्षाणां फलान्येतानि देहिनाम् ॥
[2]सुखदुःखे समे कृत्वा लाभालाभौ जयाजयौ ।
ततो युद्धाय युज्यस्व नैवं पापमवाप्स्यसि॥
धर्मार्थकाममोक्षाणां यस्यैकोपि न विद्यते ।
अजागलस्तनस्येव तस्य जन्म निरर्थकम् ॥

यदेतदनुमरणं नाम तदतिनिष्फलम् । अविद्वज्जनाचरित एष मार्गो मोहविलसितमेतदज्ञानपद्धतिरियं रभसाचरितमिदं क्षुद्रदृष्टिरेषातिप्रमादोऽयं मौर्ख्यस्खलितमिदं यदुपरते पितरि भ्रातरि सुहृदि भर्तरि वा प्राणाः परित्यज्यन्ते । स्वयं चेन्न जहति न परित्याज्याः । अत्र हि विचार्यमाणे स्वार्थ एव प्राणपरित्यागोऽयमसह्यशोकवेदनाप्रतीकारत्वादात्मनः । उपरतस्य तु न कमपि गुणमावहति । न तावत्तस्यायं प्रत्युज्जीवनोपायो न धर्मोपचयकारणं न शुभलोकोपार्जनहेतुर्ननिरयपातप्रतीकारो न दर्शनोपायो न परस्परसमागमनिमित्तम् । अन्यामेवस्वकर्मफलपरिपाकोपचितामसाववशो नीयते भूमिमसावप्यात्मघातिनः केवलमेनसा संयुज्यते ।

ನಮ್ಮ ಗುರು ನಮಗೆ ಹದಿನೈದು ದಿವಸಗಳಲ್ಲಿ[3] ಎಂಟು ಸಾರಿ ಕಲಿಸುತ್ತಾನೆ.

ಯಾಜ್ಞಿಕರು ಆರು ದಿವಸದಲ್ಲೊಂದು ಅಗ್ನಿಷ್ಟೋಮಯಾಗವನ್ನು ಮಾಡುತ್ತಾರೆ.

---

1) ವ್ಯಂಜನಾಂತ ಶಬ್ದಗಳಿಗೆ ವ್ಯಂಜನಾದಿ ವಿಭಕ್ತಿಪ್ರತ್ಯಯಗಳು ಪರವಾಗಲು ಆಗುವ ಸಂಧಿ ಕಾರ್ಯಗಳೇ ಸಮಾಸದೊಳಗಿನ ಪೂರ್ವಪದಗಳಾದ ವ್ಯಂಜನಾಂತ ಶಬ್ದಗಳಿಗಾಗುತ್ತವೆ. ಉದಾ: आत्मन् + अपराध = आत्म + अपराध = आत्मापराध, विद्वस् + रत्न = विद्वद्रत्न.

2) ಕಾಳಗ ಮಾಡಲಿಕ್ಕೆ ಮನಸ್ಸಿಲ್ಲೆಂದು ಅರ್ಜುನನು ಅಂದದ್ದು ಕೇಳಿ ಕೃಷ್ಣನು ಆತನಿಗೆ ಬೋಧಿಸಿದ್ದನ್ನು ಈ ಶ್ಲೋಕದಲ್ಲಿ ಹೇಳಿರುತ್ತದೆ.

3) ಕೆಳಗೆ ಗೆರೆ ಎಳೆದ ಶಬ್ದಗಳನ್ನೆಲ್ಲ ಕೂಡಿಸಿ ಒಂದು ಸಮಾಸಪದವನ್ನು ಪ್ರಯೋಗಿಸಬೇಕು.

ರಾಮನ ಪರಾಕ್ರಮದ ಕೀರ್ತಿಯು ಏಳು ಮೇಲಿನ ಲೋಕಗಳಲ್ಲಿಯೂ ಏಳು ಕೆಳಗಿನ ಲೋಕಗಳಲ್ಲಿಯೂ ಹೊಗಳಲ್ಪಟ್ಟಿತು.

ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಜಾತಿಗಳ ಆಚರಣಗಳು ಮನು, ಯಾಜ್ಞವಲ್ಕ್ಯ, ಅಶಿತ ಎಂಬವರ ಸ್ಮೃತಿಗಳಲ್ಲಿ ಹೇಳಲ್ಪಟ್ಟವೆ.

ಸುಗ್ರೀವನೂ ರಾಮನೂ ಒಬ್ಬರಿಗೊಬ್ಬರು ಸಹಾಯ ಮಾಡಬೇಕೆಂಬ ಸಂಕೇತದಿಂದ ಸ್ನೇಹದ ಒಡಂಬಡಿಕೆಯನ್ನು ಮಾಡಿಕೊಂಡರು.

ರಘುರಾಜನು ತನ್ನ ದೊಡ್ಡ ದಳದೊಡನೆ ಪೂರ್ವಸಮುದ್ರಕ್ಕೆ ಹೋಗುತ್ತಿರಲಾಗಿ ಶಿವನ ಜಟೆಯಿಂದ ಬಿದ್ದ ಭಾಗೀರಥಿಯನ್ನು ಒಯ್ಯುವ ಭಗೀರಥರಾಜನಂತೆ ತೋರಿದನು.

ಈ ಬಗೆಯಾಗಿ ಪೂರ್ವದೇಶಗಳನ್ನು ದಾಟಿ ಆ ದೊಡ್ಡ ವೀರನು ತಾಳೀಮರಗಳ ಬನದಿಂದ ಕಪ್ಪಾದ ದೊಡ್ಡ[1] ಕಡಲದಂಡೆಗೆ ತಲ್ಪಿದನು.

ಯುದ್ಧಹಡಗಗಳಿಂದ ಹೆಮ್ಮೆ ತೋರಿಸುವ ವಂಗ ದೇಶದವರನ್ನು ದಿಕ್ಕೆಟ್ಟು ಓಡಿಸಿ ಅವನು ಭಾಗೀರಥಿಯ ಶಾಖೆಗಳ ನಡುವೆ ಗೆಲುವಿನ ಕಂಬಗಳನ್ನು ನಿಲ್ಲಿಸಿದನು.

ವಜ್ರದಿಂದ ರೆಕ್ಕೆಗಳನ್ನು ಕಡಿಯಲುದ್ಯುಕ್ತನಾದ ಇಂದ್ರನನ್ನು ಪರ್ವತಗಳು ಕಲ್ಲಿನಿಂದ ಆದರಿಸಿದಂತೆ ಕಲಿಂಗದ ಅರಸು ಅವನನ್ನು ಕೈದುಗಳಿಂದ ಎದುರುಗೊಂಡನು.

ಸೆರೆಯಲ್ಲಿ ಸಿಕ್ಕು ಬಿಡುಗಡೆ ಹೊಂದಿದ ಮಹೇಂದ್ರದ ಅರಸನ ಸಂಪತ್ತಿಯನ್ನು ಮಾತ್ರ ಆ ಜಯಶಾಲಿಯು ಒಯಿದನು, ಭೂಮಿಯನ್ನು ಒಯ್ಯಲಿಲ್ಲ.

ಸಮುದ್ರವು ಪರಶುರಾಮನ ಬಾಣದಿಂದ ದೂರ ಹಿಮ್ಮೆಟ್ಟಿಸಿದ್ದಾಗ್ಯೂ, ಆ ದಳವಾಯಿಯ (ಸಮುದ್ರದಿಂದ ಬೆಟ್ಟದ ವರೆಗೆ ಹಬ್ಬಿದ) ಸೈನ್ಯದಿಂದ ಸಹ್ಯಾದ್ರಿ ಬೆಟ್ಟಕ್ಕೆ ಕೂಡಿದ ಹಾಗೆ ತೋರಿತು.

---

## ಕೋಶ ೧೯.

अग्निष्टोम (ಪು.) ಒಂದು ವಿಧದ ಯಜ್ಞ.

अङ्गार (ಪು. ನ.) ಕೆಂಡ.

अजा (ಸ್ತ್ರೀ.) ಹೆಣ್ಣುಗುರಿ, ಮೇಕೆ.

अतिनिष्फल (ವಿ.) ತೀರ ವ್ಯರ್ಥವಾದ.

अतिप्रमाद (ಪು.) ದೊಡ್ಡ ತಪ್ಪು, ಬಹಳ ದುರ್ಲಕ್ಷ್ಯ.

---

1) ಕರ್ಮಧಾರಯ ಬಹುವ್ರೀಹಿ ಸಮಾಸಗಳಲ್ಲಿ ಪೂರ್ವಪದವಾದ महत् ಶಬ್ದಕ್ಕೆ महा ಆದೇಶವಾಗುವದು.

अनुमरण (ನ.) ಸತ್ತವರ ಸಂಗಡಲೇ ಸಾಯೋಣ, (ಸತಿ ಹೋಗುವುದು).

अर्णव (ಪು.) ಸಮುದ್ರ.

अलाभ (ಪು.) ಹಾನಿ, ನಷ್ಟ, ಲುಕಸಾನು.

अलंभ (ಪು.) ತೃಪ್ತಿ, ಸಮಾಧಾನ.

अवश (ವಿ.) ಪರಾಧೀನ, ದಿಕ್ಕಿಲ್ಲದ, ಗತಿಯಿಲ್ಲದ.

असह्य (ವಿ.) ಸಹಿಸಕೂಡದ, ತಾಳಲಾರದ.

आचरित (ವಿ.) ಮಾಡಿದ, ರೂಢಿ ಮಾಡಿದ; (ನ.) ಚಟ, ಅಭ್ಯಾಸ, ಪದ್ಧತಿ.

आत्मघातिन् (ವಿ.) ಆತ್ಮಘಾತಕಿ, ತನ್ನ ಘಾತ ತಾನೇ ಮಾಡಿಕೊಳ್ಳುವವ.

उत्सृष्ट (ವಿ.) ಬಿಟ್ಟ.

उद्दालक (ಪು.) ಒಬ್ಬ ಮನುಷ್ಯನ ಹೆಸರು.

उपचय (ಪು.) ಸಂಗ್ರಹ, ಸಂಗ್ರಹಿಕೆ.

उपचित (ವಿ.) ಸಂಗ್ರಹಿಸಿದ, ಕೂಡಹಾಕಿದ.

उपरत (ವಿ.) ಸತ್ತ, ನಿಂತ.

एनस् (ನ.) ಪಾಪ, ಪಾತಕ.

करणीय (ನ.) ಮಾಡತಕ್ಕಂಥಾದ್ದು, ಕರ್ತವ್ಯ ಕರ್ಮ.

कलि (ಪು.) ಕಲಿಯುಗ (ಈಗ ನಡಿಯುವ ಯುಗ).

गल (ಪು.) ಕೊರಳು.

गुण (ಪು.) ಹಿತ, ಲಾಭ.

चरम (ವಿ.) ಕಡೆಯು.

जय (ಪು.) ಸಿದ್ಧಿ, ಗೆಲುವಿಕೆ.

देहिन् (ವಿ.) ಶರೀರವುಳ್ಳ; (ಪು.) ಮನುಷ್ಯ, ಆತ್ಮ.

निरय (ಪು.) ನರಕ.

निरर्थक (ವಿ.) ವ್ಯರ್ಥ.

पद्धति (ಸ್ತ್ರೀ.) ರೀತಿ, ಮಾರ್ಗ.

परित्याज्य (ವಿ.) ಬಿಡತಕ್ಕ, ಹೀನ.

परिपाक (ಪು.) ಸಂಪೂರ್ಣತೆ, ಪಕ್ವದಶೆ.

परीताप (ಪು.) ಖೇದ, ಪಶ್ಚಾತ್ತಾಪ.

पात (ಪು.) ಬೀಳೋಣ, ಕ್ಷಯ.

प्रतिकार, प्रतीकार (ಪು.) ಕೇಡಿಗೆ ಮದ್ದು, ಉಪಾಯ.

प्रत्युज्जीवन (ನ.) ಬದುಕಿಸೋಣ, ತಿರಿಗಿ ಜೀವಕಳೆ ಏರೋಣ.

प्रभात (ವಿ.) ಕತ್ತಲೆ ಹೋಗಿ ಬೆಳಕಾದ, ಬೆಳಗಿದ; (ನ.) ಮುಂಜಾವು.

मूल (ನ.) ಪಾಯಾ, ಬೇರು.

मोह (ಪು.) ಭ್ರಾಂತಿ, ಮರುಳು.

रभस (ಪು.) ಅವಸರ, ಆತುರತೆ, ಅವಿಚಾರ.

रोग (ಪು.) ಬೇನೆ.

लघुलघु (ಅ.) ತೀವ್ರವಾಗಿ.

लाभ (ಪು.) ಸಂಪಾದನೆ, ನಫೆ.

वङ्गाः (ಪು. ನಿತ್ಯ ಬಹುವಚನದಲ್ಲಿ) ಒಂದು ದೇಶದ ಜನ, ಅಥವಾ ಅವರ ದೇಶ.

वह् (आ ಪೂರ್ವಕ, ೧ನೇ ಗ. ಪ. ಅ.) ತಾ, ತರೋಣ.

वासर (ಪು. ನ.) ದಿವಸ.

विचार्यमाण (ವಿ.) ವಿಚಾರಿಸಲ್ಪಡುವ.

विलसित (ನ.) ಕಿಡಿಗೇಡಿತನ, ಚೇಷ್ಟೆ.

वेदना (ಸ್ತ್ರೀ.) ವ್ಯಥೆ, ಬೇನೆ.

सन्नाह (ಪು.) ಕವಚ, ಚಿಲಖತು.

संसार (ಪು.) ಪ್ರಪಂಚ.

स्खलित (ನ.) ತಪ್ಪು, ಜಾರುವಿಕೆ.

स्तन (ಪು.) ಮೊಲೆ, ಕುಚಾಗ್ರ.

स्तम्भ (ಪು.) ಕಂಬ.

स्वकर्तव्य (ನ.) ತನ್ನ ಕೆಲಸ, ತನ್ನ ಧರ್ಮ.

---

ಒಕ್ಕಟ್ಟು, ಒಪ್ಪಂದ, ಒಡಂಬಡಿಕೆ सन्धि (ಪು.), सख्य (ನ.).

ಒತ್ತಾಸೆ साहाय्य (ನ.).

ಸೆರೆಹಿಡಿದ गृहीत (ವಿ.).

ಕಂಬ स्तम्भ (ಪು.).

ಗೆಲುವಿಕೆಯ ಕಂಬ जयस्तम्भ (ಪು.).

ಗೆಲುವವ, ಜಯವನ್ನು ಬಗೆಯುವ विजिगीषु (ಪು.).

ಕಡಿಯೋಣ क्रोड (ಪು.).
ಕಪ್ಪಾದ श्याम (ವಿ.).
ಪೂರ್ವದ पूर्व (ವಿ.) प्राच्य (ವಿ.).
ಪರಾಕ್ರಮ पराक्रम (ಪು.), अद्भुतचरित (ನ.).
ನೌಕಾಬಲ नौसाधन (ನ.).
ಸೊಕ್ಕಿನ, ಗರ್ವಿಷ್ಠ, ಅಭಿಮಾನವುಳ್ಳ, उद्धत (ವಿ.).
ಪತಿ, ಧನಿ, ಯಜಮಾನ नाथ (ಪು.).
ಮಹೇಂದ್ರ महेन्द्र [ಒಂದು ಪರ್ವತದ ಹೆಸರು ಮತ್ತು ಆದರ ಸಮೀಪದ ದೇಶದ ಹೆಸರು] (ಪು.).
ದೊಡ್ಡ ಸಮುದ್ರ, ಮಹಾಸಾಗರ अर्णव (ಪು.).
ಪಾತಾಳ पाताल (ನ.).
ತಯಾರಮಾಡಿದ, ಸಿದ್ಧಮಾಡಿದ उद्यत (ವಿ.), (उद् + यम् ಧಾ. ಭೂ. ಕೃ.).
ದೂರ ನೂಕಿಸಿದ दूरोत्सारित (ವಿ.), उत्सारित (ವಿ.).
ನಡುವಿನ ಭೂಮಿ अन्तराल (ನ.), अन्तर (ನ.).
ಬಿಡುಗಡೆ ಹೊಂದಿದ, ಬಿಡಲ್ಪಟ್ಟ मुक्त (ವಿ.)
ಪ್ರವಾಹ स्रोतस् (ನ.).
ತಾಲೀ ಮರ तालीं (ಸ್ತ್ರೀ.), ಒಂದು ತರದ ತಾಡ ಜಾತಿಯು ಗಿಡ.
ಹತ್ತಿದ, ಹೊಂದಿದ लग्न (ವಿ.).
ಹಾದು ಹೋಗು, ತಿರುಗಾಡು आ + क्रम् (೧ನೇ ಮತ್ತು ४ನೇ ಗ. ಪ.).
ರೆಕ್ಕೆ पक्ष (ಪು.).

## ೨೦ನೇ ಪಾಠ.

### ಬಹುವ್ರೀಹಿ ಅವ್ಯಯೀಭಾವ ಸಮಾಸಗಳು.

(ಕ) ಬಹುವ್ರೀಹಿ.—೧. ಒಂದನ್ನೊಂದು ವಿಶೇಷಿಸುವ ಎರಡು ಅಥವಾ ಹೆಚ್ಚು ಪದಗಳು ಗುಣವಾಚಕಪದವನ್ನು ಪೂರ್ವಪದಸ್ಥಾನದಲ್ಲಿ ಸೇರಿಸಿಕೊಂಡು ಒಂದಕ್ಕೊಂದು ಕೂಡಿ ಸಮಾಸವಾಗಿ ಬೇರೊಂದು ನಾಮದ ವಿಶೇಷಣಗಳಾಗುವವು. ಆದರೆ ಆ ಸಮಾಸದ ಯಾವ ಅವಯವವಾದರೂ ಪ್ರತ್ಯೇಕವಾಗಿ ಆ ನಾಮವನ್ನು ವಿಶೇಷಿಸುವದಿಲ್ಲ. ಅಂಥ ಸಮಾಸಕ್ಕೆ ಬಹುವ್ರೀಹಿಸಮಾಸವೆಂದು ಹೆಸರು. ಉದಾ: महाबाहुः, पीताम्बरः. ಕರ್ಮಧಾರಯಕ್ಕೆ महाबाहुः = महान् बाहुः ದೊಡ್ಡ ಬಾಹು, ಉದ್ದವಾದ ಕೈ. ಬಹುವ್ರೀಹಿಗೆ महाबाहुः = महान् बाहुः यस्य ಉದ್ದ ಕೈಯುಳ್ಳವ. ಅದೇ ಮೇರೆಗೆ पीताम्बरः = पीतं अम्बरं यस्य ಹಳದೀ ವಸ್ತ್ರವುಳ್ಳವ.

महान्बाहुर्यस्य सः = महाबाहुर्नलः. ಇದರಲ್ಲಿ बाहु ಶಬ್ದವಾಗಲಿ महत् ಶಬ್ದವಾಗಲಿ नल ನನ್ನು ವಿಶೇಷಿಸುವದಿಲ್ಲ; ಆದರೆ ಅವೆರಡೂ ಶಬ್ದಗಳು ಕೂಡಿ ಆದ ಸಮಾಸವು नल ನನ್ನು ವಿಶೇಷಿಸುತ್ತದೆ. घनश्यामो नलः ಎಂಬಲ್ಲಿ श्यामः ಎಂಬ ಪದವು नल ನನ್ನು ವಿಶೇಷಿಸುತ್ತದೆ. ಆದದರಿಂದ ಅದು ಬಹುವ್ರೀಹಿಸಮಾಸವಲ್ಲ. ಆ ಕಾರಣ ವಿಗ್ರಹ ಮಾಡುವಾಗ यत् ಶಬ್ದಕ್ಕೆ ಪ್ರಥಮೇತರ ವಿಭಕ್ತಿ ಬರುವಂಥ

ಸಮಾಸವು ಬಹುವ್ರೀಹಿ ಎಂದು ಹೇಳಬಹುದು. ಉದಾ: प्राप्तमुदकं यम् = प्राप्तोदको ग्रामः, बह्वचो नद्यो यस्मिन् = बहुनदीको देशः.

೨. ಬಹುವ್ರೀಹಿಸಮಾಸದಲ್ಲಿ ಒಮ್ಮೊಮ್ಮೆ ಪೂರ್ವಪದವು ಪರಪದವನ್ನು ವಿಶೇಷಿಸುವದಿಲ್ಲ, ಅಂದರೆ ಪರಪದದ ವಿಭಕ್ತಿಯುಳ್ಳದ್ದಾಗಿ ಅದರ ಲಕ್ಷಣವನ್ನು ಹೇಳುವದಿಲ್ಲ. ಉದಾ: [1] चक्रपाणिः = चक्रं पाणौ यस्य ಕೈಯಲ್ಲಿ ಚಕ್ರವುಳ್ಳವ.

೩. ಉಪಮಾನಾರ್ಥದಲ್ಲಿ ಪೂರ್ವಪದವು ಬಹುಶಃ ಷಷ್ಠೀವಿಭಕ್ತ್ಯರ್ಥವುಳ್ಳದ್ದಿರುತ್ತದೆ. ಉದಾ: चंद्रकान्तिः = चन्द्रस्येव कान्तिर्यस्य. ತತ್ಪುರುಷಸಮಾಸದಲ್ಲಿ चन्द्रकान्तिः = चन्द्रस्य कान्तिः ಆಗುವದು.

೪. ನಿಷೇಧಾರ್ಥಕ अ, अन् ಶಬ್ದಗಳೂ ಕೆಲವು ಶಬ್ದಯೋಗೀ ಅವ್ಯಯಗಳೂ ನಾಮಪದಗಳೊಡನೆ ಕೂಡಿದರೆ, ಬಹುವ್ರೀಹಿಸಮಾಸವಾಗುವದು. ಉದಾ: अविद्यमानः पुत्रो यस्य सः = अपुत्रः; निर्गता घृणा यस्य सः = निर्घृणः (ಮುಂದೆ ಬರುವ ೧೦ನೇ ನಿಯಮ ನೋಡು); विगतं जीवितं यस्य सः = विजीवितः; उद्गता कन्धरा यस्य सः = उत्कन्धरः ಇತ್ಯಾದಿ. ಸಾಮಾನ್ಯ ನಿಯಮಕ್ಕನುಸರಿಸಿ अविद्यमानपुत्रः, निर्गतघृणः ಎಂಬ ರೂಪಗಳೂ ಆಗುತ್ತವೆ.

೫. ದಿಗ್ಭಾಗವಾಚಕಶಬ್ದಗಳ ಸಮಾಸಗಳು ಇದೇ ವರ್ಗದವು. ಅವು ನಿರ್ದಿಷ್ಟ ಬಿಂದುಗಳ ನಡುವಿನ ದಿಗ್ಬಿಂದುವನ್ನು ಹೇಳುತ್ತವೆ. ಉದಾ: उत्तरपूर्वा ಈಶಾನ್ಯ. ದಿಗ್ವಾಚಕನಾಮಗಳು ಸರ್ವನಾಮಗಳಂತೆ ನಡಿಯುತ್ತವೆ; ಆದರೆ ಅವು ಸಮಾಸಾವಯವಗಳಾದಾಗ ವಿಕಲ್ಪದಿಂದ ಸರ್ವನಾಮಗಳಂತೆ ನಡಿಯುವವು.

೬. स ಅಥವಾ सह ಶಬ್ದವು ನಾಮಪದಕ್ಕೆ ಕೂಡಿ ಆದ ಸಮಾಸವು ಗುಣವಾಚಕವಾದರೆ, ಬಹುವ್ರೀಹಿ ಎನಿಸುವದು. ಉದಾ: देवदत्तः सहपुत्रो ग्रामं गतः.

೭. ಸಂಖ್ಯಾವಾಚಕಗಳು, ಅವ್ಯಯಗಳು, ಇಲ್ಲವೆ आसन्न, अदूर, अधिक ಶಬ್ದಗಳು ಸಂಖ್ಯಾವಾಚಕಗಳಿಗೆ ಕೂಡಿ ಆಗುವ ಸಮಾಸಗಳೆಲ್ಲ ಬಹುವ್ರೀಹಿಸಮಾಸಗಳು. ಈ ಸಮಾಸಗಳಲ್ಲಿ ಪರಪದದ ಅಂತ್ಯ ಸ್ವರಕ್ಕೆ, ಅಂತ್ಯಸ್ಥಾನದಲ್ಲಿ ಸ್ವರವಿಲ್ಲದಿದ್ದರೆ, ಅಂತ್ಯ ವ್ಯಂಜನಕ್ಕೆ ಹಾಗೂ ಅದರ ಹಿಂದಿನ ಸ್ವರಕ್ಕೆ ಲೋಪ ಬಂದು ಆ ಸ್ಥಾನದಲ್ಲಿ अಕಾರ ಬರುವದು; ಸಮಾಸದ ಕೊನೆಯಲ್ಲಿ विंशति ಶಬ್ದವಿದ್ದರೆ, ಅದಕ್ಕೆ विंश ಆದೇಶವಾಗುವದು. ಉದಾ: द्वित्राः ಎರಡು ಅಥವಾ ಮೂರು; द्विदशाः ಎರಡು ಹತ್ತು, उपदशाः ಸುಮಾರು ಹತ್ತು, ಅಂದರೆ ಒಂಬತ್ತು ಇಲ್ಲವೆ

---

[1] महाबाहु ಎಂಬ ಸಮಾಸದಲ್ಲಿ महान् ಇದು बाहु ಶಬ್ದವನ್ನು ವಿಶೇಷಿಸುತ್ತದೆ. ಆದರಂತೆ चक्र ಶಬ್ದವು पाणि ಶಬ್ದವನ್ನು ವಿಶೇಷಿಸುವದಿಲ್ಲ. चक्रपाणि ಮುಂತಾದ ಸಮಾಸಗಳಿಗೆ ವ್ಯಧಿಕರಣ ಬಹುವ್ರೀಹಿಯಂತಲೂ महाबाहु ಮುಂತಾದ ಸಮಾಸಗಳಿಗೆ ಸಮಾನಾಧಿಕರಣ ಬಹುವ್ರೀಹಿಯಂತಲೂ ಅನ್ನುವರು.

ಹನ್ನೊಂದು; आसन्नविंशाः ಅಜಮಾಸು ಇಪ್ಪತ್ತು; अदूराविंशाः ಸರಾಸರಿ ಮೂವತ್ತು: अधिकचत्वारिंशाः ನಾಲ್ವತ್ತಕ್ಕಿಂತ ಹೆಚ್ಚು. चतुर् ಶಬ್ದದ ಪೂರ್ವದಲ್ಲಿ उप ಅಥವಾ त्रि ಶಬ್ದವಿದ್ದರೆ, ಮೇಲಿನ ಕಾರ್ಯವಾಗುವದಿಲ್ಲ. ಆದರೆ ಅಂತ್ಯದಲ್ಲಿ अ ಪ್ರತ್ಯಯ ಮಾತ್ರ ಬರುವದು. ಉದಾ: उपचतुराः ಸುಮಾರು ನಾಲ್ಕು; त्रिचतुराः ಮೂರು ಅಥವಾ ನಾಲ್ಕು.

ನಿಯಮ ೫—೭ರಲ್ಲಿ ಹೇಳಿದ ಸಮಾಸಗಳನ್ನು ವಾಡಿಕೆಯಾಗಿ ಕೆಳಗೆ ಹೇಳಿದಂತೆ ಬಿಡಿಸುತ್ತಾರೆ:—

उत्तरस्याः पूर्वस्याश्च दिशोऽन्तरालम् = उत्तरपूर्वा । पुत्रेण सह = सहपुत्रः । द्वौ वा त्रयो वा = द्वित्राः । द्विरावृत्ता दश = द्विदशाः । दशानां समीपे ये सन्ति ते = उपदशाः विंशतेरासन्नाः = आसन्नविंशाः ।

೮. ಬಹುವ್ರೀಹಿಸಮಾಸದ ಕಡೆಯಲ್ಲಿ ऋಕಾರಾಂತ ನಾಮಗಳು ಇಲ್ಲವೆ ಈ, ಊಕಾರಾಂತ ಸ್ತ್ರೀಲಿಂಗ ನಾಮಗಳು ಇದ್ದರೆ, ಅವುಗಳ ಮುಂದೆ क ಪ್ರತ್ಯಯ ಬರುತ್ತದೆ. ಉದಾ: ईश्वरः कर्ता यस्य तत् = ईश्वरकर्तृकं जगत्; बह्वयो नद्यो यस्मिन्सः = बहुनदीको देशः; रूपवद्वधूकः. ಸ್ವರಾದಿ ವಿಭಕ್ತಿಪ್ರತ್ಯಯಗಳು ಪರವಾಗಲು ಈ, ಊಕಾರಗಳಿಗೆ इय्, उव् ಆದೇಶಗಳಾಗುವಂಥ ಈ, ಊಕಾರಾಂತ ಸ್ತ್ರೀಲಿಂಗ ನಾಮಗಳು ಕಡೆಯಲ್ಲಿದ್ದರೆ, क ಪ್ರತ್ಯಯವು ಬರುವದಿಲ್ಲ; स्त्री ಶಬ್ದವಿದ್ದರೆ ಮಾತ್ರ, क ಪ್ರತ್ಯಯವು ಬರುವದು. ಉದಾ: सुन्दरस्त्रीको देशः.

೯. (ಅ) ಬಹುವ್ರೀಹಿಯ ಕಡೆಯಲ್ಲಿ अक्षि, धनुस् ಶಬ್ದಗಳಿದ್ದರೆ, ಅವು अक्ष, धन्वन् ಎಂಬ ರೂಪಗಳನ್ನು ಹೊಂದುತ್ತವೆ. ಉದಾ: कमलाक्षः ಕಮಲದೋಪಾದಿಯಲ್ಲಿ ಕಣ್ಣುಳ್ಳವ; अधिज्यधन्वा ಹೆದೆ ಏರಿಸಿದ ಬಿಲ್ಲುಳ್ಳವ.

(ಬ) ಕಡೆಯಲ್ಲಿ गन्ध ಶಬ್ದವಿದ್ದು ಪೂರ್ವಪದವು ಉಪಮಾನಾರ್ಥಕವಿದ್ದರೆ, ಅಥವಾ गन्ध ಶಬ್ದದ ಹಿಂದೆ उद्, पूति, सु, सुरभि ಶಬ್ದಗಳಿದ್ದರೆ, ಆ गन्ध ಶಬ್ದವು गन्धि ಎಂಬ ರೂಪವನ್ನು ಹೊಂದುತ್ತದೆ. ಉದಾ: उद्गन्धि, सुगन्धि, पद्मगन्धि ಇತ್ಯಾದಿ.

(ಕ) धर्म ಶಬ್ದದ ಹಿಂದೆ ಒಂದೇ ಶಬ್ದವಿದ್ದರೆ, ಆ धर्म ಶಬ್ದವು धर्मन् ಎಂಬ ರೂಪವನ್ನು ಹೊಂದುತ್ತದೆ. ಉದಾ: क्रूरधर्मन्.

(ಡ) ಕಡೆಯ ಪದಕ್ಕೆ ಮೇಲೆ ಹೇಳಿದಂತೆ ಏನೂ ಹೆಚ್ಚು ಕಡಮೆಯಾಗದಿದ್ದಲ್ಲಿ ೫ನೇ ೬ನೇ ೭ನೇ ನಿಯಮಗಳಲ್ಲಿ ಹೇಳಿದ ಸಮಾಸಗಳನ್ನು ಬಿಟ್ಟು ಉಳಿದ ಸಮಾಸಗಳ ಕಡೆಯಲ್ಲಿ क ಪ್ರತ್ಯಯವು ವಿಕಲ್ಪದಿಂದ ಬರುವದು. ಉದಾ: अध्ययननिमित्तको मे वासोऽस्मिन्ग्रामे.

೧೦. ಬಹುವ್ರೀಹಿಸಮಾಸದ ಕಡೆಯ गो ಶಬ್ದದ ಓಕಾರವೂ, क ಪ್ರತ್ಯಯವು ಬಾರದಿದ್ದರೆ ಆಕಾರಾಂತ ಸ್ತ್ರೀಲಿಂಗನಾಮಗಳ ಆಕಾರವೂ ಹ್ರಸ್ವವಾಗುತ್ತವೆ. ಉದಾ: चित्रा गावो यस्य सः=चित्रगुः; लक्ष्मीर्भार्या यस्य सः=लक्ष्मीभार्यः. क ಪ್ರತ್ಯಯದ ಹಿಂದಿನ ಆಕಾರವು ವಿಕಲ್ಪದಿಂದ ಹ್ರಸ್ವವಾಗುವದು. ಉದಾ: लक्ष्मीभार्याकः ಅಥವಾ लक्ष्मीभार्यकः.

(ಡ) ಅವ್ಯಯೀಭಾವಸಮಾಸ.—(೧) ಶಬ್ದಯೋಗೀ ಅವ್ಯಯಗಳು ಇಲ್ಲವೆ ಕ್ರಿಯಾವಿಶೇಷಣಗಳು ನಾಮಪದಗಳಿಗೆ ಕೂಡಿ ಆದ ಸಮಾಸಗಳಿಗೆ ಅವ್ಯಯೀಭಾವಸಮಾಸಗಳೆಂದು ಹೆಸರು.

(ಅ) ಈ ಕ್ರಿಯಾವಿಶೇಷಣಾತ್ಮಕಸಮಾಸಗಳು ನಪುಂಸಕ ದ್ವಿತೀಯಾ ಏಕವಚನಾಂತಗಳೆಂದು ತಿಳಿಯತಕ್ಕದ್ದು.

(ಬ) ಅಕಾರಾಂತ ಅವ್ಯಯೀಭಾವಸಮಾಸಗಳು ಒಮ್ಮೊಮ್ಮೆ ತೃತೀಯಾ ಸಪ್ತಮಿಗಳ ಏಕವಚನಪ್ರತ್ಯಯಗಳನ್ನು ಧರಿಸುತ್ತವೆ.

(ಕ) ಈ ಸಮಾಸದ ಕಡೆಯಲ್ಲಿ ದೀರ್ಘಸ್ವರವಿದ್ದರೆ, ಅದು ಹ್ರಸ್ವವಾಗುವದು (ಪುಟ ೧೬೭, ನಿಯಮ ೧೦ ನೋಡು).

(ಡ) न् ಇದ್ದರೆ ಅದಕ್ಕೆ ಲೋಪ ಬರುವದು; ಕಡೆಯಲ್ಲಿ ನಪುಂಸಕನಾಮಪದವಿದ್ದರೆ, ಈ ಕಾರ್ಯವು ವಿಕಲ್ಪದಿಂದಾಗುವದು. ಉದಾ: हराविति=अधिहरि ಹರಿಯಲ್ಲಿ; विष्णोः पश्चात्,=अनुविष्णु ವಿಷ್ಣುವಿನ ಹಿಂದೆ, ವಿಷ್ಣುವನ್ನು ಅನುಸರಿಸಿ; गङ्गायाः समीपम्=उपगङ्गम् ಗಂಗೆಯ ಬಳಿಯಲ್ಲಿ; गङ्गामन्वायतम्=अनुगङ्गम् ಗಂಗೆಯ ಗುಂಟ, ಗಂಗಾ ತೀರದಲ್ಲಿ; शक्तिमनतिक्रम्य=यथाशक्ति ಶಕ್ತಿಯಂತೆ; आत्मनीति=अध्यात्मम् ಆತ್ಮದಲ್ಲಿ; अहन्यहनीति=प्रत्यहं ಅಥವಾ प्रत्यह ದಿನದಿನ, ಪ್ರತಿ ದಿವಸ; तृणमप्यपरित्यज्य=सतृणम् ಹುಲ್ಲು ಸಹಿತವಾಗಿ.

स्नेहरूपस्तन्तुर्मनुजानां हृदयमर्माणि सीव्यति ।

भार्याया यद्यदिष्टं तत्तदधिज्यधन्वनस्तस्य भूपतेर्नासाध्यं किंचिदासीत् ।

प्रतिदिनं त्र्यम्बकं यथाविधि पूजयामि यावदवकाशं ग्रन्थानवलोकयाम्यामध्याह्नसमयमक्षमालां गृहीत्वा जपामि ।

त्रिचतुराण्यहान्यस्मिन्मे गृहे वस्तुं त्वमर्हसि यावत्तवार्थसिद्धिं करोमि ।

आसन्नपञ्चाशा गा ब्राह्मणेभ्योऽददाद्यज्ञवर्मा श्रावणस्य प्रथमे सोमवासरे ।

चिरप्रवृत्त एष मृतस्य पुनर्जीवप्रदाने पन्थाः । तथाहि । विश्वावसुना गन्धर्वराजेन मेनकायामुत्पन्नां प्रमद्वरां नाम कन्यामाशीविषविलुप्तजीवितां स्थूलकेशाश्रमे भार्गवस्य नप्ता प्रमतितनयो मुनिकुमारको रुरुर्नाम स्वायुषोऽर्धेन योजितवान् ।

अर्जुनं चाश्वमेधतुरगानुसारिणमात्मजेन बभ्रुवाहननाम्ना समरशिरसि शरापहृतप्राणमुलूपी नाम नागकन्यका सोच्छ्वासमकरोत् ।

अभिमन्युतनयं च परिक्षितमश्वत्थामास्त्रपावकपरिप्लुष्टमुदरादुपरतमेव निर्गतमुत्तराप्रलापोपजनितकृपो भगवान्वासुदेवो दुर्लभानसून्प्रापितवान् ।

[1] यान्येव सुरभिकुसुमधूपानुलेपनादीनि चन्द्रापीडसमागमसुखोपभोगायानीतानि तैरेव मृते तस्मिन्देवतोचितामपचितिं संपाद्य चन्द्रापीडमूर्तौ मूर्तिमतीव शोकवृत्तिरार्तरूपा रूपान्तरमिव तत्क्षणेनैवोपगता गतजीवितेव शून्यमुखी मुखावलोकिनी चन्द्रापीडस्य पीडोत्पीडितहृदयापि रक्षन्ती बाष्पमोक्षमुद्दामवृत्तेः शोकादपि मरणादपि च कष्टतमामवस्थामनुभवन्ती तथैवाङ्के समारोपितचन्द्रापीडचरणद्वया दूरागमनखिन्नेनापि बुभुक्षितेनाप्यप्रतिपन्नस्नानपानभोजनेन मुक्तात्मना राजपुत्रलोकेन स्वपरिजनेन च सह निराहारा कादम्बरी तं दिवसमनयत् ।

सज्जन्ति कुञ्जरघटाः खलु तत्प्रयाणे
तं सन्ततं युधि परिष्वजते जयश्रीः ।
चेतः समासजति तस्य गुणानुरागा-
द्विद्याविशुद्धहृदये विदुषां समूहे ॥

यं न स्पृशन्त्येनमचिन्त्यतत्त्वं दुरन्तधामानमनन्तरूपम् ।
मनोवचोवृत्तय आत्मभाजां स एव पूज्यः परमः शिवो नः ॥

अयं निजः परो वेति गणना लघुचेतसाम् ।
उदारचरितानां तु वसुधैव कुटुम्बकम् ॥

दंष्ट्राभङ्गं मृगाणामधिपतय इव व्यक्तमानावलेपाः ।
नाज्ञाभङ्गं सहन्ते नृवर नृपतयस्त्वादृशाः सार्वभौमाः ॥

---

[1] ಇದು ಕಾದಂಬರೀ ಎಂಬ ಕನ್ನಿಕೆಗೆ ಸಂಬಂಧಿಸುತ್ತದೆ. ಅವಳು ತನ್ನ ಪ್ರಿಯನಾದ ಚಂದ್ರಾಪೀಡನ ಸಮಾಗಮಕ್ಕೋಸ್ಕರ ನೇಮಿಸಿದ್ದೊಂದು ಸ್ಥಳಕ್ಕೆ ಹೋಗಿ, ಅವನು ಸತ್ತದ್ದನ್ನು ಕಂಡಳು. ಆದರೆ ಇವನು ಮರಳಿ ಜೀವಿಸುವನೆಂದು ಆಕಾಶವಾಣಿಯಾದದರಿಂದ, ಅವಳು ಆಶೆಯುಳ್ಳವಳಾಗಿ ಆ ಪ್ರೇತವನ್ನು ಕಾಯ್ದಿಟ್ಟಳು.

ನಾನು ಐದಾರು ಮಂದಿ ಮನುಷ್ಯರನ್ನೂ ೫೦೦ಕ್ಕಿಂತ ಹೆಚ್ಚು ಆಕಳುಗಳನ್ನೂ ಸುಮಾರು ೬೦ ನಾಯಿಗಳನ್ನೂ ದಾರಿಯಲ್ಲಿ ಕಂಡೆನು.

ದೇವಕನ್ನಿಕೆಯರಿಗೆ ಮೆಚ್ಚಿಕೆಯಾದ ಅಂಗರಾಜನಿವನು.

ಸ್ವಾಭಾವಿಕವಾಗಿ ಬೇರೆ ಬೇರೆ ಎಡೆಗಳಲ್ಲಿರುವ ಶ್ರೀಸರಸ್ವತಿಯರು ಅವನಲ್ಲಿ ಕೂಡಿ ವಾಸಿಸುತ್ತಾರೆ.

ಮಹಾಶ್ವೇತೆಯ ವೃತ್ತಾಂತ ಕೇಳಿದ ಅರಸನು ಶೋಕದಿಂದ ಆಕ್ರಾಂತನಾಗಿ ಮಾತಾಡಲಸಮರ್ಥನಾದನು.

ತನ್ನ ಪ್ರಜೆಗಳನ್ನು ತೃಪ್ತಿ ಪಡಿಸಿ ಬಹಳ ಕೀರ್ತಿಯ ಪಡೆದವನೂ, ನೆಲೆಯಿಲ್ಲದಷ್ಟು ಧೈರ್ಯವುಳ್ಳವನೂ ಆದ ಪರಂತಪನೆಂಬ ಹೆಸರಿನ ಅರಸನಿವನು.

ನಾನು ಇನ್ನೂ ನ್ಯಾಯದ ಸಿದ್ಧಾಂತಗಳನ್ನು ನನಗೆ ತಿಳಿದ ಮಟ್ಟಿಗೆ ಹೇಳುತ್ತೇನೆ.

ದೀಪದ ಹುಳಗಳು ಬೆಂಕಿಯ ಎಡೆಗೆ ಹಾರುತ್ತವೆ.

ರಘುರಾಜನು ಪ್ರತಿ ಪರ್ವತದ ಮೇಲೆ ಜಯಸ್ತಂಭವನ್ನು ನಿಲ್ಲಿಸಿದನು.

ಜನಸ್ಥಾನವು ಗೋದಾವರಿಯ ದಡದಲ್ಲಿ ಉಂಟು.

ಹುಡಿಗೆಯನ್ನು ಅವಳ ಗಂಡನ ಮನೆಗೆ ಕಳುಹಿಸಿ ನನ್ನ ಹತ್ತರ ಇಟ್ಟ ಗಂಟನ್ನು ತಿರಿಗಿ ಮುಟ್ಟಿಸಿದೆನೋ ಏನೋ ಎಂಬ ಹಾಗೆ ಸಮಾಧಾನ ಪಟ್ಟೆನು.

ಉದ್ದ ಕೈಗಳುಳ್ಳವನೂ, ಹರವಾದ ಎದೆಯುಳ್ಳವನೂ, ಹತ್ತೆಯಾದ ನಡುವುಳ್ಳವನೂ ಆದ ಅವಂತಿಯ ಅರಸನಿವನು.

ಕೋಮಲವಾದ ಅವಯವಗಳುಳ್ಳವಳೂ ಕಮಲದೋಪಾದಿಯಲ್ಲಿ ಕಣ್ಣುಗಳುಳ್ಳವಳೂ ಆದ ಆ ಸ್ತ್ರೀಯು ಅವನಲ್ಲಿ ಪ್ರೀತಿ ಪಡಲಿಲ್ಲ.

ಸ್ವಪರಾಕ್ರಮದಿಂದ ಹಗೆಗಳನ್ನು ಗೆದ್ದವನೂ, ಮಹೇಂದ್ರನಿಗೆ ಸರಿಯಾದ ಸಾಮರ್ಥ್ಯವುಳ್ಳವನೂ, ಕಡಗಗಳಿಂದ ಭೂಷಿತವಾದ ಭುಜಗಳುಳ್ಳವನೂ ಆದ ಹೇಮಾಂಗದನೆಂಬ ಕಲಿಂಗದೇಶದ ಅರಸನು ಕೂತಲ್ಲಿಗೆ ಚಂದ್ರನೋಪಾದಿಯಲ್ಲಿ ಮುಖವುಳ್ಳ ಆ ಸ್ತ್ರೀಯು ತಲಪಿದನಂತರ ಸುನಂದೆಯು ಅವಳೊಡನೆ ಇಂತೆಂದಳು.

---

## ಕೋಶ ೨೦.

अक्षमाला (ಸ್ತ್ರೀ.) ಅಕ್ಷಗಳ ಸರವು.
अङ्क (ಪು.) ಉಡಿ, ತೊಡೆ.
अचिन्त्य (ವಿ.) ಊಹಿಸಲಾಗದಂಥ.
अधिज्यधन्वन् (ಪು.) ಹೆದೆಯೇರಿಸಿದ ಬಿಲ್ಲುಳ್ಳವನು.
अनुराग (ಪು.) ಪ್ರೀತಿಯು.
अनुलेपन (ನ.) ಮುಲಾಮು, ತೈಲ.
अपचिति (ಸ್ತ್ರೀ.) ಪೂಜಾ.
अर्थ (ಪು.) ಇಷ್ಟ, ಪದಾರ್ಥ.
अवलेप (ಪು.) ಗರ್ವ.
अश्वमेध (ಪು.) ಕುದುರೆಯ ಯಜ್ಞ.
असु (ಪು.) ಪ್ರಾಣ; (ನಿತ್ಯ ಬಹುವಚನಾಂತ) ಪ್ರಾಣ ರಕ್ಷಿಸುವ ವಾಯುವಿನ ಹೆಸರು.
आ (ಅ.) ತನಕ.
आत्मभाज् (ಪು.) ಮನುಷ್ಯ, ಆತ್ಮವುಳ್ಳವ.
आनीत (ವಿ.) ತಂದ, ತರಲ್ಪಟ್ಟ.
आयुस् (ನ.) ಜೀವ, ಪ್ರಾಣ.
आर्त (ವಿ.) ದುಃಖಿತ, ಶ್ರಮಹೊಂದಿದ.
आशीविष (ಪು.) ಹಾವು.
आसाद्य (ವಿ.) ದೊರಕುವಂಥ.
उत्पन्न (ವಿ.) ಹುಟ್ಟಿದ.
उदार (ವಿ.) ಘನವುಳ್ಳ.
उद्दामवृत्ति (ವಿ.) ಹೆಮ್ಮೆಯ ಸ್ವಭಾವದವ, ಅಳತೆಗೆಟ್ಟ, ಮಿತಿವಿಾರಿದ.
उद्धत (ವಿ.) ಗರ್ವಿಷ್ಠ, ಅಹಂಕಾರವುಳ್ಳ.
उपजनित (उप + जन् ಇದರ ಪ್ರೇರಣಾರ್ಥಕದ ಭೂ. ಕೃ.) ಹುಟ್ಟಿಸಿದ, ಹುಟ್ಟಿಸಲ್ಪಟ್ಟಂಥ.
उपभोग (ಪು.) ಸುಖಾನುಭೋಗ.
उलूपी (ಸ್ತ್ರೀ.) ಅರ್ಜುನನ ಹೆಂಡತಿಯಾದ ಸರ್ಪಕನ್ನಿಕೆಯ ಹೆಸರು.
कन्यका (ಸ್ತ್ರೀ.) ಮಗಳು, ಕನ್ನಿಕೆ.
कादम्बरी (ಸ್ತ್ರೀ.) ಒಬ್ಬ ಕನ್ನಿಕೆಯ ಹೆಸರು.
कुटुम्बक (ನ.) ಕುಟುಂಬ.
कुमारक (ಪು.) ಹುಡುಗ.
कृतिन् (ವಿ.) ತನ್ನ ಕೆಲಸವನ್ನು ಕೊನೆಗಾಣಿಸುವವನು, ಗುಣವಂತ.
गतजीवित (ವಿ.) ಸತ್ತ.
घटा (ಸ್ತ್ರೀ.) ಸಮೂಹ, ಆನೆಗಳ ಹಿಂಡು.
चिरप्रवृत्त (ವಿ.) ರೂಢಿಯಲ್ಲಿ ಬಹಳ ದಿವಸದಿಂದ ಇದ್ದಂಥ.
जप् (೧ನೇ ಗ. ಪ.) ಸಣ್ಣ ಧ್ವನಿಯಿಂದ ಉಚ್ಚರಿಸು, ಜಪಮಾಡು.
तनय (ಪು.) ಮಗನು.
त्र्यम्बक (ಪು.) ರುದ್ರನ ಹೆಸರು.
दंष्ट्रा (ಸ್ತ್ರೀ.) ದವಡೆ, ಕೋರೆ, ಹಲ್ಲು.
दुरन्त (ವಿ.) ಅಗಾಧ, ನೆಲೆ ನಿಲುಕದ.
देवता (ಸ್ತ್ರೀ.) ದೇವತೆ.
धामन् (ನ.) ತೇಜ, ಕಾಂತಿ, ಕೀರ್ತಿ, ಮಹಿಮೆ.
धूप (ಪು.) ಧೂಪ.
निराहार (ವಿ.) ಉಪವಾಸ.
निसर्ग (ಪು.) ಸ್ವಭಾವ.
परिक्षित् (ಪು.) ಅಭಿಮನ್ಯುವಿನ ಮಗ, ಅರ್ಜುನನ ಮೊಮ್ಮಗ.
परिजन (ಪು.) ಸೇವಕ, ಆಳು.
परिश्लिष्ट (ವಿ.) ಸುಟ್ಟ, ಕಮರಿದ.
प्रचार (ಪು.) ರೂಢಿ, ಅಭಿವೃದ್ಧಿ, ವಾಡಿಕೆ.
प्रमति (ಪು.) ಒಬ್ಬ ಮನುಷ್ಯನ ಹೆಸರು.
प्रमद्वरा (ಸ್ತ್ರೀ.) ಒಬ್ಬ ಕನ್ನಿಕೆಯ ಹೆಸರು.
प्रयाण (ನ.) ಗಮನ, ಪ್ರವಾಸ.
प्रापितवत् (ವಿ.) ಕೊಡಿಸಿ ಕೊಟ್ಟವ, ಸಂಧಿಸಿ ಕೊಟ್ಟವ.
बाष्प (ಪು. ನ.) ಕಂಬನಿ, ಅಶ್ರು.
बुभुक्षित (ವಿ.) ಹಸಿದ.
भार्गव (ಪು.) ಒಬ್ಬ ಋಷಿಯ ಹೆಸರು.
मान (ಪು) ಮಾನ, ಸತ್ಕಾರ.

मेनका (ಸ್ತ್ರೀ.) ಒಬ್ಬ ಅಪ್ಸರಿಯ ಹೆಸರು.
यथाविधि (ಅ.) ಧರ್ಮನೇಮಗಳ ಪ್ರಕಾರ.
यावत् (ಅ.) ಎಲ್ಲಿ ತನಕ, ಎಷ್ಟು ಹೊತ್ತಿನ ವರಿಗೆ.
युध् (ಸ್ತ್ರೀ.) ಕಾಳಗ.
योजितवत् (ವಿ.) ಕೂಡಿಸಿದವ, ಜೋಡಿಸಿದವ.
रुरु (ಪು.) ಒಬ್ಬ ಮನುಷ್ಯನ ಹೆಸರು.
लोक् (अव ಪೂರ್ವಕ ೧ನೇ ಗ. ಆ., ೧೦ನೇ ಗ.) ನೋಡು, ದೃಷ್ಟಿ ಇಡು.
विलुप्त (ವಿ.) ಹಾಳುಮಾಡಿದ, ಕೆಡಿಸಲ್ಪಟ್ಟ.
विश्वावसु (ಪು.) ಒಬ್ಬ ಗಂಧರ್ವನ ಹೆಸರು.
व्यक्त (वि + अञ्ज् ಧಾತುವಿನ ಭೂ. ಕೃ.) ಸ್ಪಷ್ಟ, ಪ್ರಕಟ.
शून्यमुखी (ಸ್ತ್ರೀ.) ಬಾಡಿದ ಮುಖವುಳ್ಳಂಥ, ನಿಸ್ತೇಜವಾದ ಮುಖವುಳ್ಳಂಥ.
समागम ಸಂಗತಿ, ಸಹವಾಸ.
समारोपित (ವಿ.) ಇಡಲ್ಪಟ್ಟ, ಕೂಡ್ರಿಸಲ್ಪಟ್ಟ.
सञ्ज् (सम् ಮತ್ತು आ ಉಪಸರ್ಗ ಸಹಿತ) ಮೋಹಿತನಾಗು.
सस्ज् (೬ನೇ ಗ. ಪ.) ತತ್ಪರವಿರು, ಸಿದ್ಧನಾಗು.
सार (ಪು.) ಸತ್ವ, ಬಲ, ಅರ್ಕ, ತತ್ವ.
सार्वभौम (ವಿ.) ಇಡೀ ಲೋಕದ (ಒಡೆಯ).
सिव् (೪ನೇ ಗ. ಪ.) ಹೊಲಿಯು.
सुरभि (ವಿ.) ಪರಿಮಳದ, ಸುವಾಸನೆಯ.
सोच्छ्वास (ವಿ.) ಉಸುರಿದ್ದ, ಉಸುರುಳ್ಳ.
स्थूलकेश (ಪು.) ಒಬ್ಬ ಋಷಿಯ ಹೆಸರು.

---

ನಿವಾಸ, ವಾಸಸ್ಥಲ आस्पद (ನ.), आवास (ಪು.).
ಕಡಗ अङ्गद (ಪು.).
ಎದೆ वक्षस् (ನ.).
ಹರವಾದ विशाल (ವಿ.).
ದಿವ್ಯಸ್ತ್ರೀ अप्सरस् (ಸ್ತ್ರೀ.), सुराङ्गना (ಸ್ತ್ರೀ.).
ಇಡಗಂಟು न्यास (ಪು.), निक्षेप (ಪು.).
ಬೇರೆಯಾದ भिन्न (ವಿ.), (भिद् ಧಾತುವಿನ ಕ. ಭೂ. ಕೃ.).
ದರ प्रति (ಶಬ್ದಯೋಗೀ ಅವ್ಯಯ).
ಕಟ್ಟು बन्ध् (೪ನೇ ಗ. ಪ.).
ಹೇಮಾಂಗದ हेमाङ्गद (ಪು.).
ತೃಪ್ತಿಪಡಿಸಿ ಇಡೋಣ, ಸಂತೋಷ ಪಡಿಸೋಣ अनुरञ्जन (ನ. ಪ್ರಜೆಗಳ ವಿಷಯದಲ್ಲಿ ಮಾತ್ರ).
ದೀಪದ ಹುಳ शलभ (ಪು.).
ಪ್ರೀತಿ, ಮೆಚ್ಚಿಕೆ अनुराग (ಪು.).
ಸ್ವಭಾವ निसर्ग (ಪು.).
ಆಕ್ರಾಂತ अभिभूत (ವಿ.), पर्याकुल (ವಿ.).
ತಿರುಗಿ ಮುಟ್ಟಿಸಿದ प्रत्यर्पित (प्रति + ऋ ಧಾತುವಿನ ಪ್ರೇರಣಾರ್ಥಕದ ಭೂ. ಕೃ.).
ಶೌರ್ಯ, ಬಲ पराक्रम (ಪು.), प्रताप (ಪು.).
ಹುಡುಕಿದ, ಬೇಡಿಕೊಂಡ प्रार्थित (ವಿ.).
ಎದೆ, ಧೈರ್ಯ सत्त्व (ಪು.).
ಕಡೆಗೆ अभि (ಶ. ಅ.)
ನೆಲೆಗಾಣದ अगाध (ವಿ.).
ನಡುವು, ಸೊಂಟ मध्य (ನ.).
ದೇವಕನ್ನಿಕೆಯರಿಗೆ ಮೆಚ್ಚಿಕೆಯಾದ सुराङ्गना-प्रार्थितानुराग (ವಿ.).

## ೨೧ನೇ ಪಾಠ.

### ಪ್ರೇರಣಾರ್ಥಕ ಪ್ರಯೋಜಕ ಭೇದವು.

೧. ಧಾತುಗಳಿಗೆ अय ಪ್ರತ್ಯಯವನ್ನು ಹಚ್ಚಿ ಪ್ರೇರಣಾರ್ಥಕರೂಪಗಳನ್ನು ಮಾಡುವದುಂಟು. ೧೦ನೇ ಗಣದ अय ವಿಕರಣಕ್ಕೆ ಹೇಳಿದ ಸಂಧಿಕಾರ್ಯಗಳೆಲ್ಲ ಈ ಪ್ರತ್ಯಯದ ಪೂರ್ವದಲ್ಲಿಯೂ ಆಗುತ್ತವೆ. ಉದಾ: करोति ಅವನು ಮಾಡುತ್ತಾನೆ, कारयति ಅವನು ಮಾಡಿಸುತ್ತಾನೆ.

೨. ಪ್ರೇರಣಾರ್ಥಕದಲ್ಲಿ ಧಾತುಗಳಿಗೆ ಪರಸ್ಮೈಪದಪ್ರತ್ಯಯಗಳೂ ಆತ್ಮನೇಪದಪ್ರತ್ಯಯಗಳೂ ಹತ್ತುತ್ತವೆ. ಉದಾ: कारयति ಅಥವಾ कारयते.

೩. कम्, अम्, चम् ಧಾತುಗಳು ಹೊರ್ತಾಗಿ अम् ಅಂತ ಧಾತುಗಳೂ, जन्, जॄ, दल्, वल्, त्वर्, वन्, ज्वल् ಧಾತುಗಳೂ ಬೇರೆ ಕೆಲವು ಅಪ್ರಸಿದ್ಧ ಧಾತುಗಳೂ अय ಪ್ರತ್ಯಯ ಹೊಂದಲಾಗಿ ಅವುಗಳ ಅಂತ್ಯಸ್ವರಕ್ಕೂ ಉಪಾಂತ್ಯ अಕಾರಕ್ಕೂ ವೃದ್ಧಿ ಆಗುವದಿಲ್ಲ. ಆದರೆ वम्, नम्, वन्, ज्वल् ಧಾತುಗಳ ಹಿಂದೆ ಉಪಸರ್ಗವಿಲ್ಲದಿದ್ದಾಗ ಅವುಗಳ ಉಪಾಂತ್ಯ अಕಾರಕ್ಕೆ ವಿಕಲ್ಪದಿಂದ ವೃದ್ಧಿ ಆಗುವದು. ಉದಾ: जनयति, वलयति, नमयति-नामयति, उन्नमयति.

೪. आಕಾರಾಂತ ಧಾತುಗಳ ಮತ್ತು ह्री, ऋ ಧಾತುಗಳ ಮುಂದೆ अय ಪ್ರತ್ಯಯ ಪರವಾಗಲು प् ಆಗಮವು ಬರುವದು. ಉದಾ: दा-दापयति, ह्रेपयति. अर्पयति.

೫. ए, ऐ, ओಕಾರಾಂತ ಧಾತುಗಳ ಅಂತ್ಯಸ್ವರಕ್ಕೆ आಕಾರಾದೇಶವಾಗುವದು (ಪುಟ ೧೦೦, ನಿಯಮ ೧೪). धे-धा-धापयति, दो-दा-दापयति.

೬. क्षै ಧಾತುವಿನ ಅಂತ್ಯಸ್ವರಕ್ಕೆ ಆದೇಶವಾದ आಕಾರವು ಹ್ರಸ್ವವಾಗುವದು; ग्लै, स्ना ಧಾತುಗಳ ಹಿಂದೆ ಉಪಸರ್ಗವಿಲ್ಲದಿದ್ದರೆ, ಅವುಗಳಿಗೆ ಈ ಕಾರ್ಯವು ವಿಕಲ್ಪದಿಂದ ಆಗುವದು. ಉದಾ: क्षपयति, ग्लपयति ग्लापयति, प्रग्लापयति.

೭. रुह् ಧಾತುವಿನ हಕಾರಕ್ಕೆ ವಿಕಲ್ಪದಿಂದ प् ಆದೇಶವಾಗುವದು. ಉದಾ: रोहयति ಅಥವಾ रोपयति, हन् ಧಾತುವಿಗೆ घात् ಆದೇಶವಾಗುವದು. ಉದಾ: घातयति.

೮. रभ्, लभ् ಧಾತುಗಳ ಉಪಾಂತ್ಯಸ್ಥಾನದಲ್ಲಿ ಅನುನಾಸಿಕವು ಆಗಮವಾಗುತ್ತದೆ. ಉದಾ: रम्भयति, लम्भयति.

೯. शो, छो, सो, ह्वे, व्ये, वे, पा (ಕುಡಿ) ಧಾತುಗಳಿಗೆ प् ಆಗಮಕ್ಕೆ ಬದಲಾಗಿ य् ಆಗಮವಾಗುತ್ತದೆ. पा (ರಕ್ಷಿಸು) ಧಾತುವಿಗೆ ल् ಆಗಮವಾಗುತ್ತದೆ.

शाययति, साययति, पाययति, पालयति, जि, क्री, अधि+इ ಧಾತುಗಳ ಅಂತ್ಯ ಸ್ವರಕ್ಕೆ ಆಕಾರಾದೇಶವಾಗುವದು. ಉದಾ: जापयति, क्रापयति, अध्यापयति.

೧೦. [1] (ಅ) इ ಆಗಮ ಪರವಾಗಲು अय ಪ್ರತ್ಯಯದ ಅಂತ್ಯ अಕಾರಕ್ಕೆ ಲೋಪ ಬರುವದು. ಉದಾ: कारयिता (कारय+ता=कारय+इता=कारय्+इता).

(ಬ) (ಅ) ಭೂತಕೃದಂತದ त ಪ್ರತ್ಯಯವೂ,

(ಬ) यಕಾರಾದಿ ಪ್ರತ್ಯಯಗಳೂ,

(ಕ) ಸ್ವರಾದಿ ಕೃದಂತ ಪ್ರತ್ಯಯಗಳೂ ಪರವಾಗಲು अय ಪ್ರತ್ಯಯಕ್ಕೆ ಲೋಪ ಬರುವದು, ಆದಾಗ್ಯೂ ಅದರ ಯೋಗದಿಂದಾದ ಸಂಧಿಕಾರ್ಯಗಳು ಮಾತ್ರ ಉಳಿಯುತ್ತವೆ. ಉದಾ: विद्-विदित (ಭೂ. ಕೃ.), वेदित (ಪ್ರೇರಣಾರ್ಥಕ ಭೂ. ಕೃ.), संहृ-संहृत्य (ಭೂ. ನ್ಯೂ.), संहार्य (ಪ್ರೇರಣಾರ್ಥಕ ಭೂ. ನ್ಯೂ.).

(ಕ) ಹ್ರಸ್ವೋಪಾಂತ ಉಳ್ಳ ಧಾತುಗಳಿಗೆ ಭೂತನ್ಯೂನದ य ಪ್ರತ್ಯಯ ಪರವಾಗಲು अय ಪ್ರತ್ಯಯದ ಕಡೆಯ अಕಾರಕ್ಕೆ ಮಾತ್ರ ಲೋಪ ಬರುವದು. ಉದಾ: प्रणमय्य.

೧೧. ಹತ್ತನೇ ಗಣದ ಧಾತುಗಳ ಮೂಲ ರೂಪಗಳೂ ಪ್ರೇರಣಾರ್ಥಕ ರೂಪಗಳೂ ಒಂದೇ ಪ್ರಕಾರವಾಗಿರುವವು.

೧೨. ಅಕರ್ಮಕ ಧಾತುಗಳ ಮತ್ತು ಶಬ್ದಕರ್ಮಕ ಧಾತುಗಳ ಹಾಗು ಗತಿ ಬುದ್ಧಿ ಭಕ್ಷಣಾರ್ಥಕ ಧಾತುಗಳ, ಮತ್ತು दृश् ಧಾತುವಿನ ಪ್ರೇರಣಾರ್ಥಕ ರೂಪಗಳನ್ನು ಪ್ರಯೋಗಿಸಲು ಮೂಲ ರೂಪದ ಕರ್ತೃವಿಗೆ ದ್ವಿತೀಯಾವಿಭಕ್ತಿ ಬರುತ್ತದೆ. हृ, कृ ಧಾತುಗಳಿಗೆ ಈ ನಿಯಮವು ವಿಕಲ್ಪವಾಗಿ ಹತ್ತುತ್ತದೆ. नी, वह्, अद्, खाद् [2], भक्ष् ಧಾತುಗಳಿಗೆ ಹತ್ತುವದಿಲ್ಲ. ಉಳಿದ ಕಡೆಯಲ್ಲೆಲ್ಲ ಮೂಲ ರೂಪದ ಕರ್ತೃವಿಗೆ ತೃತೀಯಾವಿಭಕ್ತಿ ಬರುವದು.

यजमानो यज्ञकर्मर्त्विग्भिरारम्भयति ।
इन्द्रः स्वयशः किंनरमिथुनानि गापयामास ।
पुष्पमित्रो यजते याजकास्तं याजयन्ति ।
कृष्णवर्मा पुत्रेण ब्राह्मणेभ्यः प्रत्यहं शतं गा दापयति ।

---

[1] ಈ ನಿಯಮದ ಎಲ್ಲ ಕಾರ್ಯಗಳು ೧೦ನೇ ಗಣದ अय ವಿಕರಣಕ್ಕೂ ಆಗುತ್ತವೆ.

[2] ಹಿಂಸಾರ್ಥದಲ್ಲಿ ಈ ಧಾತುವಿನ ಮೂಲ ಕರ್ತೃವಿಗೆ ದ್ವಿತೀಯಾವಿಭಕ್ತಿ ಬರುತ್ತದೆ.

जानकीं रथमारोप्य जाह्नवीतीरमासाद्य रामाज्ञापितो लक्ष्मणस्तां तत्याज त्रिजहौ ।

प्रभुप्रसादलवोऽप्यधीरप्रकृतेर्दासजनस्य प्रागल्भ्यं जनयति ।

असुरस्य तिग्मतपसा प्रीतात्मा भगवाञ्शंकरः स्वीय रूपं तं दर्शयामास ।

नगेन्द्रसक्तां दृष्टिं पार्श्वे कस्यापि क्रन्दितमाकर्ण्य राजा निवर्तयामास ।

अस्मिँल्लोकेऽनुष्ठितो धर्मस्तस्य कर्तारं स्वर्गलोकं प्रापयति ।

ग्रीष्मकाले घर्मोऽङ्गानि ग्लपयति स्वेदं प्रवर्तयति तृष्णां परिवर्धयति च ।

बहिर्द्वारि प्रवृत्तमृषिकुमारकं प्रवेशयितुं प्रतिहारीमाज्ञापयामास राजा ।

चिरनष्टमात्मनो बालकं दृष्ट्वा सा सुन्दरी भृशं रुरोद तं च दृढं परिष्वज्याश्रुभिः स्नपयामास ।

शत्रूनगमयत्स्वर्गं वेदार्थं स्वानवेदयत् ।
आशयच्चामृतं देवान्वेदमध्यापयद्विधिम् ।
आसयत्सलिले पृथ्वीं यः स मे श्रीहरिर्गतिः ॥
रमयन्ति मनस्तावद्भावाः संसारसंभवाः ।
यावन्न श्रूयते साश्रुलोकफूत्कारकाहलः ॥
स्वीयं यशः पौरुषं च गुप्तये कथितं च यत् ।
कृतं यदुपकाराय धर्मज्ञो न प्रकाशयेत् ।
वेदाविनाशिनं नित्यं य [1]एनमजमव्ययम् ।
कथं स पुरुषः पार्थ कं घातयति हन्ति कम् ॥
नैनं छिन्दन्ति शस्त्राणि नैनं दहति पावकः ।
न चैनं क्लेदयन्त्यापो न शोषयति मारुतः ॥
संयोजयति विद्येव नीचगापि नरं सरित् ।
समुद्रमिव दुर्धर्षं नृपं भाग्यमतः परम् ॥
यदि सत्याभिसंधस्त्वं राजचामं प्रवासय ।
नव पञ्च च वर्षाणि निर्जने गहने वने ॥

---

[1] ಈ ಶಬ್ದವು ಜೀವಾತ್ಮ ಅಥವಾ ಪರಮಾತ್ಮಬೋಧಕ ಉಂಟು.

युधिष्ठिरस्तु कौन्तेयो मयमाहूय सत्वरम् ।
कारयामास वै तेन सभामद्भुतदर्शनाम् ॥
दृष्टिस्तृणीकृतजगत्त्रयसत्त्वसारा
धीरोद्धता नमयतीव गतिर्धरित्रीम् ।
कौमारकेऽपि गिरिवद्गुरुतां दधानो
वीरो रसः किमयमेत्युत दर्प एव ॥

ಅರಸನು ಬ್ರಾಹ್ಮಣರಿಂದ ಹಣವನ್ನು ತಕ್ಕೊಳ್ಳಿಸುತ್ತಾನೆ[1] (प्रति+ग्रह्).

ವಸಿಷ್ಠನು ದಶರಥನ ಕೈಯಿಂದ ಯಜ್ಞ ಮಾಡಿಸಿದನು (यज्).

ಬಾಜಿರಾಯನ ದುಷ್ಕೃತ್ಯಗಳು ನಮ್ಮನ್ನು ನಾಚಿಸುತ್ತವೆ (ह्री).

ಇಂದ್ರನು ಮಾತಲೀ ಕೈಯಿಂದ ತನ್ನ ಸ್ವಂತ ರಥದಲ್ಲಿ ಅರ್ಜುನನನ್ನು ಸ್ವರ್ಗಕ್ಕೆ ತರಿಸಿದನು (आ+नी).

ಅವನು ಮೊದಲು ಜನರ ಮನಸ್ಸಿನಲ್ಲಿ ತನ್ನ ಬಗ್ಗೆ ನಂಬಿಗೆಯ ಹುಟ್ಟಿಸಿ (वि+श्वस्), ಆ ಮೇಲೆ ಅವರನ್ನು ಕೊಲ್ಲಿಸುತ್ತಾನೆ (नश्, अव+सद्, ध्वंस्).

ಅವನು ಗುರುಗಳಿಂದ ನಿರೂಪಿಸಲ್ಪಟ್ಟ (आ+ज्ञा) ಮೇರೆಗೆ ಅವರ ಆಕಳುಗಳನ್ನು ಪ್ರತಿ ದಿವಸ ಮೇಯಿಸಿ (चर्) ಅವುಗಳಿಗೆ ನೀರು ಕುಡಿಸುವನು (पा).

ಅವನು ಬೆಳಗಿನ ಆಹ್ನಿಕಗಳನ್ನೆಲ್ಲ ಮುಗಿಸಿ (सम्+आप्), ಹದಿನಾರು ಜನ ಬ್ರಾಹ್ಮಣರನ್ನು ಉಣಿಸಿ (भुज्), ಆ ಮೇಲೆ ತಾನು ಊಟಕ್ಕೆ ಕೂತನು.

ರಾಮನ ಹದಿನಾಲ್ಕು ವರ್ಷ ವನವಾಸಕ್ಕೆ ಹೋಗೋಣವು ದಶರಥನ ಮರಣಕ್ಕೆ ಕಾರಣವಾಯಿತು (प्र+सञ्ज्).

ಪಾಂಡವರಿಗೂ ಕೌರವರಿಗೂ ಕಾಳಗ ನಡೆದಿರುವ ಕುರುಕ್ಷೇತ್ರದಲ್ಲಿ ವರ್ತಿಸಿದ ಸಂಗತಿಗಳನ್ನು ಸಂಜಯನು ಧೃತರಾಷ್ಟ್ರನಿಗೆ ತಿಳಿಸಿದನು.

ದೈವವೇ ಒಂದೊಂದು ವೇಳೆ ಅಣ್ಣತಮ್ಮಂದಿರಲ್ಲಿಯೂ ಸ್ನೇಹಿತರಲ್ಲಿಯೂ ವ್ಯಾಜ್ಯ ಹುಟ್ಟಿಸುತ್ತದೆ (युध्), ಸಮಯವಿಶೇಷದಲ್ಲಿ ಅದು ನಮ್ಮ ಕೈಯಿಂದಲೇ ನಮ್ಮ ಕುತ್ತಿಗೆ ಕೊಯಿಸುತ್ತದೆ (छिद्).

ತಂದೆಯು ತನ್ನ ಮಗಳನ್ನು ಒಳ್ಳೇ ನಡತೆಯವನೂ ಕುಲವಂತನೂ ವಿದ್ವಾಂಸನೂ ಆದವನಿಗೆ ಮದುವೆ ಮಾಡಿ ಕೊಡತಕ್ಕದ್ದು (परि+नी ಅಥವಾ वि+वह्, उद्+वह्).

---

1) ಈ ಧಾತುಗಳ ಪ್ರೇರಣಾರ್ಥಕರೂಪಗಳನ್ನು ಪ್ರಯೋಗಿಸಬೇಕು.

ಈ ಹುಡುಗನು ನುಡಿದ ಶ್ಲೋಕಗಳು ನಾನು ಪ್ರಿಯೆಯನ್ನೂ ಲಕ್ಷ್ಮಣನನ್ನೂ ಒಡಗೊಂಡು ಪ್ರಸ್ರವಣಗಿರಿಯ ಮೇಲೆ ವಾಸಿಸುತ್ತಿದ್ದ ದಿವಸಗಳ ನೆನಪು ಕೊಡುತ್ತವೆ (स्मृ).

ಶ್ಯಾಪರ್ಣರು ಸೌಷದ್ಮನನ ಯಜ್ಞಕ್ಕೆ ಹೋಗಿ ವೇದಿಯೊಳಗೆ ಕೂಡ್ರಲಾಗಿ ಅರಸನು ತನ್ನ ಸೇವಕರಿಗೆ ಅವರನ್ನು ಎಬ್ಬಿಸಲು[1] (उद् + स्था) ಅಪ್ಪಣೆ ಕೊಟ್ಟನು. ಅವರು ಆ ಮೇರೆಗೆ ಅವರನ್ನು ಎಬ್ಬಿಸಿದರು. ಎಬ್ಬಿಸಲ್ಪಡುವಾಗ ಅವರು ಗಟ್ಟಿಯಾಗಿ ಕೂಗಿದರು.

---

## ಕೋಶ ೨೧.

अज (ವಿ.) ಹುಟ್ಟದೆ ಇದ್ದ.
अधीर (ವಿ.) ಚಂಚಲ ಸ್ವಭಾವ, ಸಣ್ಣ ಮನಸ್ಸಿನ.
अभिसन्धा (ಸ್ತ್ರೀ.) ನಿಶ್ಚಯ.
अम् (೧ನೇ ಗ. ಪ.) ಅಲ್ಲಾಡು.
अर्थ (ಪು.) ಭಾವ.
अविनाशिन् (ವಿ.) ನಾಶ ಹೊಂದದ.
उत (ಅ.) ಅಥವಾ.
अव्यय (ವಿ.) ವಿಕಾರವಾಗದಂಥ, ಮಾರ್ಪಡದಂಥ.
काहल (ಪು.) ಶಬ್ದ, ಧ್ವನಿ, ಸದ್ದು.
किंनर (ಪು.) ಕಡಿಮೆ ದೇವತೆಗಳು.
कृतवर्मन् (ಪು.) ಒಬ್ಬ ಮನುಷ್ಯನ ಹೆಸರು.
कौमारक (ನ.) ಚಿಕ್ಕತನ.
क्रन्दित (ನ.) ಕೂಗು, ಅಳೋಣ.
क्लिद् (೪ನೇ ಗ. ಪ.) ತೊಯ್ಯು.
क्षै (೧ನೇ ಗ. ಪ.) ಕೃಶವಾಗು.
गति (ಸ್ತ್ರೀ.) ನಡೆ, ನಡಿಗೆ.
गहन (ವಿ.) ಇಕ್ಕಟ್ಟಾದ, ಅಜೇಯ, ಅಗಮ್ಯ.
गुप्ति (ಸ್ತ್ರೀ.) ಗುಟ್ಟು, ಸಂರಕ್ಷಣ.
गुरुता (ಸ್ತ್ರೀ.) ದೊಡ್ಡಸ್ತಿಕೆ, ಪ್ರತಾಪ, ಮಹಿಮೆ.
ग्लै (೧ನೇ ಗ. ಪ.) ಕ್ಷೀಣವಾಗು, ದಣಿಯು.
घर्म (ಪು.) ಸೆಕೆ, ಕಾವು, ತಾಪ.
जाह्नवी (ಸ್ತ್ರೀ.) ಭಾಗೀರಥಿ.
ज्वल् (೧ನೇ ಗ. ಪ.) ಉರಿಯು, ಸುಡು.
तिग्म (ವಿ.) ತೀಕ್ಷ್ಣ, ಕಠಿಣವಾದ.
तृष्णा (ಸ್ತ್ರೀ.) ನೀರಡಿಕೆ.
दल् (೧ನೇ ಗ. ಪ.) ಹರಿ, ಒಡೆ.
दुर्धर्ष (ವಿ.) ಹಿಡಿಯಕೂಡದ, ದುರ್ಗಮವಾದ.
धरित्री (ಸ್ತ್ರೀ.) ಪೃಥ್ವಿ, ಭೂಮಿ.
नगेन्द्र (ಪು.) ಪರ್ವತಶ್ರೇಷ್ಠ, ಹಿಮಾಲಯ.
नित्य (ವಿ.) ಅಕ್ಷಯ, ಶಾಶ್ವತವಾದ.
निर्जन (ವಿ.) ಒಕ್ಕಲಿಲ್ಲದ, ಏಕಾಂತವಾದ.
नीचग (ವಿ.) ಕೀಳ ಮನುಷ್ಯನನ್ನು ಆಶ್ರಯಿಸುವ; ತಗ್ಗು ನೆಲಕ್ಕೆ ಹೋಗಿ ಹರಿಯುವ.
पार्थ (ಪು.) ಪೃಥಾದೇವಿಯ ಮಗನು, ಪಾಂಡವರು.
पुष्पमित्र (ಪು.) ಒಬ್ಬ ಅರಸನ ಹೆಸರು.
पौरुष (ನ.) ಪರಾಕ್ರಮ, ಕಲಿತನ.
प्रकृति (ಸ್ತ್ರೀ.) ಸ್ವಭಾವ.
प्रतिहारी (ಸ್ತ್ರೀ.) ದ್ವಾರಪಾಲಿಕೆ.
प्रागल्भ्य (ನ.) ಧಿಟ್ಟತನ, ಧೈರ್ಯ.

---

[1] उद् ಉಪಸರ್ಗದ ಮುಂದಿನ स्था, स्तम्भ् ಧಾತುಗಳ स ಕಾರಕ್ಕೆ ಲೋಪ ಬರುವದು.

फूत्कार (ಪು.) ಬಿಕ್ಕಿ ಬಿಕ್ಕಿ ಅಳೋಣ.
मय (ಪು.) ದೈತ್ಯರ ಬಡಿಗ.
मारुत (ಪು.) ಗಾಳಿ, ವಾಯು.
मिथुन (ನ.) ಜೋಡು, ಯುಗ್ಮ.
वम् (೧ನೇ ಗ. ಪ.) ಕಾರು.
वल् (೧ನೇ ಗ. ಆ.) ಮುಟ್ಟು.
वीररस (ಪು.) ಬಂಟತನ, ನವರಸಗಳಲ್ಲಿ ಒಂದು.
श्रीहरि (ಪು.) ವಿಷ್ಣುವಿನ ಹೆಸರು.
सम्भव (ಪು.) ಉತ್ಪತ್ತಿಸ್ಥಾನ, ಆಧಾರ.
सत्त्व (ನ.) ಶಕ್ತಿ, ದೊಡ್ಡಸ್ತಿಕೆ.
सलिल (ನ.) ನೀರು.
स्वेद (ಪು.) ಬೆವರು.

---

ಹಾಗೆ, ಅದರಂತೆ तथा च, तथा, इत्थम्.
ಅಳು रु (೨ನೇ ಗ. ಪ.) क्रन्द् (೧ನೇ ಗ. ಪ.).
ವಿದ್ಯಾವಂತ, ತಿದ್ದುಪಾಟುಳ್ಳ कृतविद्य (ವಿ.), संस्कृतचित्त (ವಿ.), सुविनीत (ವಿ.).
ಮನೆತನ कुल (ನ.).
ಸಮಯುವಿಶೇಷದಲ್ಲಿ प्रसङ्गवशात्; काले काले.
ಪ್ರಸ್ರವಣ (ಪರ್ವತ), प्रस्रवण (ಪು.).
ಅನ್ನು, ನುಡಿ वद् (೧ನೇ ಗ. ಪ.).
ಯೋಗ್ಯ, ದೊಡ್ಡ विशिष्ट.
ಮನೆತನಸ್ಥ कुलीन (ವಿ.), अभिजनवत्.
ಸೌಷದ್ಮನ, ಅರಸನ ಹೆಸರು सौषद्मन (ಪು.).
ಒಮ್ಮೊಮ್ಮೆ, ಒಂದೊಂದು ವೇಳೆ कदाचित् (ಅ.).
ಶ್ಯಾಪರ್ಣರು, ಶ್ಯಾಪರ್ಣನೆಂಬ ಪುರೋಹಿತನ ವಂಶಿಕರು श्यापर्ण (ಪು.).
ಸುಶೀಲ, ಒಳ್ಳೆ ನಡತೆಯುವ सुचरित (ವಿ.).

---

## ೨೨ನೇ ಪಾಠ.

### ಅದ್ಯತನಭೂತ.

೧. ಅದ್ಯತನಭೂತವು ವಿಶಿಷ್ಟ ಕಾಲದ ಸಂಬಂಧವೇನೂ ಇಲ್ಲದೆ ಬರೆ ಕ್ರಿಯಾಸಮಾಪ್ತಿಯನ್ನು ಬೋಧಿಸುತ್ತದೆ, ಅಥವಾ ಈ ಹೊತ್ತೇ ಮುಗಿದ ಕ್ರಿಯೆಯನ್ನು ಹೇಳುತ್ತದೆ. ವರ್ತಮಾನಕಾಲಕ್ಕೆ ಇದರ ಸಂಬಂಧವು ಅತಿ ನಿಕಟವಾಗಿರುವದು. ವೃತ್ತಾಂತವರ್ಣನೆಯಲ್ಲಿ ಈ ಕಾಲವನ್ನು ಪ್ರಯೋಗಿಸಕೂಡದು. ಆದಾಗ್ಯೂ ಇತ್ತಲಾಗಿನ ಸಂಸ್ಕೃತ ಗ್ರಂಥಕರ್ತರು ಮೂರು ಭೂತಕಾಲಗಳನ್ನು (ಅನದ್ಯತನಭೂತ, ಪೂರ್ಣಭೂತ, ಅದ್ಯತನಭೂತ) ಏನೂ ನಿರ್ಬಂಧವಿಲ್ಲದೆ ಬೇಕಾದ ಭೂತಾರ್ಥದಲ್ಲಿ ಪ್ರಯೋಗಿಸುತ್ತಾರೆ. ಐತರೇಯ ಬ್ರಾಹ್ಮಣ ಮುಂತಾದ ಪ್ರಾಚೀನ ಗ್ರಂಥಗಳಲ್ಲಿ ಈ ಅವ್ಯವಸ್ಥೆಯು ಕಾಣಿಸುವದಿಲ್ಲ. ಉದಾ: अजनि ते वै पुत्रः (ನಿನಗೊಬ್ಬ ಮಗನು ಹುಟ್ಟಿದ್ದಾನೆ); तदहं तुभ्यमेव ददामि य एवं सत्यमवादीः (ನೀನು ಈ ಪ್ರಕಾರ ಸತ್ಯವನ್ನು ಹೇಳಿರುತ್ತೀ, ಅದರಿಂದ ಅವನನ್ನು ನಿನಗೇ ಕೊಡುತ್ತೇನೆ);

उत्त श्रिय उषसो रोचमाना अस्थुः (ಋಗ್ವೇದಸಂಹಿತ) ಪ್ರಾತಃಕಾಲದ ಶೋಭೆಯು ಹಬ್ಬಿತು.

೨. ಅದ್ಯತನಭೂತಕಾಲಕ್ಕೆ मा ಎಂಬ ನಿಷೇಧಾರ್ಥಕ ಅವ್ಯಯ ಕೂಡಿದರೆ, ಆಜ್ಞಾರ್ಥದ ಭಾವ ಉಂಟಾಗುವದು. ಈ ಪ್ರಸಂಗದಲ್ಲಿ ಧಾತುವಿನ ಆರಂಭದಲ್ಲಿ ಬರತಕ್ಕ अ, आ ಆಗಮಗಳಿಗೆ ಲೋಪ ಬರುವದು. ಉದಾ: मा, त्वं गमः (ಹೋಗಬೇಡ); मा नो हिंसीज्जनिता यः पृथिव्याः (ಈ ಜಗತ್ತನ್ನು ನಿರ್ಮಿಸಿದವನು ನಮ್ಮನ್ನು ಪೀಡಿಸದಿರಲಿ).

೩. ಅದ್ಯತನಭೂತಕಾಲದಲ್ಲಿ ಏಳು ಭೇದಗಳುಂಟು. ಅನದ್ಯತನಭೂತಕಾಲದಂತೆ ಇದರಲ್ಲಿಯೂ ಧಾತುಗಳ ಪೂರ್ವದಲ್ಲಿ अ, आ ಆಗಮಗಳು ಬರುತ್ತವೆ.

## ೧ನೇ ಭೇದ.

೧. ಧಾತುಗಳಿಗೆ ಅನದ್ಯತನಭೂತಕಾಲದ ಪ್ರತ್ಯಯಗಳನ್ನು ಹಚ್ಚಿದರೆ, ಈ ರೂಪಗಳಾಗುವವು; ಆದರೆ ಪ್ರಥಮಪುರುಷ ಬಹುವಚನದಲ್ಲಿ ಮಾತ್ರ उस् ಪ್ರತ್ಯಯವು ಬರುವದು. उस् ಪ್ರತ್ಯಯದ ಹಿಂದಿನ ಆಕಾರಕ್ಕೆ ಲೋಪ ಬರುವದು. ಪ್ರತ್ಯಯಗಳು ಯಾವವಂದರೆ:—

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | त् | ताम् | उस् |
| ಮ. ಪು. | स् | तम् | त |
| ಉ. ಪು. | अम् | व | म |

೨. पा (ಕುಡಿಯು), स्था, दा, धा, ಧಾತುಗಳೂ, (ಪುಟ ೧೦೦, ನಿಯಮ ೧೪ರಲ್ಲಿ ಹೇಳಿದಂತೆ) दा, धा ರೂಪಗಳನ್ನು ಹೊಂದುವ ಧಾತುಗಳೂ, इ (ಹೋಗು) ಧಾತುವಿಗೆ ಆದೇಶವಾಗಿ ಬಂದ गा ಎಂಬ ರೂಪವೂ, भू ಧಾತುವೂ, ಈ ಭೇದದವು.

೩. भू ಧಾತುವಿಗೆ ಪ್ರ. ಪುರುಷ ಬಹುವಚನದಲ್ಲಿ अन् ಪ್ರತ್ಯಯ ಹತ್ತುವದು; ಮತ್ತು ಈ ಧಾತುವಿಗೆ ಸ್ವರಾದಿಪ್ರತ್ಯಯಗಳು ಪರವಾಗಲು ಅವುಗಳ ಪೂರ್ವದಲ್ಲಿ व् ಆಗಮ ಬರುವದು.

೪. घ्रा, धे, शो, सो, छो ಧಾತುಗಳು ಈ ಭೇದದ ಧಾತುಗಳಂತೆಯೂ ೬ನೇ ಭೇದದ ಧಾತುಗಳಂತೆಯೂ ನಡಿಯುವವು. धे ಧಾತುವು ೩ನೇ ಭೇದದಂತೆಯೂ ನಡಿಯುವದು. ಈ ಧಾತುಗಳ ಅಂತ್ಯ ಸ್ವರಕ್ಕೆ (ಪುಟ ೧೦೦, ನಿಯಮ ೧೪ರಲ್ಲಿ ಹೇಳಿದಂತೆ) आ ಕಾರಾದೇಶ ಬರುವದು.

೫. ಈ ಭೇದದ ಧಾತುಗಳಿಗೆ ಪರಸ್ಮೈಪದದ ಪ್ರತ್ಯಯಗಳೇ ಹತ್ತುತ್ತವೆ. ಈ ಭೇದದ ಧಾತುಗಳು ಉಭಯಪದಿಯಾಗಿದ್ದರೆ, ಆತ್ಮನೇಪದದಲ್ಲಿ ೪ನೇ ಅಥವಾ ೫ನೇ ಭೇದದಂತೆ ನಡಿಯುತ್ತವೆ.

दा ಕೊಡು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अदात्–द् | अदाताम् | अदुः |
| ಮ. ಪು. | अदाः | अदातम् | अदात |
| ಉ. ಪು. | अदाम् | अदाव | अदाम |

ರೂಪಸಿದ್ಧಿವಿಚಾರ.— अदा + उस् = अद् + उस् = अदुः, ಅದರಂತೆ अस्थुः, अगुः; अदा + त् = अदात् ಅಥವಾ अदाद् (ಪುಟ ೬೯, ನಿಯಮ ೨).

## ೨ನೇ ಭೇದ.

೧. ಅನದ್ಯತನಭೂತದ ಪ್ರತ್ಯಯಗಳೇ ಈ ಭೇದದ ಧಾತುಗಳಿಗೆ ಬರುವವು; ಆಗ ನಡುವೆ अಕಾರಾಗಮವಾಗುತ್ತದೆ.

ಪರಸ್ಮೈಪದಪ್ರತ್ಯಯಗಳು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | त् | ताम् | अन् |
| ಮ. ಪು. | स् | तम् | त |
| ಉ. ಪು. | अम् | व | म |

व, म ಪ್ರತ್ಯಯಗಳು ಪರವಾಗಲು अ ಆಗಮವು ದೀರ್ಘವಾಗುವದು; अम्, अन् ಪ್ರತ್ಯಯಗಳು ಪರವಾಗಲು ಲೋಪ ಹೊಂದುವದು (೧ನೇ ಪುಸ್ತಕ, ಪುಟ ೫, ಮತ್ತು ಪುಟ ೬, ಟಿಪ್ಪಣಿ ೨ ನೋಡು).

ಆತ್ಮನೇಪದಪ್ರತ್ಯಯಗಳು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | त | इताम् | अन्त |
| ಮ. ಪು. | थास् | इथाम् | ध्वम् |
| ಉ. ಪು. | इ | वहि | महि |

वहि, महि ಪ್ರತ್ಯಯಗಳು ಪರವಾಗಲು अ ಆಗಮವು ದೀರ್ಘವಾಗುವದು, अन्त ಪ್ರತ್ಯಯವು ಪರವಾಗಲು ಲೋಪ ಹೊಂದುವದು.

೨. ಧಾತುವಿನ ಸ್ವರಗಳಿಗೆ ಗುಣ ವೃದ್ಧಿಗಳಾಗುವದಿಲ್ಲ.

೩. ಈ ಭೇದದ ಧಾತುಗಳು ಬಹುತರ ಪರಸ್ಮೈಪದದಲ್ಲಿ ನಡಿಯುತ್ತವೆ; ಕೆಲವು ಮಾತ್ರ ಆತ್ಮನೇಪದದಲ್ಲಿಯೂ ನಡಿಯುತ್ತವೆ.

೪. ಕೆಲವು ಧಾತುಗಳು ಈ ಭೇದದಂತೆ ಮಾತ್ರ ನಡಿಯುತ್ತವೆ, ಕೆಲವು ಈ ಭೇದದಂತೆಯೂ ಬೇರೆ ಭೇದಗಳಂತೆಯೂ ನಡಿಯುತ್ತವೆ. ಅವುಗಳನ್ನು ಕೆಳಗೆ ವಿವರಿಸಿದ್ದೇವೆ:—

### (ಅ) ಈ ಭೇದದಂತೆ ಮಾತ್ರ ನಡಿಯುವ ಧಾತುಗಳು.

लिप् ಪೂಸು, ಚರ್ಚಿಸು.
सिच् ಸಿಂಪಡಿಸು.
ह्वे[1] (ह्व्) ಕರಿಯು.
(ಈ ಮೂರು ಧಾತುಗಳು ಆತ್ಮನೇಪದದಲ್ಲಿ ವಿಕಲ್ಪವಾಗಿ ಈ ಭೇದದಂತೆ ನಡಿಯುತ್ತವೆ.)
अस् (अस्थ्) ಒಗೆ, ಚಲ್ಲು.
आप् ಪಡು, ಹೊಂದು.
क्रुध् ಸಿಟ್ಟಾಗು.
क्लम् ದಣಿಯು.
क्षम् (೪ನೇ ಗ.) ಕ್ಷಮಿಸು.
ख्या (ख्य् ಪ. ಆ.) ಹೇಳು.
गम् ಹೋಗು.
गृध् ಹೊಟ್ಟೆಬಾಕನಾಗು, ಆಶಾಮಾರಿಯಾಗು.
घस् ನುಂಗು, ಗಬಗಬ ತಿನ್ನು.
तम् ಖಿನ್ನವಾಗು, ನೊಂದು.
तुष् ಸಂತೋಷ ಪಡು, ತೃಪ್ತನಾಗು.
तृष् ನೀರಡಿಸು, ತೃಷಿತನಾಗು.
दम् ಸಾಧು ಮಾಡು, ಸಾಧು ಆಗು.
दुष् ಕೆಡಿಸಲ್ಪಡು, ಕೆಡು, ಹೀನವಾಗು.
द्रुह् ವ್ಯಥೆ ಪಡಿಸು, ಮೋಸಗೊಳಿಸು, ವಿಶ್ವಾಸ ಘಾತ ಮಾಡು.
नश् ನಷ್ಟವಾಗು, ಸಾಯು.
पत् (पप्त्) ಬೀಳು.
पिष् ಬೀಸು, ಪುಡಿ ಮಾಡು.
पुष् (೪ನೇ ಗ.) ಪೋಷಿಸು, ಸಾಕು.
भ्रम् (೪ನೇ ಗ.) ತಿರುಗು, ತಪ್ಪು, ಭ್ರಷ್ಟ ನಾಗು.
मद् ಹುಚ್ಚಾಗು.
मुच् ಬಿಡು, ಬಿಟ್ಟುಬಿಡು.
मुह् ಮೋಹ ಪಡು, ಭ್ರಾಂತನಾಗು.
लुप् ಕಡಿಯು.
लुभ् (೪ನೇ ಗ.) ಲೋಭಿಸು, ಇಚ್ಛಿಸು.
वच् (वोच् ಪ. ಆ.) ಮಾತಾಡು, ಅನ್ನು.
शक् ಶಕ್ತನಾಗು, ಸಮರ್ಥನಾಗು.
शद् ಸಾಯು, ಬೀಳು.
शम् ಶಾಂತಿ ಪಡು.
शास् (शिष्) ಆಳು, ಕ್ರಮಪಡಿಸು.
शिष् ವಿಂಗಡಿಸು.
शुध् ಶುದ್ಧವಾಗು, ಸ್ವಚ್ಛವಾಗು.
श्रम् ದಾವತಿ ಮಾಡು.
श्लिष् (೪ನೇ ಗ.) ಅಂಟಿಕೊಳ್ಳು. ಹತ್ತಿಕೊಳ್ಳು.
सद् ಖಿನ್ನವಾಗು, ಕೂಡ್ರು.
सिध् (೪ನೇ ಗ.) ಸಿದ್ಧ ಮಾಡು, ಸಿದ್ಧವಾಗು.
सृप् ಸರಿ, ಅಲ್ಲಾಡು, ಹೊಟ್ಟೆಹೊಸೆ.
स्निह् ಸ್ನೇಹ ಪಡು, ಪ್ರೀತಿ ಪಡು.
स्विद् (೪ನೇ ಗ.) ಬೆವರು.
हृष् (೪ನೇ ಗ.) ಆನಂದ ಪಡು.

[1] ಅಕಾರಾಗಮದ ಪೂರ್ವದಲ್ಲಿ ಧಾತುಗಳಿಗೆ ಬರುವ ರೂಪಾಂತರವನ್ನು ಕಂಸದಲ್ಲಿ ತೋರಿಸಿರುತ್ತೇವೆ.

24*

## (ಬ) ಈ ಭೇದದಂತೆ ವಿಕಲ್ಪವಾಗಿ ನಡಿಯುವ ಧಾತುಗಳು.

क्षुद् ಜಜ್ಜು, ಪುಡಿ ಮಾಡು.
घुष् ಪ್ರಸಿದ್ಧ ಮಾಡು.
च्युत् ಬೀಳು, ಭ್ರಷ್ಟವಾಗು.
छिद् ಕಡಿ, ಕೊಯ್ಯು.
जॄ (जर्) ಹಳೇದಾಗು.
तृप् ಸಂತುಷ್ಟನಾಗು, ತೃಪ್ತಿ ಪಡು.
दृप् ಗರ್ವ ಪಡು, ಹೆಮ್ಮೆ ತಾಳು.
दृश् (दर्श्) ನೋಡು.
निज् ತೊಳೆ.
बुध् ತಿಳಿ.
भिद् ಒಡಿ.
युज् ಜೋಡಿಸು, ಕೂಡಿಸು.
रिच् ತೆರವು ಮಾಡು, ಬರಿದು ಮಾಡು.
रुद् ಅಳು, ಒದರು.
रुध् ಸುತ್ತುಗಟ್ಟು, ಅಡ್ಡಿ ಮಾಡು.
विच् ಬೇರೆ ಮಾಡು.
शुच् (೪ನೇ ಗ.) ಶುದ್ಧವಾಗು.
श्वि (श्व) ಬೆಳಿ, ಹಬ್ಬು.
स्कन्द् (स्कद्) ಪುಟಿ, ಮೇಲಕ್ಕೆ ಹಾರು.
स्तम्भ् ಅಡ್ಡಿ ಮಾಡು.
स्फुट् ಬಡಿ, ಹೊರಬೀಳು.

(ಕೆಳಗಿನ ೧ನೇ ಗಣದ ಧಾತುಗಳು ಆತ್ಮನೇಪದಿಗಳು ಆದಾಗ್ಯೂ ಈ ಭೇದದಲ್ಲಿ ಪರಸ್ಮೈಪದಿಗಳಂತೆ ನಡೆಯುವವು.)

क्लृप् ಕಡೆಗೆ ಒಲಿ.
क्षुभ् ಕ್ಷೋಭಿಸು, ಅಲ್ಲಾಡು; ಅಸಮಾಧಾನ ಪಡು.
द्युत् ಹೊಳೆಯು.
ध्वंस् (ध्वस्) ನಷ್ಟವಾಗು.
भ्रंश् (भ्रश्) ಬೀಳು.
रुच् ಹೊಳೆಯು.
वृत् ಆಗು, ಇರು.
वृध् ಬೆಳೆ, ಹಬ್ಬು.
शुभ् ಒಪ್ಪು, ಶೋಭಿಸು.
स्यन्द् (स्यद्) ಸೋರು, ತಟತಟ ಬೀಳು.
स्रंस् (स्रस्) ಕೆಳಗೆ ಬೀಳು.
स्विद् ಬೆವಿ, ಬೆವರು.

---

೫. श्वि ಧಾತುವು ೩ನೇ ೫ನೇ ಭೇದದಂತೆಯೂ ನಡಿಯುತ್ತದೆ. ಉಳಿದ सेट् ಧಾತುಗಳು ೫ನೇ ಭೇದದಂತೆಯೂ, अनिट् ಧಾತುಗಳು ೪ನೇ ಭೇದದಂತೆಯೂ ನಡಿಯುತ್ತವೆ.

೬. श्लिष् ಧಾತುವು ಆಲಿಂಗನಾರ್ಥದಲ್ಲಿ ೭ನೇ ಭೇದದಂತೆ ನಡಿಯುತ್ತದೆ.

೭. ख्या, वच् ಧಾತುಗಳು ಹೊರ್ತಾಗಿ ಉಳಿದ ಅ, ಬ ಪಟ್ಟಿಗಳೊಳಗಿನ ಆತ್ಮನೇಪದೀ ಧಾತುಗಳು ಆತ್ಮನೇಪದದಲ್ಲಿ ೪ನೇ ಅಥವಾ ೫ನೇ ಭೇದದಂತೆ ನಡಿಯುತ್ತವೆ.

पुष् ಪೋಷಿಸು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अपुषत् | अपुषताम् | अपुषन् |
| ಮ. ಪು. | अपुषः | अपुषतम् | अपुषत |
| ಉ. ಪು. | अपुषम् | अपुषाव | अपुषाम |

## ೩ನೇ ಭೇದ.

೧. ಹತ್ತನೇ ಗಣದ ಧಾತುಗಳೂ ಪ್ರೇರಣಾರ್ಥಕ ಧಾತುಗಳೂ ಈ ಭೇದ ದಂತೆ ನಡಿಯುತ್ತವೆ.

೨. ರೂಪಸಿದ್ಧಿಕ್ರಮವು ಹ್ಯಾಗಂದರೆ:—

(ಅ) अय ಪ್ರತ್ಯಯಕ್ಕೆ ಲೋಪ ಬರುವದು, ಆದಾಗ್ಯೂ ಅದರ ಯೋಗ ದಿಂದಾಗತಕ್ಕ ಸಂಧಿಕಾರ್ಯಗಳೆಲ್ಲ ಆಗುತ್ತವೆ.

(ಬ) ಉಪಾಂತ್ಯಸ್ವರವು ಹ್ರಸ್ವವಾಗುವದು.

(ಕ) ತರುವಾಯ ಸಾಮಾನ್ಯ ನಿಯಮಗಳಂತೆ ಧಾತುವಿಗೆ ದ್ವಿತ್ವವಾಗು ವದು.

(ಡ) ಅಭ್ಯಾಸದ ಮುಂದೆ ಹ್ರಸ್ವಾಕ್ಷರವಿದ್ದು ಛಂದಃಶಾಸ್ತ್ರದಂತೆ ಅದು ಲಘ್ವ[1] ಕ್ಷರವಾಗದಿದ್ದರೆ, ಅಭ್ಯಾಸದ अ ಕಾರಕ್ಕೆ इ ಕಾರಾದೇಶವಾಗುವದು.

(ಇ) ಅಭ್ಯಾಸದ ಸ್ವರವು ಹ್ರಸ್ವವಿದ್ದು ಛಂದಃಸಿನಿಂದ ಗುರು ಆಗದೆ ಹಾಗೇ ಲಘು ಉಳಿದರೆ, ಅದು ದೀರ್ಘವಾಗುವದು.

(ಫ) ಈ ಮೇರೆಗೆ ಸಿದ್ಧವಾದ ಅಂಗಕ್ಕೆ अ ಪ್ರತ್ಯಯವನ್ನು ಹಚ್ಚಿ ತರು ವಾಯ ೨ನೇ ಭೇದದಲ್ಲಿ ಹೇಳಿದಂತೆ ಅನದ್ಯತನಭೂತಕಾಲದ ಪ್ರತ್ಯಯಗಳನ್ನು ಹಚ್ಚಲಾಗಿ ಈ ಭೇದದ ರೂಪಗಳು ಸಿದ್ಧವಾಗುತ್ತವೆ.

भावय - भू ಧಾತುವಿನ ಪ್ರೇರಣಾರ್ಥಕರೂಪ; ಇದರ ಅದ್ಯತನಭೂತಕಾಲದ ಪ್ರ. ಪುರುಷೈಕವಚನದ ರೂಪವನ್ನು ಸಿದ್ಧಮಾಡುವ; भावय - भाव् (ಅ ನೋಡು)— भव् (ಬ), बभव् (ಕ), बिभव् (ಡ), बीभव् (ಇ), बीभव् + अ + त् = बीभवत् = अ-बीभवत् (ಪುಟ ೧೮೪, ನಿಯಮ ೩).

### स्पन्द् - स्पन्दयति ಪ್ರೇರಣಾರ್ಥಕ.

स्पन्दय - स्पन्द् (ಅ), पस्पन्द् (ಕ ಮತ್ತು ಪುಟ ೭೫, ನಿಯಮ ೨ ಡ), अपस्पन्दत् (ಫ), स्पन्द् ಇದರ ಉಪಾಂತ್ಯಸ್ಥಾನದಲ್ಲಿ ಸ್ವರವಿಲ್ಲ, ಆದದರಿಂದ ಬ ನಿಯಮ ಹತ್ತುವದಿಲ್ಲ. ಅದರಂತೆ पस्पन्द्‌ದಲ್ಲಿ ಅಭ್ಯಾಸವಾದ प ದ ಮುಂದೆ स्प ವೆಂಬ ಗುರ್ವಕ್ಷರವಿರುವದರಿಂದ ಡ ನಿಯಮವು ಹತ್ತುವದಿಲ್ಲ. ಅದೇ ಮೇರೆಗೆ प ಅಭ್ಯಾಸದೊಳಗಿನ अ ಸ್ವರವು ಗುರ್ವಕ್ಷರವಾದದರಿಂದ ಇ ನಿಯಮವು ಹತ್ತು ವದಿಲ್ಲ.

---

[1] ಛಂದಃಶಾಸ್ತ್ರದಲ್ಲಿ ಹ್ರಸ್ವಸ್ವರದ ಮುಂದೆ ಸಂಯುಕ್ತವ್ಯಂಜನ ಬಂದರೆ, ಆ ಹ್ರಸ್ವವನ್ನು ದೀರ್ಘ ವೆಂದು ಎಣಿಸುತ್ತಾರೆ.

स्खल्-स्खलयति.

स्खलय-स्खल् (ಅ), चस्खल् (೯ ಮತ್ತು ಪುಟ ೭೫, ನಿಯಮ ೨ ಡ ಮತ್ತು ಬ), चिस्खल् (ಡ), अचिस्खलत् (ಫ); ಇಲ್ಲಿ ಬ, ಇ ನಿಯಮಗಳು ಹತ್ತುವದಿಲ್ಲ.

೩. ಧಾತುವು ಸ್ವರಾದಿ ಇದ್ದರೆ,

(ಅ) ಆ ಸ್ವರಾಕ್ಷರದ ಮುಂದಿನ ವ್ಯಂಜನಕ್ಕೆ ದ್ವಿತ್ವವಾಗುವದು, ಮತ್ತು ಅಭ್ಯಾಸದ ಮುಂದೆ इ ಆಗಮ ಬರುವದು.

(ಬ) ಆದ್ಯಸ್ವರಾಕ್ಷರದ ಮುಂದೆ न्, द्, र्‌ಗಳು ಆದಿಯಲ್ಲಿಯುಳ್ಳ ಸಂಯೋಗವಿದ್ದರೆ, न्, द्, र्‌ಗಳ ಮುಂದಿನ (ಆ ಸಂಯೋಗದ ೨ನೇ) ಅಕ್ಷರಕ್ಕೆ ದ್ವಿತ್ವವಾಗುವದು.

अट्-आटयति.

आटय-आट् (೨ಅ) -अट् (೨ಬ), अटिट्-आटिट् (ಪುಟ ೧೮೫, ನಿಯಮ ೩), आटिटत् (೨ಫ).

उन्द् ಧಾತು, उन्दय-उन्द् (೨ಅ), उन्दिद् (೩ ಬ), औन्दिद् (ಪುಟ ೧೮೫, ನಿಯಮ ೩, ಮತ್ತು ೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೭೧), औन्दिदत् (೨ಫ).

अर्ह् ಧಾತು, अर्हय-अर्ह् (೨ಅ)-अर्जिह् (೩ ಅ, ಬ ಮತ್ತು ಪುಟ ೭೫, ನಿಯಮ ೨ ಬ), आर्जिह् (ಪುಟ ೧೮೫, ನಿಯಮ ೩), आर्जिहत्.

उन्द् ಮತ್ತು अर्ह् ಧಾತುಗಳಲ್ಲಿ न् ಮತ್ತು र्‌ಗಳಿಗೆ ದ್ವಿತ್ವವಾಗದೆ ಅವುಗಳ ಮುಂದಿನ द्, ह्‌ಗಳಿಗೆ ಆಗುವದು (೩ ಬ).

೪. (ಅ) उ, ऊಕಾರಾಂತ ಧಾತುಗಳ ಅಭ್ಯಾಸದ अಕಾರದ ಮುಂದೆ अಕಾರ ಪರವಾದ ಓಷ್ಠ್ಯವರ್ಣಗಳೂ य्, व्, र्, ल्, ज्‌ಗಳೂ ಇರದಿದ್ದರೆ, ಅವಕ್ಕೆ ಅಭ್ಯಾಸದಲ್ಲಿ इಕಾರಾದೇಶವಾಗುವದರ ಬದಲು उಕಾರಾದೇಶವಾಗುವದು.

कु ಧಾತು, कावय-काव्-कव्-चकव्-चुकव्-चूकाव्-अचूकवत्.

भू ಧಾತು, भावय-भाव्-भव्-बभव्-बिभव्-बीभव्-अबीभवत्.

पू ಧಾತು, पावय-पाव्-पव्-पपव्-पिपव्-पीपव्-अपीपवत्.

(ಬ) स्रु, श्रु, द्रु, प्रु, प्लु, च्यु ಧಾತುಗಳ ಅಭ್ಯಾಸದ अಕಾರಕ್ಕೆ ವಿಕಲ್ಪದಿಂದ उಕಾರಾದೇಶವಾಗುವದು. ಉದಾ: अशिश्रवत् ಅಥವಾ अशुश्रवत्.

೫. भ्राज्, भाष्, भास्, दीप्, जीव्, मील्, पीड्, ಮತ್ತು ह्वे, लुट्, लुप् ಮುಂತಾದ ಧಾತುಗಳ ಉಪಾಂತ್ಯಸ್ವರಗಳು ವಿಕಲ್ಪದಿಂದ ಹ್ರಸ್ವವಾಗುವವು.

पीड्-पीडय-पीड्-पिपीड्-अपिपीडत् (ನಿಯಮ ೨ ಇ ಹತ್ತುವದಿಲ್ಲ). ಅಥವಾ पीडय-पीड्-पिड्-पिपिड्-पीपिड्-अपीपिडत्.

लुट्-लोटय-लोट् ಅಥವಾ लुट्-अलुलोटत् ಅಥವಾ अलूलुटत्.

೬. कथ्, वर्, शट्, रह्, स्पृह्, सूच्, मृग्, स्वन्, पार् ಧಾತುಗಳಿಗೆ ೨ನೇ ನಿಯಮದೊಳಗಿನ ಬ, ಡ, ಇಗಳ ಕಾರ್ಯಗಳಾಗುವದಿಲ್ಲ. कथ्-अचकथत्, वर्-अववरत्.

೭. स्मृ, दॄ, त्वर्, प्रथ्, म्रद्, स्तॄ, स्पश् ಧಾತುಗಳ ಅಭ್ಯಾಸದ अಕಾರಕ್ಕೆ इಕಾರಾದೇಶವಾಗುವದಿಲ್ಲ. वेष्ट् ಮತ್ತು चेष्ट् ಧಾತುಗಳ ಅಭ್ಯಾಸದ इಕಾರಕ್ಕೆ ವಿಕಲ್ಪದಿಂದ अಕಾರಾದೇಶವಾಗುವದು. ಉದಾ: असस्मरत्, अददरत्, अववेष्टत् ಅಥವಾ अविवेष्टत्.

೮. गण् ಧಾತುವಿಗೆ ಅದ್ಯತನಭೂತಕಾಲದಲ್ಲಿ ಎರಡು ರೂಪಗಳಾಗುತ್ತವೆ. ಪ್ರ. ಪು. ಏಕವಚನ अजगणत्, अजीगणत्.

೯. श्रि, द्रु, स्रु ಧಾತುಗಳು ಈ ಭೇದದಂತೆ ನಡಿಯುತ್ತವೆ. श्वि, धे ಧಾತುಗಳು ವಿಕಲ್ಪದಿಂದ ಈ ಭೇದದಂತೆ ನಡಿಯುತ್ತವೆ; ಆದರೆ धे ಧಾತುವಿನ ಸ್ವರಕ್ಕೆ ಆದೇಶವಾಗಿ ಬಂದ आಕಾರವು ದ್ವಿತ್ವದ ಕಾರ್ಯವಾದನಂತರ ಲೋಪವಾಗುವದು.

ಈ ನಿಯಮದಲ್ಲಿ ಹೇಳಿದ ಧಾತುಗಳಿಗೆ ದ್ವಿತ್ವದ ಕಾರ್ಯವನ್ನಷ್ಟೇ ಮಾಡಲು ಅವುಗಳ ಅಂಗಗಳು ಸಿದ್ಧವಾಗುವವು. ಈ ಅಂಗಗಳಿಗೆ ನಿಯಮ ೨ ಫದಲ್ಲಿ ಹೇಳಿದಂತೆ ಪ್ರತ್ಯಯಗಳನ್ನು ಹಚ್ಚಿ ರೂಪಗಳನ್ನು ಮಾಡಬೇಕು. ಉದಾ: श्रि = शिश्रि-अशिश्रियत् (अ ಪ್ರತ್ಯಯವು ದುರ್ಬಲವಾಗಿರುವದರಿಂದ ಪುಟ ೪೨, ನಿಯಮ ೪ ಖದಂತೆ इय् ಆಗುತ್ತದೆ). धे-धा-दधा-अदधत्.

स्रु-सुस्रु-अ+सुस्रु+अत्=असुस्रुवत्.

स्रु-ಪ್ರೇರ. स्रावय-स्राव्-स्रव् { सिस्रव् (ಪು. ೧೮೮, ನಿ. ೪ ಬ) — असिस्रव्+अ+त्= असिस्रवत्. सुस्रव्-अ+सुस्रव्+अ+त्=असुस्रवत्.

೧೦. स्थापयति ಎಂಬದರ ರೂಪವು अतिष्ठिपत्; पाययति ಎಂಬದರ ರೂಪವು अपीप्यत्; घ्रापयति ಎಂಬದರ ರೂಪವು अजिघ्रपत् ಅಥವಾ अजिघ्रिपत् ಆಗುತ್ತವೆ.

೧೧. ಧಾತುಗಳ ಉಪಾಂತ್ಯ ऋಕಾರವು ವಿಕಲ್ಪವಾಗಿ ಇದ್ದಕ್ಕಿದ್ದ ಹಾಗೆ ಉಳಿಯುವದು, ಉಪಾಂತ್ಯ ॠಕಾರವು ವಿಕಲ್ಪವಾಗಿ ಹ್ರಸ್ವವಾಗುವದು.

वृत् ಧಾತು, वर्तय { वर्त्-ववर्त्-अववर्तत् (ನಿಯಮ ೨ ಡ, ಇಗಳು ಹತ್ತುವದಿಲ್ಲ). ಅಥವಾ वृत् (ಈ ನಿಯಮದಿಂದ) - ववृत् - विवृत् (ನಿಯಮ ೨ ಡ) = वीवृत् (ನಿಯಮ ೨ ಇ) - अवीवृतत्. }

कृत् ಧಾತು, कीर्तय { कीर्त्-चिकीर्त्-अचिकीर्तत्. कृत्-चकृत्-चिकृत्-चीकृत्-अचीकृतत्. }

೧೨. लोक्, लोच्, शास्, श्लाघ्, बाध्, सेव्, वेप्, एज्, लाघ्, राध्, ताय्, वाश्, योध्, राज् ಮುಂತಾದ ಧಾತುಗಳ ಉಪಾಂತ್ಯಸ್ವರವು ಹ್ರಸ್ವವಾಗುವದಿಲ್ಲ. ಉದಾ: अलुलोकत्-अततायत्.

೧೩. ह्वे, स्वप् ಧಾತುಗಳಿಗೆ ಪ್ರೇರಣಾರ್ಥಕ ಅದ್ಯತನಭೂತಕಾಲದಲ್ಲಿ हु, सुप्‌ಗಳು ಆದೇಶವಾಗುತ್ತವೆ. श्वि ಧಾತುವಿಗೆ ವಿಕಲ್ಪವಾಗಿ शु ಆದೇಶವಾಗುತ್ತದೆ. ಉದಾ: अजूहवत्-अजुहावत्, असूषुपत्, अशूशवत् ಅಥವಾ अशिश्वयत्.

೧೪. ಈ ಭೇದದ ಆತ್ಮನೇಪದಿಧಾತುಗಳು ಆತ್ಮನೇಪದಪ್ರತ್ಯಯಗಳನ್ನು ಪರಸ್ಮೈಪದಿಧಾತುಗಳು ಪರಸ್ಮೈಪದಪ್ರತ್ಯಯನ್ನು ಧರಿಸುತ್ತವೆ.

हृ ಒಯ್ಯು.

ಪ್ರೇರಣಾರ್ಥಕ ಅದ್ಯತನಭೂತ (ಪರಸ್ಮೈಪದ).

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अजीहरत् | अजीहरताम् | अजीहरन् |
| ಮ. ಪು. | अजीहरः | अजीहरतम् | अजीहरत |
| ಉ. ಪು. | अजीहरम् | अजीहराव | अजीहराम |

ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अजीहरत | अजीहरेताम् | अजीहरन्त |
| ಮ. ಪು. | अजीहरथाः | अजीहरेथाम् | अजीहरध्वम् |
| ಉ. ಪು. | अजीहरे | अजीहरावहि | अजीहरामहि |

काशीं गन्तुकामः श्रीनगरान्निरगात्पण्डितः सह परिवारेण ।

भगो अर्यमा सविता पुरन्धिर्मह्यं त्वादुर्गार्हपत्याय देवाः ।

तस्मिन्गुर्वनुचरे गृहं प्रविष्टे यूयं किमधुनोदस्थात । गुरुरयमिति मत्वा ।

अस्मिन्निर्जने वने नष्टमश्वमियन्तं कालमान्विष्यन्नपि न समासदम् ।

इदमाम्रफलं वृक्षादपप्तत् । यदि रोचते गृहीत्वा स्वादस्व ।

हे गङ्गे यदीदृशेभ्यः पापेभ्यो मामुददीधरस्ततः सत्यमनाथशरणमसि विष्णुपदपङ्कजोद्भवासि ।

प्रातरारभ्य पञ्चसप्ततिं वृक्षानतिचाम ।

वत्सस्य मरणेन तद्विषयकाः सर्वे मनोरथा मेऽध्वसन् ।

क्रीडार्थमुपवनमगमतां दंपती तयोर्निवृत्तयोरात्मनः करुणवार्तां कथय ।

इयं बालिका दुःखवार्तां श्रुत्वामुहत् आश्वासयैनामुदकेन च सिञ्च ।

इमं ग्राममागच्छन्तौ भवन्निर्दिष्टे गहने वने नानापक्षिगणसमाकुलं महावटवृक्षं तमदर्शाव ।

उपाध्यायो देवानपूपुजदधुनातिथयो यथेष्टं भुञ्जताम् ।

अस्मिन्मण्डपे समाहतान्ब्राह्मणानहमजगणम् । पञ्च शतानि तेषां वर्तन्ते । एतेभ्योऽधुना दक्षिणां दातुमारभस्व ।

मच्चिन्तिता सरणिर्वरीयसेऽधिकारिणे नारुचदतः स तां निरास्थन्नवीनां च स्वयं कल्पितां प्रावीवृतत् ।

किं यूयमवोचत पुनरपि कथयत नाहमवहितोऽभूवम् ।

मुक्त्वा निःश्रीकमप्यब्जं मराली न गतान्यतः ।

भ्रमराली त्वगाद्वेगादिदं सदसदन्तरम् ॥

प्रातिष्ठिपत्स बोधार्थं कुम्भकर्णस्य राक्षसान् ॥

राघवस्यामुषः कान्तामाप्रैरुक्तो न चार्पिपः ॥

मुष्टिनाददरत्तस्य मूर्धानं मारुतात्मजः ॥

ನಾವು ಸೋಮರಸ ಕುಡಿದು (पा) ಅಮರರಾಗಿರುತ್ತೇವೆ (भू).

ದೇವದತ್ತನು ಈ ಚಿನ್ನವನ್ನು ತೂಗಿರುತ್ತಾನೆ (तुल्), ಇದರ ಆಭರಣಗಳನ್ನು ಮಾಡು.

ಕಲಿಂಗರಾಜನು ಪಾಟಲೀಪುತ್ರಪಟ್ಟಣವನ್ನು ಸುತ್ತುಗಟ್ಟಿರುತ್ತಾನೆ (रुध्), ಆದರೆ ಅವನ ಕಾಲಾಳುಗಳಲ್ಲಿ ಎಷ್ಟೋ ಜನರು ದಳ ಬಿಟ್ಟು ಹೋಗಿ (भ्रंश्), ಸುಲುಕೊಳ್ಳ ನೋಡುತ್ತಾರೆ.

ಅಷ್ಟಾವಕ್ರನು ಎಂಟು ಹರದಾರಿ ನಡಿದು ಬಂದು ದಣಿದಿರುತ್ತಾನೆ (श्रम्), ಅವನಿಗೆ ಅನ್ನಾ ನೀರು ಕೊಡು.

ದೆವ್ವಗಳುಂಟೆಂಬ ನಂಬಿಕೆಯು ನಿರಾಧಾರವಾದದ್ದೆಂಬದಾಗಿ ನನಗೆ ಮನಗಾಣಿಸುವದು ಅವನಿಂದ ಆಗಿರುವದಿಲ್ಲ (शक्).

ಆ ಪ್ರಧಾನನು ರಾಜ್ಯವನ್ನು ನ್ಯಾಯದಿಂದ ಆಳಿರುವನು (शास्); ಅವನ ಪ್ರಜೆಗಳು ಅವನಿಗೆ ಮೆಚ್ಚಿರುವರು.

ಗೋವಿಂದನು ತನ್ನ ಕಳೆದ ಪುಸ್ತಕವನ್ನು ಒಂದು ಸಮಗ್ರ ದಿವಸ ಹುಡುಕಿದನು; ಆದರೂ ಅದು ಸಿಕ್ಕಲಿಲ್ಲ (अधि + गम्, सम् + आ + सद्).

ನಾವು ಯಜ್ಞಸ್ತಂಭದ ಸಲುವಾಗಿ ಮುತ್ತಲ ಗಿಡದ ಕೊಂಬೆಯನ್ನು ಕಡಿದಿರುತ್ತೇವೆ (छिद्).

ನೀನು ಕೈಗಳನ್ನು ಇನ್ನೂ ತೊಳೆದುಕೊಳ್ಳಲಿಲ್ಲವೇ (क्षल्)?

ನಾನು ನನ್ನ ಹುಡುಗರಿಗೆ ಬಿಸಿ ನೀರಿನಿಂದ ಸ್ನಾನ ಮಾಡಿಸಿರುತ್ತೇನೆ (उष्णोदकेन ಮುಂದೆ स्ना ಧಾತುವಿನ ಪ್ರೇರಣಾರ್ಥಕ).

ನಾನು ಹೇಳಿದ (वच्) ಹಾಗೆ ಇನ್ನೂ ನೀರು ಕಾಸಲಿಲ್ಲವೇ (तप् ಧಾತುವಿನ ಪ್ರೇರಣಾರ್ಥಕ)?

ಆ ಮನೆಯ ಒಡೆಯನು ಸತ್ತದರಿಂದ ಅವರು ಅವನ ಮನೆಯನ್ನು ಕೆಡಹಿಸಿ (उद् + सद् ಧಾತುವಿನ ಪ್ರೇರಣಾರ್ಥಕ, ಅಥವಾ नश् ಧಾತುವಿನ ಪ್ರೇರಣಾರ್ಥಕ), ಅವನ ವಸ್ತ್ರಗಳನ್ನು ಸುಡಿಸಿರುತ್ತಾರೆ (दह् ಧಾತುವಿನ ಪ್ರೇರಣಾರ್ಥಕ).

---

## ಕೋಶ ೨೨.

अनाथ (ವಿ.) ಬಡ, ಗತಿ ಇಲ್ಲದ, ದಿಕ್ಕಿಲ್ಲದ.

अनुचर (ಪು.) ಸೇವಕ, ಊಳಿಗದವ.

अब्ज (ನ.) ತಾವರೆ, ಕಮಲ.

अवहित (अव + धा ಧಾ. ಭೂ. ಕೃ.) ಮನಸ್ಸಿಡುವ, ಲಕ್ಷ್ಯವುಳ್ಳ.

अष्टावक्र (ಪು.) ಒಬ್ಬ ಮನುಷ್ಯನ ಹೆಸರು.

अस् (೪ನೇ ಗ. निर् ಪೂರ್ವಕ) ತೆಗೆದುಹಾಕು, ರದ್ದು ಮಾಡು.

आप्त (ಪು.) ಸ್ನೇಹಿತ, ಗೆಳೆಯ, ಹಿತಚಿಂತಕ.

आली (ಸ್ತ್ರೀ.) ವಳಿ, ಸಾಲು, ಪಂಕ್ತಿ.

इ (निर् ಪೂರ್ವಕ) ಹೊರಡು, ಪ್ರಯಾಣಕ್ಕೆ ಹೊರಡು.

करुण (ವಿ.) ದುಃಖಕರವಾದ, ಶೋಕದ.

कल्पित (ವಿ.) (क्लृप् ಧಾತುವಿನ ಭೂತಕೃ.) ಕಲ್ಪಿಸಿದ, ರಚಿಸಿದ, ಗೊತ್ತುಮಾಡಿದ.

कुम्भकर्ण (ಪು.) ರಾವಣನ ತಮ್ಮ.

गन्तुकाम (ವಿ.) ಹೋಗಲಿಕ್ಕೆ ಕಾಂಕ್ಷೆಯುಳ್ಳ.

गार्हपत्य (ಪು.) ಗೃಹಸ್ಥರು ಯಾವಾಗಲೂ ಕಾಯತಕ್ಕ ಹೋಮಾಗ್ನಿ, ಗೃಹಕೃತ್ಯ.

तद्विषयक (ವಿ.) ಅವನ ವಿಷಯವಾದ, ಅವನಿಗೆ ಸಂಬಂಧಿಸಿದ.

तायृ (೧ನೇ ಗ. ಆ.) ಹಬ್ಬು, ಹಬ್ಬಿಸು.

दीप् (೪ನೇ ಗ. ಆ.) ಹೊಳೆ, ಶೋಭಿಸು.

हृ (उद् ಪೂರ್ವಕ) ಹೊರಗೆ ಎಳೆ, ಜಗ್ಗು; ರಕ್ಷಿಸು.

धे (೧ನೇ ಗ. ಪ.) ಮೊಲೆ ಉಣಿಸು, ಕುಡಿ.

ಕ್ವನ್ (೧ನೇ ಗ. ಪ.) ಶಬ್ದಮಾಡು, ಬಾರಿಸು.
नवीन (ವಿ.) ಹೊಸ.
परिवार (ಪು.) ಪರಿಜನ.
पलाश (ಪು.) ಮುತ್ತುಲಗಿಡ.
पुरंधि (ಪು.) ಒಂದು ದೇವತೆಯ ಹೆಸರು.
बोध (ಪು.) ಎಚ್ಚರಿಕೆ.
भग (ಪು.) ಒಂದು ದೇವತೆಯ ಹೆಸರು.
भ्रंश् (೧ನೇ ಗ. ಆ. ೪ನೇ ಗ. ಪ.) ಬೀಳು.
मण्डप (ಪು.) ಹಂದರ, ಮಂಟಪ.
मनोरथ (ಪು.) ಕಾಂಕ್ಷೆ, ಇಚ್ಛೆ,
मराली (ಸ್ತ್ರೀ.) ರಾಜಹಂಸಿ.
मारुतात्मज (ಪು.) ಗಾಳಿಯ ಮಗನು, ಮಾರುತಿ, ಪ್ರಾಣದೇವರು.
मुष्टि (ಪು. ಸ್ತ್ರೀ.) ಮುಷ್ಟಿ.
मृग् (೧೦ನೇ ಗ. ಆ.) ಹುಡುಕು.
रह् (೧೦ನೇ ಗ.) ಬಿಡು, ಬಿಡಿಸು.
वटवृक्ष (ಪು.) ಆಲದ ಮರ.
वर् (೧೦ನೇ ಗ.) ಆರಿಸು.
वृत् (प್ರ ಪೂರ್ವಕ, ಪ್ರೇರಣಾರ್ಥಕದಲ್ಲಿ) ಮಾಡಿಸು, ಪ್ರಚಾರದಲ್ಲಿ ತರು.
शङ्क् (೧೦ನೇ ಗ.) ವಂಚಿಸು, ತಕ್ಕಿಸು, ಮೋಸ ಮಾಡು.
सद् (सम्+आ ಪೂರ್ವಕ) ದೊರಕಿಸು, ಕಾಣು, ಪಡು.
समाकुल (ವಿ.) ಆಕ್ರಮಿಸಲ್ಪಟ್ಟ, ತುಂಬಿದ.
सरणि, सरणी (ಸ್ತ್ರೀ.) ಪದ್ಧತಿ, ಮಾರ್ಗ, ಶಿಸ್ತು.
सवितृ (ಪು.) ಸೂರ್ಯ.
सूच् (೧೦ನೇ ಗ.) ಸೂಚಿಸು, ತೋರಿಸು.
स्वामिन् (ಪು.) ಒಡೆಯ.

---

ನಂಬಿಗೆ श्रद्धा (ಸ್ತ್ರೀ.), विश्वास (ಪು.).
ಮನಗಾಣಿಸು इ (प्रति ಪೂರ್ವಕ), प्रतीतिं ग्रा.
ಇರುವಿಕೆ भाव (ಪು.), अस्तित्व (ನ.).
ದೆವ್ವ, ಪ್ರೇತ प्रेत (ಪು.), वेताल (ಪು.), पिशाच (ಪು.).
ಶಾಶ್ವತ, ಸಾಯದ अमृत (अ+मृ ಧಾ. ಭೂ. ಕೃ.), अमर (ವಿ.).
ನ್ಯಾಯವಾಗಿ, ಯಥಾರ್ಥವಾಗಿ धर्मेण, न्यायेन.
ದಂಡಿನ ಸಾಲು व्यूह (ಪು.).
ಪ್ರೀತಿ ಪಡು स्निह् (೪ನೇ ಗ. ಪ.).
ಅವನಲ್ಲಿ ಪ್ರೀತಿ ಪಡು तस्मिन्स्निह्यति.
ಸುಲಿಗೆ लोप्त्र (ನ.), लुण्ठन (ನ.).
ನಿರಾಧಾರವಾದ निर्मूल (ವಿ.).
ಈಗಲೂ अद्यापि.

---

## ೨೩ನೇ ಪಾಠ.

### ಅದ್ಯತನಭೂತ (ಮುಂದೆ ಸಾಗಿದ್ದು).

### ೬ನೇ ಭೇದ.

೧. अस् (ಆಗು) ಧಾತುವಿನ ಮೂರನೇ ಭೇದದ ಅದ್ಯತನಭೂತಕಾಲದ ರೂಪಗಳಲ್ಲಿ अस्‌ದ ಹಿಂದಿನ अ ವನ್ನು ಲೋಪ ಮಾಡಿ ಬೇರೆ ಸ್ವಲ್ಪ ಹೆಚ್ಚುಕಡಿಮೆ

ಮಾಡಿದರೆ ಉಂಟಾಗುವ ರೂಪಗಳು ಈ ಭೇದದ ಪ್ರತ್ಯಯಗಳಾಗುವವು. ಅವು ಯಾವವಂದರೆ:

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | सीत् | सिष्टाम् | सिषुः |
| ಮ. ಪು. | सीः | सिष्टम् | सिष्ट |
| ಉ. ಪು. | सिषम् | सिष्व | सिष्म |

ಇವು ಸುಲಭವಾಗಿ ನೆನಪಿನಲ್ಲಿ ನಿಲ್ಲುವದಕ್ಕೋಸ್ಕರ ಕಲಿಯುವವರು अस् ಧಾತುವಿನ ಅನದ್ಯತನಭೂತದ ರೂಪಗಳೇ ಇವೆಂದು ತಿಳಿದು ಅವುಗಳಲ್ಲಿ आकारಕ್ಕೆ सि ಆದೇಶವೂ, ಮಧ್ಯಮ ಪ್ರಥಮಪುರುಷೈಕವಚನದಲ್ಲಿ सि ಅಕ್ಷರಕ್ಕೆ ಲೋಪವೂ, सि ಮುಂದಿನ सकारಕ್ಕೆ षकಾರಾದೇಶವೂ, ಪ್ರಥಮಪುರುಷ ಬಹುವಚನದಲ್ಲಿ सन्‌ಕ್ಕೆ सुस् ಆದೇಶವೂ ಆಗಿರುವದೆಂದು ಲಕ್ಷ್ಯದಲ್ಲಿಡಬೇಕು.

೨. आकಾರಾಂತ ಧಾತುಗಳೂ, ೧೩ನೇ ಪಾಠದ ೧೪ನೇ ಸೂತ್ರದಲ್ಲಿ ಹೇಳಿದಂತೆ. आकಾರಾಂತವಾಗುವಂಥ ए, ऐ, ओಕಾರಾಂತ ಧಾತುಗಳೂ, यम्, रम्, नम् ಧಾತುಗಳೂ ಈ ಭೇದದಂತೆ ನಡಿಯುತ್ತವೆ.

೩. ಈ ಭೇದದ ಧಾತುಗಳು ಪರಸ್ಮೈಪದದಲ್ಲಿ ಮಾತ್ರ ನಡಿಯುತ್ತವೆ.

## ೭ನೇ ಭೇದ.

೧. ೨ನೇ ಭೇದದಂತೆ अस् ಧಾತುವಿನ ಅದ್ಯತನಭೂತಕಾಲದ ರೂಪಗಳ अಕಾರವನ್ನು ಲೋಪಿಸಿ ಉಳಿದದ್ದನ್ನು ಧಾತುಗಳಿಗೆ ಹಚ್ಚಿದರೆ, ಈ ಭೇದದ ರೂಪಗಳಾಗುತ್ತವೆ; ಅಥವಾ ಅನದ್ಯತನಭೂತಕಾಲದ ಪ್ರತ್ಯಯಗಳಲ್ಲಿ ಸ್ವಲ್ಪ ಹೆಚ್ಚುಕಡಿಮೆ ಮಾಡಿ ಅವನ್ನು स्+अಕ್ಕೆ ಹಚ್ಚಿದರೆ, ಈ ಭೇದದ ಪ್ರತ್ಯಯಗಳು ಸಿದ್ಧವಾಗುವವು; ಅವು ಯಾವವಂದರೆ:

| | ಪರಸ್ಮೈಪದ. | | | ಆತ್ಮನೇಪದ. | | |
|---|---|---|---|---|---|---|
| | ಏ. | ದ್ವಿ. | ಬಹು. | ಏ. | ದ್ವಿ. | ಬಹು. |
| ಪ್ರ. ಪು. | सत् | सताम् | सन् | सत | साताम् | सन्त |
| ಮ. ಪು. | सः | सतम् | सत | सथाः | साथाम् | सध्वम् |
| ಉ. ಪು. | सम् | साव | साम | सि | सावहि | सामहि |

೨. ಈ ಭೇದದ ಪರಸ್ಮೈಪದಿ ಧಾತುಗಳು ಪರಸ್ಮೈಪದದಲ್ಲಿ ಆತ್ಮನೇಪದಿ ಧಾತುಗಳು ಆತ್ಮನೇಪದದಲ್ಲಿ ನಡಿಯುತ್ತವೆ.

೩. ಶ, ಷ, ಸ, ಹ ಕಾರಾಂತವಾದ ಅನಿಟ್ ಧಾತುಗಳ (ಪುಟ ೯೪, ಟಿಪ್ಪಣಿ ೨ ನೋಡು) ಉಪಾಂತ್ಯಸ್ಥಾನದಲ್ಲಿ ಇ, ಉ, ಋ, ಲೃಕಾರಗಳಿದ್ದರೆ, ಅವು ಈ ಭೇದದಂತೆ ನಡಿಯುತ್ತವೆ.

೪. ಆದರೆ ದೃಶ ಧಾತುವು ಈ ಭೇದದಂತೆ ನಡಿಯುವದಿಲ್ಲ.

೫. ಸ್ಪೃಶ, ಮೃಶ, ಕ್ರುಷ ಧಾತುಗಳು ವಿಕಲ್ಪದಿಂದ ಈ ಭೇದದಂತೆ ನಡಿಯುತ್ತವೆ.

೬. ದುಹ, ದಿಹ, ಲಿಹ, ಗುಹ ಧಾತುಗಳಿಗೆ ಆತ್ಮನೇಪದ ಪ್ರಥಮಪುರುಷೈಕವಚನದ, ಮತ್ತು ಮಧ್ಯಮಪುರುಷೈಕಬಹುವಚನಗಳ, ಮತ್ತು ಉತ್ತಮಪುರುಷ ದ್ವಿವಚನದ ಪ್ರತ್ಯಯಗಳು ಪರವಾಗಲು ಆ ಪ್ರತ್ಯಯಗಳ ಆದಿಯಲ್ಲಿರುವ ಅ, ಅಥವಾ ಆ ಅಕ್ಷರಕ್ಕೆ ವಿಕಲ್ಪದಿಂದ ಲೋಪ ಬರುವದು.

ಗ್ಲೈ ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अग्लासीत् | अग्लासिष्टाम् | अग्लासिषुः |
| ಮ. ಪು. | अग्लासीः | अग्लासिष्टम् | अग्लासिष्ट |
| ಉ. ಪು. | अग्लासिषम् | अग्लासिष्व | अग्लासिष्म |

ಲಿಹ ನೆಕ್ಕು.

ಪರಸ್ಮೈಪದ.

| | | | |
|---|---|---|---|
| ಪ್ರ. ಪು. | अलिक्षत् | अलिक्षताम् | अलिक्षन् |
| ಮ. ಪು. | अलिक्षः | अलिक्षतम् | अलिक्षत |
| ಉ. ಪು. | अलिक्षम् | अलिक्षाव | अलिक्षाम |

ಆತ್ಮನೇಪದ.

| | | | |
|---|---|---|---|
| ಪ್ರ. ಪು. | अलिक्षत-अलीढ | अलिक्षाताम् | अलिक्षन्त |
| ಮ. ಪು. | अलिक्षथाः-अलीढाः | अलिक्षाथाम् | अलिक्षध्वम् - अलीढ्वम् |
| ಉ. ಪು. | अलिक्षि | अलिक्षावहि-अलिह्वहि | अलिक्षामहि |

अ + लिह् + सत् = अ + लिढ् + सत् (ಪುಟ ೫೭, ನಿಯಮ ಗ) = अ + लिक् + सत् (ಪುಟ ೫೮, ನಿಯಮ ಚ) = अ + लिक् + षत् (೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣಿ ೨) = अलिक्षत्.

अ + दिह् + सत् = अ + दिघ् + सत् (ಪುಟ ೫೯, ನಿಯಮ ಛ) = अ + धिघ् + सत् (ಪುಟ ೫೯, ನಿಯಮ ಝ) = अ + धिक् + सत् (೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೫, ಟಿಪ್ಪಣಿ ೨) = अ + धिक् + षत् = अधिक्षत्.

अ + दिश् + सत् = अ + दिष् + सत् (ಪುಟ ೬೨, ನಿಯಮ ಟ) = अ + दिक् + सत् (ಪುಟ ೫೮, ನಿಯಮ ಚ) = अ + दिक् + षत् = अदिक्षत्.

अ+कृष् +सत् = अ + कृक् + सत् = अ + कृक् + षत् = अकृक्षत्.

अ + लिह् + सत = अ + लिढ् + सत = अ + लिष् + सत = अ + लिक् + सत = अलिक् + षत = अलिक्षत. ಅಥವಾ अ + लिह् + सत = अ + लिह् + त (ಪುಟ ೧೮೭, ನಿಯಮ ೬) = अलिढ् + त (ಪುಟ ೫೭, ನಿಯಮ ಗ) = अ + लिढ् + ध (ಪುಟ ೫೭, ನಿಯಮ ಘ) = अ + लिढ् + ढ (೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೨೪, ಟಿಪ್ಪಣಿ ೧ ಉತ್ತರ ಭಾಗ) = अ + ली + ढ (ಪುಟ ೫೭, ನಿಯಮ ಜ) = अलीढ.

नित्यकर्मानुष्ठानायात्वासीस्तच्छूद्रादीन्मा स्प्राक्षः ।

वेणुधमन्याग्निमध्मासिषम् । तदस्मिन्प्रदीप्ते वह्नावाहुतीः प्रास्य ।

भोः पुरोहित भवदाज्ञामनुसृत्य बटवेऽहं सावित्रीमुपादिक्षम् । तदधुनान्यत्करणीयं दर्शय ।

विवाहविधेरितिकर्तव्यतामत्रत्या ब्राह्मणा नाज्ञासिषुरतो मां तत्संपादनायाह्वन् ।

अस्तमयासीद्रविस्तिमिरेणावृतं नभः । तत्किमद्यापि गां नाधुक्षत पयः ।

कृषीवला भूमिमकृक्षन्परं त्वार्द्रासु स्थितेऽपि सूर्ये पर्जन्यो न वर्षति ।

मा वयं भ्रातरः परस्परं द्विक्षामेत्यस्माकं पितासन्नमरणो रिक्थस्य समानांश्चतुरो भागानकरोत् ।

महाकार्यारम्भे देवो गुरुजनश्च वन्दितव्य इति वचनमनुरुध्य गृहदेवतां मातरं पितरमन्यांश्च वृद्धान्प्राणंसिष्म ।

कूपतडागादिनिर्माणाय महान्तो यत्ना यूष्माभिः कृतास्ते कस्मिन्पर्यवासासिषुः ।

इदं मधु किं नालिक्षः । रुचिकरमेतत् ।

ಅವನು ತನ್ನ ಕೂಸನ್ನು ಅಪ್ಪಿಕೊಂಡು (श्लिष्) ಬಹಳ ಅತ್ತನು (रुद्).

ನಾವು ನಮ್ಮ ಕುದುರೆಗಳನ್ನು ಏರಿಕೊಂಡು (आ + रुह्) ಈಗ ಶತ್ರುಗಳಿಗೆ ಎದುರಾಗಿ ಹೋಗುತ್ತೇವೆ.

ನಿನ್ನೆ ತಂದ ಹೂವುಗಳು ಈ ಹೊತ್ತು ಬಾಡಿರುತ್ತವೆ (म्लै), ಅವುಗಳನ್ನು ಚಲ್ಲಿ ಹೊಸವು ತಾ.

ಚಂದ್ರಕೇತುವೂ ಲವನೂ ಒಬ್ಬರಿಗೊಬ್ಬರು ಯುದ್ಧವನ್ನು ಹ್ಯಾಗೆ ಮಾಡಿದ ರೆಂಬದನ್ನೂ, ರಾಮನು ಅವರಿಗೆ ಯುದ್ಧವನ್ನು ನಿಲ್ಲಿಸ ಹೇಳಿದ್ದನ್ನೂ[1] ನಮಗೆ ತಿಳಿಸಿ ಅವನು ಈಗ ಸುಮ್ಮನಿರುತ್ತಾನೆ (वि + रम् ಪರ.).

ಕಾಯಿದೆಗಳನ್ನು ಕಲಿಯುವದು ಲೇಸೋ, ವೈದ್ಯಶಾಸ್ತ್ರವನ್ನು ಕಲಿಯುವದು ಲೇಸೋ ಎಂಬದನ್ನು ಕುರಿತು ನಾನು ಇನ್ನೂ ಚನ್ನಾಗಿ ಆಲೋಚಿಸಿಲ್ಲ (वि + मृश्).

ಆ ಹೂವಿನ ನಾತ ನೋಡಿದಿಯಾ (घ्रा)? ಅದು ಬಹು ಸುಗಂಧವುಂಟು.

ಅರಸನು ಸಿಂಹಾಸನದ ಮೇಲೆ ಕೂತು (उप + विश्) ಮಂತ್ರಿಗಳೊಡನೆ ಆಲೋಚಿಸುತ್ತಾನೆ.

ನಾವು ಇದು ವರೆಗೂ ನಿನ್ನನ್ನು ಕೇಡಿನಿಂದ ಕಾಪಾಡಿದೆವು (पा), ಆದರೆ ನೀನು ಈಗ ನಮಗೆ ಮೋಸ ಮಾಡ ನೋಡುತ್ತೀ; ಇದಕ್ಕಿಂತ ಹೆಚ್ಚು ದುಃಖಕರವು ಯಾವದು?

ನಿನಗೆ ಮೆಚ್ಚಿಕೆಯಾಗದ ಕೆಲಸವನ್ನು ಎಂದೂ ಮಾಡದಂಥ, ಪ್ರೀತಿಯುಳ್ಳಂಥ ಹೆಂಡತಿಯನ್ನು ನೀನು ಯಾಕೆ ಬಿಟ್ಟಿ (हा)?

---

## ಕೋಶ ೭೩.

अनुष्ठान (ನ.) ಮಾಡುವಿಕೆ, ಕರ್ಮ.
अस्त (ಪು.) ಸೂರ್ಯಾದಿಗಳ ಮುಳುಗುವಿಕೆ.
आर्द्रा (ಸ್ತ್ರೀ.) ಆರನೇ ನಕ್ಷತ್ರ.
आवृत (ವಿ.) ತುಂಬಿದ, ಹೊದಗಿಸಿದ.
आसन्नमरण (ವಿ.) ತೀರ ಸಾಯುತ್ತಿದ್ದ, ಮರಣೋನ್ಮುಖ.
आहुति (ಸ್ತ್ರೀ.) ಬಲಿ.
इतिकर्तव्यता (ಸ್ತ್ರೀ.) ಮಾಡುವ ಪದ್ಧತಿ.
करणीय (ನ.) ಮಾಡತಕ್ಕ.
गृहदैवता (ಸ್ತ್ರೀ.) ಕುಲದೇವರು.
तिमिर (ನ.) ಕತ್ತಲೆ, ಕಾಳು.
धमनी (ಸ್ತ್ರೀ.) ಕೊಳವೆ, ಊದಗೊಳವೆ.
नित्यकर्मन् (ನ.) ಪ್ರತಿ ದಿವಸ ಮಾಡತಕ್ಕ ಕೃತ್ಯ, ಆಹ್ನಿಕ.
पर्जन्य (ಪು.) ಮಳೆ.
प्रदीप्त (ವಿ.) ಉರಿಯುವ.
भाग (ಪು.) ಪಾಲು, ಭಾಗ.
रिक्थ (ನ.) ಸಂಪತ್ತು, ಆಸ್ತಿ.
रुचिकर (ವಿ.) ಸವಿ, ಬಾಯಿಗೆ ಹಿತವಾದ.
वन्दितव्य (ವಿ.) ಮಾನ ಕೊಡತಕ್ಕ, ಮರ್ಯಾದೆ ಮಾಡತಕ್ಕ.
वृष् (೧ನೇ ಗ. ಪ.) ಮಳೆ ಸುರಿಯು.
वेणु (ಪು.) ಬಿದುರು, ಕೊಳ.
संपादन (ನ.) ಸಾಧಿಸುವದು, ಲಭಿಸುವದು.
समान (ವಿ.) ಸರಿಯಾದ.
सावित्री (ಸ್ತ್ರೀ.) ಬ್ರಾಹ್ಮಣರಿಂದ ಪ್ರತಿ ದಿನ ಪಠಿಸಲ್ಪಡುವ 'गायत्री' ಎಂಬ ಋಗ್ವೇದದ ಮಂತ್ರವು.
सो (೪ನೇ ಗ. ಪ.) ಮುಗಿ, ಮುಗಿಸು.
परि + अव + सो ಫಲಿತವಾಗು, ಪರಿಣಮಿಸು.

---

[1] प्रशाम्यतमित्यादिशत्.

ಮೋಸ ಮಾಡು, ಕುತ್ತಿಗೆಗೊಯ್ಕತನ ಮಾಡು द्रुह् (೪ನೇ ಗ. ಪ.).

ದೊಡ್ಡ ಧ್ವನಿಯಿಂದ, ಗಟ್ಟಿಯಾಗಿ प्रमुक्त-कण्ठम् (ಅ.).

ಚಂದ್ರಕೇತು (ರಾಮಚಂದ್ರನ ತಮ್ಮನಾದ ಲಕ್ಷ್ಮಣನ ಮಗನು) चन्द्रकेतु (ಪು.).

ಕೇಡು अनर्थ (ಪು.), पीडा (ಸ್ತ್ರೀ.), संकट (ನ.).

ಸುವಾಸಿಕ सुरभि (ವಿ.).

ಕಾಯಿದೆ, ಧರ್ಮಶಾಸ್ತ್ರ धर्मशास्त्र (ನ.).

ದಾಳಿಮಾಡು, ದಂಡೆತ್ತಿಹೋಗು अभि+गम्.

ವೈದ್ಯಶಾಸ್ತ್ರ आयुर्वेद (ಪು.), वैद्यक (ನ.).

ಹೆಚ್ಚು ದುಃಖಕರವಾದ दुःखतर (ವಿ.).

## ೨೪ನೇ ಪಾಠ.

### ೧ನೇ ಭಾಗ.

#### ಅದ್ಯತನಭೂತ (ಮುಂದೆ ಸಾಗಿದ್ದು).

#### ೪ನೇ, ೫ನೇ ಭೇದಗಳು.

೧. ಅದ್ಯತನಭೂತಕಾಲದ ೪ನೇ, ೫ನೇ ಭೇದದ ರೂಪಗಳು ರೂಢಿಯಲ್ಲಿ ಬಹಳ ಉಂಟು. ಹಿಂದಿನ ಐದು ಭೇದಗಳಂತೆ ನಡಿಯದಂಥ ಧಾತುಗಳು ಈ ಎರಡರಲ್ಲಿ ಒಂದರಂತೆ ನಡಿಯುತ್ತವೆ. ೧ನೇ, ೨ನೇ, ೩ನೇ, ೬ನೇ, ೭ನೇ ಭೇದಗಳಲ್ಲಿ ಒಂದರಂತೆ ವಿಕಲ್ಪದಿಂದ ನಡಿಯುವ ಧಾತುಗಳ ಸಾಮಾನ್ಯ ರೂಪಗಳು ಮತ್ತು ಈ ಐದು ಭೇದಗಳಲ್ಲಿ ಒಂದರ ಪರಸ್ಮೈಪದ ಪ್ರತ್ಯಯಗಳನ್ನು ಮಾತ್ರ ಧರಿಸುವ ಉಭಯವಿಧ ಧಾತುಗಳ ಆತ್ಮನೇಪದರೂಪಗಳು ೪ನೇ ಅಥವಾ ೫ನೇ ಭೇದದಂತೆ ಆಗುತ್ತವೆ.

೨. (ಅ) ಐದನೇ ಭೇದದಲ್ಲಿ ಪ್ರತ್ಯಯಗಳ ಪೂರ್ವದಲ್ಲಿ इಕಾರಾಗಮವಾಗುತ್ತದೆ, ೪ನೇ ಭೇದದಲ್ಲಿ ಆಗುವದಿಲ್ಲ. ಆದದರಿಂದ सेट् ಧಾತುಗಳು ೫ನೇ ಭೇದದಂತೆಯೂ अनिट् ಧಾತುಗಳು ೪ನೇ ಭೇದದಂತೆಯೂ ನಡಿಯುತ್ತವೆಂದು ತಿಳಿಯಬೇಕು.

(ಬ) स्तु, सु ಧಾತುಗಳು अनिट् ಇದ್ದಾಗ್ಯೂ ಪರಸ್ಮೈಪದದಲ್ಲಿ ೫ನೇ ಭೇದದಂತೆ ನಡಿಯುತ್ತವೆ.

(ಕ) वृ ಮತ್ತು ಸಂಯೋಗಾದಿ ಋಕಾರಾಂತ ಧಾತುಗಳೂ ॠಕಾರಾಂತ ಧಾತುಗಳೂ ಆತ್ಮನೇಪದಿಯಾಗಿದ್ದರೆ,

(ಡ) सेट् ಧಾತುಗಳೂ ಎರಡೂ ಭೇದಗಳಂತೆ ನಡಿಯುತ್ತವೆ.

(ಇ) धू (ಪರ.), अञ्ज् ಧಾತುಗಳು ೫ನೇ ಭೇದದಂತೆ ನಡಿಯುತ್ತವೆ.

೩. ಆತ್ಮನೇಪದಪ್ರತ್ಯಯಗಳು ಪರವಾಗಲು स्तृ, क्रम् ಧಾತುಗಳಿಗೆ इಕಾರಾಗಮವಾಗುವದಿಲ್ಲ.

೪. (ಅ) अस् (ಆಗು) ಧಾತುವಿನ ಅನದ್ಯತನಭೂತಕಾಲದ ರೂಪಗಳ ಆರಂಭದ आಕಾರವನ್ನು ಲೋಪಿಸಿ ಉಳಿದ ಭಾಗಗಳು ಪ್ರತ್ಯಯಗಳಂತೆ ಪ್ರಯೋಗಿಸಲ್ಪಡುತ್ತವೆ. ಆದರೆ (ಬ) ಪ್ರಥಮಪುರುಷ ಬಹುವಚನದಲ್ಲಿ सन्‌ಕ್ಕೆ सुः ಆದೇಶವಾಗುವದೆಂತಲೂ, (ಕ) ಈ ಭಾಗಗಳ ಹಿಂದೆ ೨ನೇ ಭೇದಕ್ಕೆ ಹೇಳಿದ इ ಆಗಮವಾಗಲು ಮಧ್ಯಮ ಪ್ರಥಮ ಪುರುಷೈಕವಚನಗಳ स್‌ಕ್ಕೆ ಲೋಪ ಬರುವದೆಂತಲೂ, ಹಿಂದೆ ಹೇಳಿದ ನಿಯಮಗಳಿಗನುಸರಿಸಿ इಕಾರದ ಮುಂದಿನ सಕಾರಕ್ಕೆ षಕಾರಾದೇಶವಾಗುವದೆಂತಲೂ, षಕಾರದ ಮುಂದಿನ तಕಾರಕ್ಕೆ टಕಾರಾದೇಶವಾಗುವದೆಂತಲೂ ತಿಳಿಯಬೇಕು.

(ಡ) ध्वे ಪ್ರತ್ಯಯಕ್ಕೆ ढ्वे ಆದೇಶವಾಗುವ ಸಂಬಂಧದ ನಿಯಮವು (ಪುಟ ೧೬, ನಿಯಮ ೪) ಈ ಭೇದಗಳ ध्वम् ಪ್ರತ್ಯಯಕ್ಕೆ ಹತ್ತುತ್ತದೆ. ध्वम्‌ದ ಹಿಂದೆ र्‌ಕಾರವಿದ್ದರೂ ಅದೇ ಪ್ರಕಾರದ ಕಾರ್ಯವಾಗುತ್ತದೆ.

(ಗ) ಅನುನಾಸಿಕ ಅರ್ಧಸ್ವರಗಳ ಹೊರ್ತಾಗಿ ಉಳಿದ ವ್ಯಂಜನಗಳ ನಡುವೆ स् ಬರಲು ಅದಕ್ಕೆ ಲೋಪ ಬರುವದು. ಉದಾ: अभिद्+स्त=अभिद्+त=अभित्+त=अभित्त; अभैद्+स्ताम्=अभैत्ताम्.

ಪ್ರತ್ಯಯಗಳು.

| ೧ನೇ ಭೇದ. | | | ೨ನೇ ಭೇದ. | | |
|---|---|---|---|---|---|
| ಪರಸ್ಮೈಪದ. | | | ಪರಸ್ಮೈಪದ. | | |
| ಏ. | ದ್ವಿ. | ಬಹು. | ಏ. | ದ್ವಿ. | ಬಹು. |
| सीत् | स्ताम् | सुः | ईत् | इष्टाम् | इषुः |
| सीः | स्तम् | स्त | ईः | इष्टम् | इष्ट |
| सम् | स्व | स्म | इषम् | इष्व | इष्म |
| ಆತ್ಮನೇಪದ. | | | ಆತನ್ಮೇಪದ. | | |
| स्त | साताम् | सत | इष्ट | इषाताम् | इषत |
| स्थाः | साथाम् | ध्वम् | इष्ठाः | इषाथाम् | इध्वम् |
| सि | स्वहि | स्महि | इषि | इष्वहि | इष्महि |

ಪರಸ್ಮೈಪದ.

## ೧ನೇ ಭೇದ.

೫. ೧ನೇ ಭೇದದ ಪರಸ್ಮೈಪದರೂಪಗಳಲ್ಲಿ ಧಾತುವಿನ ಸ್ವರಕ್ಕೆ ವೃದ್ಧಿಯಾಗುವದು. ಉದಾ: भिद् ಧಾತು अभैत्सीत्; नी ಧಾತು अनैषीत्.

### ೫ನೇ ಭೇದ.

೬. ೫ನೇ ಭೇದದ ಪರಸ್ಮೈಪದರೂಪಗಳಲ್ಲಿ

(ಅ) ಧಾತುಗಳ ಅಂತ್ಯ इ, ई, उ, ऊ, ऋ, ॠ, ऌ, ॡಕಾರಗಳಿಗೂ,

(ಬ) र्, ल्ಕಾರಾಂತ ಧಾತುಗಳ ಉಪಾಂತ್ಯ अಕಾರಕ್ಕೂ,

(ಕ) वद्, व्रज् ಧಾತುಗಳೊಳಗಿನ अಕಾರಕ್ಕೂ ನಿತ್ಯವಾಗಿ ವೃದ್ಧಿಯಾಗುವದು. ಉದಾ: लु-अलौ+ईत् = अलावीत्, चर्-अचारीत्, फल्-अफालीत् ಇತ್ಯಾದಿ.

೭. र्, ल्ಗಳು ಹೊರ್ತಾಗಿ ಉಳಿದ ವ್ಯಂಜನಗಳು ಕಡೆಯಲ್ಲಿ ಉಳ್ಳಂಥ ವ್ಯಂಜನಾದಿ ಧಾತುಗಳೊಳಗಿನ (ಛಂದಃಶಾಸ್ತ್ರದಂತೆ) ಗುರು ಆಗದಂಥ अಕಾರಕ್ಕೆ ವಿಕಲ್ಪದಿಂದ ವೃದ್ಧಿಯಾಗುವದು. ಉದಾ: गद्-अगदीत् ಅಥವಾ अगादीत्.

೮. ಅಪವಾದಗಳು.—ह्, म्, य्ಕಾರಾಂತ ಧಾತುಗಳಿಗೂ क्षण्, श्वस्, जागृ, कख्, लग्, हस्, श्वि ಮುಂತಾದ ಕೆಲವು ಧಾತುಗಳಿಗೂ ವೃದ್ಧಿಯಾಗುವದಿಲ್ಲ. ಉದಾ: क्रम्-अक्रमीत्.

೯. ಉಪಾಂತ್ಯ इ, उ, ऋ, ऌಗಳಿಗೆ ೫ನೇ ಭೇದದಲ್ಲಿ ಗುಣವಾಗುವದು. ಉದಾ: सिध्-असेधीत्, शुच्-अशोचीत्, कृत्-अकर्तीत्.

### ಆತ್ಮನೇಪದ.

### ೪ನೇ ಭೇದ.

೧೦. ೪ನೇ ಭೇದದ ಆತ್ಮನೇಪದರೂಪಗಳಲ್ಲಿ

(ಅ) ಅಂತ್ಯ इ, ई, उ, ऊಕಾರಗಳಿಗೆ ಗುಣವಾಗುವದು.

(ಬ) ಆದರೆ ಅಂತ್ಯ ऋಕಾರಕ್ಕೂ ಉಪಾಂತ್ಯ ಸ್ವರಕ್ಕೂ ಯಾವ ಕಾರ್ಯವೂ ಆಗುವದಿಲ್ಲ. ಉದಾ: नी-अनेष्ट, सु-असोष्ट, भृ-अभृषत (ಪ್ರ. ಪು. ಬಹುವ.), भिद्-अभित्त.

(ಕ) ಅಂತ್ಯ ॠಕಾರಕ್ಕೆ ಪುಟ ೨, ನಿಯಮ ೯ ಹತ್ತುತ್ತದೆ. ಉದಾ: स्तॄ-अस्तीर्ष्ट, वॄ-अवूर्ष्ट.

೧೧. ಹ್ರಸ್ವಸ್ವರದ ಮುಂದಿನ स्त, स्थाः ಪ್ರತ್ಯಯಗಳ स्ಕ್ಕೆ ಲೋಪ ಬರುವದು. ಉದಾ: हृ-अहृत.

೧೨. ಆತ್ಮನೇಪದದಲ್ಲಿ दा, धा ಧಾತುಗಳು ಆರ್ಧಧಾತುಕ ಪ್ರತ್ಯಯಗಳ ಮುಂದೆ ಬರಲು, दा ಮತ್ತು धा ರೂಪಗಳನ್ನು ಹೊಂದುವ ಧಾತುಗಳು[1] स्था

---

[1] ಅಂದರೆ, दै (೧ನೇ ಗ. ಪ.) ಸ್ವಚ್ಛ ಮಾಡು, दा (೨ನೇ ಗ. ಪ.) ಕಡಿ, ಇವು ೬ನೇ ಭೇದದಂತೆ ನಡಿಯುತ್ತವೆ; ಇವುಗಳಿಗೆ ಈ ನಿಯಮವು ಹತ್ತುವದಿಲ್ಲ. (ಪುಟ ೧೯೬, ನಿಯಮ ೨ ನೋಡು.)

ಧಾತುವು ಇವುಗಳ आಕಾರಕ್ಕೆ इಕಾರಾದೇಶವಾಗುವದು. ಈ इಕಾರಕ್ಕೆ ಗುಣ ವಾಗುವದಿಲ್ಲ. ಉದಾ: अदित, अदिषाताम् ಇತ್ಯಾದಿ.

## ೫ನೇ ಭೇದ.

೧೩. ೫ನೇ ಭೇದದಲ್ಲಿ ಅಂತ್ಯಸ್ವರಕ್ಕೂ ಉಪಾಂತ್ಯಹ್ರಸ್ವಸ್ವರಕ್ಕೂ ಗುಣ ವಾಗುತ್ತದೆ. ಉದಾ: लू–अलविष्ट, मुद्–अमोदिष्ट.

೧೪. ೪ನೇ ಭೇದದ ಆತ್ಮನೇಪದದಲ್ಲಿ हन् ಧಾತುವಿನ न् ಕಾರಕ್ಕೆ ನಿತ್ಯವಾ ಗಿಯೂ, गम्, यम् (ಮದುವೆಯಾಗು) ಧಾತುಗಳ म् ಕಾರಕ್ಕೆ ವಿಕಲ್ಪವಾಗಿಯೂ ಲೋಪ ಬರುವದು. हन् ಧಾತು ಪರಸ್ಮೈಪದದಲ್ಲಿ वध् ರೂಪವನ್ನು ಹೊಂದು ತ್ತದೆ; ಆತ್ಮನೇಪದದಲ್ಲಿ ಈ ರೂಪವನ್ನು ವಿಕಲ್ಪವಾಗಿ ಹೊಂದುತ್ತದೆ. वध् ಧಾತು ವಿನ ಸ್ವರಕ್ಕೆ ವೃದ್ಧಿಯಾಗುವದಿಲ್ಲ.

आ + हन् ಧಾತು. (ಆತ್ಮ.) आ + अ + हन् + स्त - ह + स्त - ह + त (೧೪ನೇ, ೧೧ನೇ ನಿಯಮ ನೋಡು) = अहत - आहत ಪ್ರ. ಪು. ಏಕವಚನ, आहसाताम् ಪ್ರ. ಪು. ದ್ವಿವಚನ, आहसत ಪ್ರ. ಪು. ಬಹುವಚನ, ವಿಕಲ್ಪದಿಂದ आवधिष्ट ಇತ್ಯಾದಿ ಆಗುವದು.

उप + यम् (ಆ.) = उप + अ + यम् + स्त =
- उप + अ + य + त = उपायत – उपायसाताम् ಇತ್ಯಾದಿ.
- उप + अ + यम् + स्त = उपायंस्त उपायंसाताम् ಇತ್ಯಾದಿ.

सम् + गम् (ಆ.) = सम् + अ + गम् + स्त =
- सम् + अ + ग + त = समगत, समगसाताम् ಇತ್ಯಾದಿ.
- सम् + अ + गम् + स्त = समगंस्त, समगंसाताम् ಇತ್ಯಾದಿ.

೧೫. पद् ಧಾತುವಿನ ಅದ್ಯತನಭೂತದ ಪ್ರ. ಪು. ಏಕವಚನವು अपादि ಯಾಗುತ್ತದೆ; ಅಂದರೆ ಈ ಧಾತುವಿನ ಮುಂದಿನ स्त ಪ್ರತ್ಯಯಕ್ಕೆ इ ಆದೇಶ ವಾಗುವದು. दीप्, जन्, बुध्, पूर्, ताय्, प्याय् ಧಾತುಗಳ ಮುಂದಿನ स्त (ಅಥವಾ इष्ट) ಪ್ರತ್ಯಯಕ್ಕೆ ವಿಕಲ್ಪದಿಂದ इ ಆದೇಶವಾಗುವದು.

೧೬. (ಅ) ಧಾತುವಿನ ಅಂಗಕ್ಕೆ ಆತ್ಮನೇಪದಪ್ರತ್ಯಯಗಳನ್ನು ಹಚ್ಚಲಾಗಿ ಅದ್ಯತನಭೂತಕಾಲದ ಕರ್ಮಾರ್ಥಕರೂಪಗಳಾಗುತ್ತವೆ.

(ಬ) ೧ನೇ, ೨ನೇ, ೩ನೇ, ೬ನೇ ಭೇದಗಳು ಕರ್ತ್ರರ್ಥಕವಾದದರಿಂದ ಆ ಭೇದಗಳಂತೆ ನಡಿಯುವ ಧಾತುಗಳು ಕರ್ಮಾರ್ಥದಲ್ಲಿ ೪ನೇ, ೫ನೇ, ೬ನೇ ಭೇದ ಗಳಂತೆ ಆತ್ಮನೇಪದದಲ್ಲಿ ನಡಿಯುತ್ತವೆ.

(ಕ) ಕರ್ಮಾರ್ಥದಲ್ಲಿ स्त (೪ನೇ ಭೇದ), इट (೫ನೇ ಭೇದ), सत (೭ನೇ ಭೇದ) ಎಂಬ ಪ್ರ. ಪು. ಏಕವಚನಪ್ರತ್ಯಯಗಳಿಗೆ इಕಾರಾದೇಶವಾಗುತ್ತದೆ. ಉದಾ: अगारि, अश्लेषि.

೧೭. ಕರ್ಮಾರ್ಥಕ ಪ್ರ. ಪು. ಏಕವಚನದ इ ಪ್ರತ್ಯಯದ ಹಿಂದಿನ ಅಂತ್ಯ ಸ್ವರಕ್ಕೂ ಉಪಾಂತ್ಯ अಕಾರಕ್ಕೂ ವೃದ್ಧಿಯೂ ಉಪಾಂತ್ಯಹ್ರಸ್ವಸ್ವರಕ್ಕೆ ಗುಣವೂ ಆಗುತ್ತವೆ. आ+चम्, क्रम्, वम् ಧಾತುಗಳು ಹೊರ್ತಾಗಿ ಉಳಿದ म्ಕಾರಾಂತ सेट् ಧಾತುಗಳ ಮತ್ತು जन् ಧಾತುವಿನ अಕಾರಕ್ಕೆ ವೃದ್ಧಿಯಾಗುವುದಿಲ್ಲ.

೧೮. आಕಾರಾಂತ ಧಾತುಗಳ ಮುಂದೆ इ ಪ್ರತ್ಯಯ ಬರಲಾಗಿ ನಡುವೆ य् ಆಗಮವಾಗುವದು. ಉದಾ: अदायि.

೧೯. हन् ಧಾತುವಿನ ಉಪಾಂತ್ಯಸ್ವರಕ್ಕೆ ವೃದ್ಧಿಯಾಗಲು ह्ಕಾರಕ್ಕೆ घ्ಕಾರಾದೇಶವಾಗುವದು (ಪುಟ ೧೭೫, ನಿಯಮ ೭ ನೋಡು). ಉದಾ: अघानि.

೨೦. ಪುಟ ೧೨೭, ನಿಯಮ ೩ ಈ ಕಾಲದಲ್ಲಿಯೂ ಹತ್ತುತ್ತದೆ.

भृ ಪರ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अभार्षीन् | अभार्ष्टाम् | अभार्षुः |
| ಮ. ಪು. | अभार्षीः | अभार्ष्टम् | अभार्ष्ट |
| ಉ. ಪು. | अभार्षम् | अभार्ष्व | अभार्ष्म |

अ+भृ+सीत्=अ+भार्+सीत् (ಪುಟ ೨೦೧, ನಿಯಮ ೫)=अभार्षीत्. (೧ನೇ ಪುಸ್ತಕದ ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣಿ ೨).

ಆತ್ಮ.

| | | | |
|---|---|---|---|
| ಪ್ರ. ಪು. | अभृत | अभृषाताम् | अभृषत |
| ಮ. ಪು. | अभृथाः | अभृषाथाम् | अभृढ्वम् |
| ಉ. ಪು. | अभृषि | अभृष्वहि | अभृष्महि |

अ+भृ+स्त=अभृत (ಪುಟ ೨೦೨, ನಿಯಮ ೧೦ ಬ, ನಿಯಮ ೧೧).

लू ಪರ.

| | | | |
|---|---|---|---|
| ಪ್ರ. ಪು. | अलावीत् | अलाविष्टाम् | अलाविषुः |
| ಮ. ಪು. | अलावीः | अलाविष्टम् | अलाविष्ट |
| ಉ. ಪು. | अलाविषम् | अलाविष्व | अलाविष्म |

अ+लु+ईत्=अ+लौ+ईत् (ಪುಟ ೨೦೨, ನಿಯಮ ೬ ಅ)=अलावीत्.

ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अलविष्ट | अलविषाताम् | अलविषत |
| ಮ. ಪು. | अलविष्ठाः | अलविषाथाम् | अलविढ्वम्-ढ्वम् |
| ಉ. ಪು. | अलविषि | अलविष्वहि | अलविष्महि |

अ + लू + इष्ट = अ + लो + इष्ट (ಪುಟ ೨೦೩, ನಿಯಮ ೧೩) = अलविष्ट.

೧. प्रछ् ಧಾತು अनिट् ಉಂಟು. ಆದದರಿಂದ ಅದು ೪ನೇ ಭೇದದಂತೆ ನಡಿಯುತ್ತದೆ.

अ + प्रछ् + सीत् = अ + प्राछ् + सीत् (ಪುಟ ೨೦೧, ನಿಯಮ ೫) = अ + प्राष् + सीत् (ಪುಟ ೬೨, ನಿಯಮ ಟ) = अ + प्राक् + सीत् (ಪುಟ ೫೮, ನಿಯಮ ಚ) = अप्राक्षीत् (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣಿ ೨).

अ + प्रछ् + स्ताम् = अ + प्राछ् + ताम् (ಪುಟ ೨೦೧, ನಿಯಮ ೫ ಮತ್ತು ೨೦೦, ನಿಯಮ ೧) = अ + प्राष् + ताम् (ಪುಟ ೬೨, ನಿಯಮ ಟ) = अ + प्राष् + टाम् (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೨೪, ಟಿಪ್ಪಣಿ ೧, ಉತ್ತರ ಭಾಗ) = अप्राष्टाम्.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अप्राक्षीत् | अप्राष्टाम् | अप्राक्षुः |
| ಮ. ಪು. | अप्राक्षीः | अप्राष्टम् | अप्राष्ट |
| ಉ. ಪು. | अप्राक्षम् | अप्राक्ष्व | अप्राक्ष्म |

೨. तृप्-अतृपत् ಎಂಬದೊಂದು ರೂಪವಾಗುತ್ತದೆ (ಪಾಠ ೨೨, ನಿಯಮ ೪ ಬ), ಈ ಧಾತು वेट् ಉಂಟು. ಆದದರಿಂದ ಇದು ೪ನೇ ಭೇದದಂತೆಯೂ ೫ನೇ ಭೇದದಂತೆಯೂ ನಡಿಯುತ್ತದೆ.

अ + तृप् + सीत् = ೪ನೇ ಭೇದ.

अ + त्रप् + सीत् (ಪುಟ ೨೦೧, ನಿಯಮ ೪) = अ + त्राप् + सीत् (ಪುಟ ೨೦೧, ನಿಯಮ ೫) = अत्राप्सीत् ಏಕವಚನ, अत्राप्ताम् ದ್ವಿವಚನ (ಪುಟ ೧೨೦, ನಿಯಮ ಡ).

अ + तृप् + सीत् = अ + तार्प् + सीत् (ಪುಟ ೨೦೧, ನಿಯಮ ೫) = अतार्प्सीत् ಏಕವಚನ, अतार्प्ताम् ದ್ವಿವಚನ (ಪುಟ ೨೦೧, ನಿಯಮ ೩).

अ + तृप् + ईत् = ೫ನೇ ಭೇದ.

अ + तर्प् + ईत् (ಪುಟ ೨೦೨, ನಿಯಮ ೯) = अतर्पीत् ಏಕವಚನ, अतर्पिष्टाम् ದ್ವಿವಚನ.

ಆದದರಿಂದ ತಪ್ ಧಾತುವಿಗೆ (೧) ಅತಪತ್ (೨ನೇ ಭೇದ), (೨) ಅತ್ರಾಪ್ಸೀತ್ (೪ನೇ ಭೇದ), (೩) ಅತಾಪ್ಸೀತ್ (೪ನೇ ಭೇದ), (೪) ಅತರ್ಪೀತ್ (೫ನೇ ಭೇದ) ಎಂಬ ನಾಲ್ಕು ರೂಪಗಳಾಗುತ್ತವೆ. ದೃಪ್ ಧಾತುವಿನ ರೂಪಗಳಾದರೂ ಇದೇ ಮೇರೆಗೆ ಆಗುತ್ತವೆ.

೩. ತ್ಯಜ್ - ಅ + ತ್ಯಜ್ + ಸೀತ್ = ಅ + ತ್ಯಾಜ್ + ಸೀತ್ (ಪುಟ ೨೦೧, ನಿಯಮ ೫) = ಅ + ತ್ಯಾಕ್ + ಸೀತ್ (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣಿ ೧) = ಅ + ತ್ಯಾಕ್ + ಷೀತ್ (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣಿ ೨)= ಅತ್ಯಾಕ್ಷೀತ್ ಏಕವಚನ, ಅತ್ಯಾಕ್ತಾಮ್ ದ್ವಿವಚನ (ಪುಟ ೨೦೦, ನಿಯಮ ೧ ನೋಡು).

೪. ದಹ್ - ಅ + ದಹ್ + ಸೀತ್ = ಅ + ದಾಹ್ + ಸೀತ್ (ಪುಟ ೨೦೧, ನಿಯಮ ೫) = ಅ + ದಾಘ್ + ಸೀತ್ (ಪುಟ ೫೮, ನಿಯಮ ಫ) = ಅ + ಧಾಘ್ + ಸೀತ್ (ಪುಟ ೫೮, ನಿಯಮ ಝ) = ಅ + ಧಾಕ್ + ಸೀತ್ (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೫, ಟಿಪ್ಪಣಿ ೨)=ಅಧಾಕ್ಷೀತ್ ಏಕವಚನ, ಅ + ದಹ್ + ಸ್ತಾಮ್ = ಅ + ದಾಹ್ + ಸ್ತಾಮ್. ಇಲ್ಲಿ ಸಕಾರವು ಲೋಪವಾಗುತ್ತದೆ. ಅ + ದಾಹ್ + ತಾಮ್ = ಅ + ದಾಘ್ + ತಾಮ್ (ಪುಟ ೫೮, ನಿಯಮ ಫ) = ಅ + ಧಾಘ್ + ಧಾಮ್ (ಪುಟ ೫೭, ನಿಯಮ ಘ) = ಅದಾಗ್ಧಾಮ್ (ಪುಟ ೫೮, ನಿಯಮ ಜ) ದ್ವಿವಚನ, ಅಧಾಕ್ಷುಃ ಬಹುವಚನ.

೫. ವಸ್ - ಅ + ವಸ್ + ಸೀತ್ = ಅ + ವಾಸ್ + ಸೀತ್ = ಅ + ವಾತ್ + ಸೀತ್ (ಪುಟ ೧೨೦, ನಿಯಮ ತ) = ಅವಾತ್ಸೀತ್ ಏಕವಚನ, ಅ + ವಾಸ್ + ಸ್ತಾಮ್ ಇಲ್ಲಿ ಸ್ತಾಮ್ ಈ ಪ್ರತ್ಯಯದ ಸಕಾರವು ಲೋಪವಾಗುವದಕ್ಕಿಂತ ಮೊದಲು (ಪುಟ ೧೨೦, ನಿಯಮ ತ) ಹತ್ತುತ್ತದೆ; ಅಂದರೆ ವಸ್ ಧಾತುವಿನ ಸಕಾರಕ್ಕೆ ತಕಾರಾದೇಶವಾಗುತ್ತದೆ, ಅದರಿಂದ ಅ + ವಸ್ + ಸ್ತಾಮ್ = ಅ + ವಾಸ್ + ಸ್ತಾಮ್ = ಅ + ವಾತ್ + ಸ್ತಾಮ್ = ಅ + ವಾತ್ + ತಾಮ್ = ಅವಾತ್ತಾಮ್.

೬. ವಹ್ - ಅ + ವಹ್ + ಸೀತ್ = ಅ + ವಾಹ್ + ಸೀತ್ = ಅ + ವಾಢ್ + ಸೀತ್ (ಪುಟ ೫೭, ನಿಯಮ ಗ) = ಅ + ವಾಕ್ + ಸೀತ್ (ಪುಟ ೫೯, ನಿಯಮ ಚ) = ಅ + ವಾಕ್ + ಷೀತ್ = ಅವಾಕ್ಷೀತ್ ಏ. ವ.; ಅ + ವಹ್ + ಸ್ತಾಮ್ = ಅ + ವಾಹ್ + ತಾಮ್ = ಅ + ವಾಢ್ + ತಾಮ್ = ಅ + ವಾಢ್ + ಧಾಮ್ (ಪುಟ ೫೭, ನಿಯಮ ಘ) = ಅ + ವಾಢ್ + ಢಾಮ್ (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೨೪, ಟಿಪ್ಪಣಿ ೧, ಉತ್ತರಭಾಗ) = ಅವಾಢಾಮ್ (ಪುಟ ೫೭, ನಿಯಮ ಜ) = ಅವೋಢಾಮ್ (ಪುಟ ೧೦೮, ನಿಯಮ ೨). ಈ ವಿಕಾರಗಳು ಪರಸ್ಮೈಪದದ ಸ್ತಮ್, ಸ್ತ ಮತ್ತು ಆತ್ಮನೇಪದದ ಸ್ತ, ಸ್ಥಾಸ್, ಧ್ವಮ್ ಪ್ರತ್ಯಯಗಳ ಪೂರ್ವದಲ್ಲಿ ಆಗುತ್ತವೆ.

೭. ರುಧ್ ಧಾತುವು ಉಭಯಪದಿ ಇರುತ್ತದೆ. ಅರುಧತ್ (ಪುಟ ೧೮೮, ನಿಯಮ ೪ ಬ) ಎಂಬದೊಂದು ರೂಪವಾಗುತ್ತದೆ. ಅ + ರುಧ್ + ಸೀತ್ = ಅರೌಧ್ + ಸೀತ್ (ಪುಟ ೨೦೧, ನಿಯಮ ೫) = ಅ + ರೌತ್ + ಸೀತ್ (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೫,

ಟಿಪ್ಪಣಿ ೨) = अरौत्सीत् ಪ್ರ. ಪು. ಏಕವಚನ. ಇದು ಎರಡನೇ ರೂಪವು. अ + रौध् + स्ताम् = अरौध् + ताम् = अ + रौध् + धाम् (ಪುಟ ೫೭, ನಿಯಮ ಫ) = अ + रौद्धाम् (ಪುಟ ೫೮, ನಿಯಮ ಜ) = अरौद्धाम् ಪ್ರ. ಪು. ದ್ವಿವಚನ, अरौत्सुः ಪ್ರ. ಪು. ಬಹು.

रुध् (ಆತ್ಮ.)- अ + रुध् + स्त = अ + रुध् + त = अरुध् + ध् (ಪುಟ ೫೭, ನಿಯಮ ಫ) = अरुद् + ध् (ಪುಟ ೫೮, ನಿಯಮ ಚ) = अरुद्ध ಪ್ರ. ಪು. ಏಕವಚನ, अरुत्साताम् ದ್ವಿವಚನ, अरुत्सत ಬಹುವಚನ.

रुध् - अ + रुध् + स्थाः = अ + रुध् + थाः = अ + रुध् + धाः = अ + रुद् + धाः = अरुद्धाः ಮ. ಪು. ಏ.

೮. लभ् (ಆ.)- अ + लभ् + स्त = अ + लभ् + त = अ + लभ् + ध = अलब्ध ಪ್ರ. ಪು. ಏಕವಚನ, अ + लभ् + साताम् = अलप्साताम् ದ್ವಿವಚನ. (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೫, ಟಿಪ್ಪಣಿ ೨).

೯. स्खल् - अस्खलीत् (ಪುಟ ೨೦೨, ನಿಯಮ ೬ ಬ), नद् - अनदीत् - अनादीत् (ಪುಟ ೨೦೨, ನಿಯಮ ೭), नन्द् - अनन्दीत्.

೧೦. सृज् ಈ ಧಾತು अनिट् ಇದ್ದದರಿಂದ ೪ನೇ ಭೇದದಂತೆ ನಡಿಯುತ್ತದೆ. अ + सृज् + सीत् = अ + स्रज् + सीत् (ಪುಟ ೧೧೮, ನಿಯಮ ೪) = अ + स्राज् + सीत् (ಪುಟ ೨೦೧, ನಿಯಮ ೫) = अ + स्राष् + सीत् (ಪುಟ ೬೨, ನಿಯಮ ಟ) = अ + स्राक् + सीत् (ಪುಟ ೫೮, ನಿಯಮ ಚ) = अ + स्राक् + षीत् (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೧೧೦, ಟಿಪ್ಪಣಿ ೨) = अस्राक्षीत्; ಇದರಂತೆ दृश् - अद्राक्षीत्.

೧೧. वृ (ಉಭ.) ಈ ಧಾತು सेट् ಇದ್ದದರಿಂದ ೫ನೇ ಭೇದದಂತೆ ನಡಿಯುತ್ತದೆ. अ + वृ + ईत् = अ + वार् + ईत् (ಪುಟ ೨೦೨, ನಿಯಮ ೬) = अवारीत् (ಪರ.) ಆತ್ಮನೇಪದದಲ್ಲಿ ಇದು ೪ನೇ ೫ನೇ ಭೇದಗಳಂತೆ ನಡಿಯುತ್ತದೆ (ಪುಟ ೨೦೨, ನಿಯಮ ೨ ಕ). अ + वृ + स्त = अ + वृ + त (ಪುಟ ೨೦೨, ನಿಯಮ ೧೧) = अवृत (೪ನೇ ಭೇದ); अ + वृ + इष्ट = अ + वर् + इष्ट (ಪುಟ ೨೦೩, ನಿಯಮ ೧೩) = अ + वर् + इष्ट ಅಥವಾ अ + वर् + ईष्ट (ಪುಟ ೧೨೦, ನಿಯಮ ೩) = अवरिष्ट ಅಥವಾ अवरीष्ट (೫ನೇ ಭೇದ).

೧೨. अधि + इ ಧಾತು अनिट् ಇದ್ದದರಿಂದ ೪ನೇ ಭೇದದಂತೆ ನಡಿಯುತ್ತದೆ. अधि + आ + इ + स्त = अधि + आ + ए + स्त (ಪುಟ ೨೦೨, ನಿಯಮ ೧೦) = अधि + ए + स्त (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೬೩) = अध्यै + ष्ट (೧ನೇ ಪುಸ್ತಕ, ೫ನೇ ಆವೃತ್ತಿ, ಪುಟ ೮೩, ಟಿಪ್ಪಣಿ ೨, ಮತ್ತು ಪುಟ ೨೪, ಟಿಪ್ಪಣಿ ೧, ಉತ್ತರ ಭಾಗ) = अध्यैष्ट ಅಥವಾ अधि + अ + गा + स्त = अधि + अ + गी + स्त (ಪುಟ ೧೨೨, ನಿಯಮ ೨) = अध्यगीष्ट.

दुष्टाञ्छब्दान्मा प्रयुक्ष्महि म्लेच्छाश्च मा भूमेत्यध्येयं व्याकरणम् ।

ओदनं शाकांश्च सूदा अपाक्षुरतोऽधुना सर्वान्ब्राह्मणान्भोजय ।

कनिष्ठं पुत्रमहमब्रवं पुत्रक कुसुमपुरं गत्वा तत्रैकस्मिन्गृहे मया निक्षिप्तं धनमास्ते तद्गृहाण । सोऽगच्छत् निवृत्य च मामब्रवीत्तात भ्रातरो मे तत्रागत्यास्मभ्यमेतद्धनं पितादादिति वदन्तः सर्वमेव तदादिशत ।

यत्त्वं सत्यमवादीस्तत्तुभ्यमहमेतद्गवां शतं ददामि ।

त्वमात्मनः पूर्वभार्यामत्याक्षीरन्यां च पर्यणैषीरिति यदश्रौषं तत्किं सत्यम् ।

मुग्धाकृतिरतीव प्रियश्चावयोः शिशुरमृतेति शोकविकलोऽहं भार्या च मे । परं तु किं वृथाशोकेन सत्यमेव तद्यत्कविराह ।

कश्यैकान्तं सुखमुपगतो दुःखमेकान्ततो वा ।
नीचैर्गच्छत्युपरि च दशा चक्रनेमिक्रमेण ॥

ऋषयो वै सरस्वत्यां सत्रमासत । ते कवषमैलूषं सोमादनयन्दास्याः पुत्रः कितवोऽब्राह्मणः कथं नो मध्येऽदीक्षिष्टेति ।

साचिव्ये मामेवान्यान्सर्वाननादृत्य राजाऽयौक्षीदतोऽभियुक्तेन मनसा मया कार्यमनुष्ठेयम् ।

अस्मिन्क्षेत्रे विपुलं धान्यमवाप्सम् ।

अङ्गीकृतं महत्कार्यं पारयितुमक्षमा वयमुदस्राक्ष्म ।

अखिला मनोरथा मेऽफालिषुरतोऽहं सुखमस्त्राप्सं न किंचिदवेदिषम् ।

किं नाद्याप्यग्निरथमद्राष्ट प्रत्यहं त्रिरनेन मार्गेण स नीयते ।

मुक्तकेशीं मां दृष्ट्वा दुर्योधनस्य भार्या भानुमत्यहसीत्तन्मे दहति देहमित्यब्रवीद्भीमं द्रौपदी ।

असमर्थोऽयमर्जुनो धार्तराष्ट्रैः सह योद्धुमतः संग्रामान्न्यवर्तिष्टेति जना ब्रूयुः ।

भार्या मे पुत्रमसविष्ट । अतो जातकर्मादिसंस्काराणां संभारान्करोमि ।

अधुनैव सोऽत्रागत्यायं पुरुषः सुविनीतोऽयं दुर्विनीत इति बहु प्रालापीत् । मैवं पुनः प्रलपीदित्येकदा तं भृशं ताडय ।

अस्माभिराज्ञप्तः पौराणिकः पुराणकथाः कथयितुमारब्ध तदेहि श्रोतुम्।

परिचारकं मे दन्दशूकोऽदाङ्क्षीत्तत्त्वरस्व भिषजं गत्वौषधमानय।

इयन्तं कालमुद्यमं कुर्वन्नपि सुखं नालप्सि तस्मान्नियतिर्बलीयसी।

महता प्रयत्नेन तेन संचितं धनमहृथास्तस्मात्पापोऽसि गर्हणीयचरितोऽसि।

तेऽभ्यगुर्भवनं तस्य सुप्तं चैक्षिषताथ तम् ॥
अवोचत्कुम्भकर्णस्तं वयं मन्त्रेऽभ्यधाम यत्।
न त्वं सर्वं तदश्रौषीः फलं तस्येदमागमत् ॥
प्राज्ञवाक्यान्यवामंस्था मूर्खवाक्येष्ववास्थिथाः।
अध्यगीष्ठाश्च शास्त्राणि प्रत्यपत्था हितं न च ॥
मूर्खास्त्वामवव्रश्चन्त ये विग्रहमचीकरन्।
अभाणीन्माल्यवान्युक्तमक्षंस्थास्त्वं न तन्मदात् ॥
ततोऽक्रन्दीद्दशग्रीवस्तमाशिश्वसदिन्द्रजित्।
निरयासीच्च संक्रुद्धः प्रार्चिचच्च स्वयंभुवम् ॥
सोऽलब्ध ब्रह्मणः शस्त्रं स्यन्दनं च जयावहम् ॥
प्रोदपाति नभस्तेन स च प्रापि महागिरिः।
यस्मिन्नज्वालिषू रात्रौ महौषध्यः सहस्रशः ॥

एतं ह वा ऐन्द्रं महाभिषेकं वासिष्ठः सात्यहव्योऽत्यरातये जानंतपये प्रोवाच। तस्माद्वत्यरातिर्जानंतपिरराजा[1] सन्विद्यया समन्तं सर्वतः पृथिवीं जयन्परीयाय। स होवाच वासिष्ठः सात्यहव्योऽजैषीर्वै समन्तं सर्वतः पृथिवीं महन्मा गमयेति। स होवाचात्यरातिर्जानंतपिर्यदा ब्राह्मणोत्तरकुरूञ्जयेयमथ त्वमु हैव पृथिव्यै[2] राजा स्याः सेनापतिरेव तेऽहं स्यामिति। स होवाच वासिष्ठः सात्यहव्यो देवक्षेत्रं वै तन्न वै तन्मर्त्यो

---

[1]) ಸಮಾಸದ ಕಡೆಯಲ್ಲಿ ಕೆಲವು ಶಬ್ದಗಳಿಗೆ ಆಗುವ ಕಾರ್ಯಗಳು ನಞ್ ತತ್ಪುರುಷದಲ್ಲಿ ಆಗುವದಿಲ್ಲ.

[2]) ಇದು ಷಷ್ಠ್ಯಂತ ಚತುರ್ಥಿಯು.

जेतुमर्हत्यद्रुक्षो[1] वै म आऽत[2] इदं दद इति । ततो ह्यत्यरातिं जानंतपिमात्तवीर्यं निःशुक्रममित्रतपनः शुष्मिणः शैब्यो राजा जघान ॥

ಶತ್ರುಗಳು ಇಪ್ಪತ್ತು ಹಳ್ಳಿಗಳನ್ನು ಸುಟ್ಟು (दह्), ಈಗ ರಾಜಧಾನಿಯ ಮೇಲೆ ಹೋಗುತ್ತಾರೆ.

ಪಂಜರದೊಳಗಿನ ಹಕ್ಕಿಗಳೆಲ್ಲ ಹಾರಿಹೋಗುತ್ತವೆ (उड् + डी ಆ.).

ನಾನು ಮಾರ್ಗ ಪ್ರತೀಕ್ಷೆಯ ಮಾಡುತ್ತಿದ್ದ ಸ್ನೇಹಿತರು ಬಂದಿರುತ್ತಾರೆ (आ+गम्, आ+इ); ಅವರು ಈಗಲೇ ತಮ್ಮ ರಥದಿಂದ ಇಳಿದರು (अव+तॄ).

ತೋಟದೊಳಗಿನ ಗಿಡಗಳ ಟೊಂಗೆಗಳನ್ನು ನಾವು ಕಡಿದಿರುತ್ತೇವೆ (लू, छिद्).

ಅವರು ಸಿಂಧು ನದಿಯೊಳಗಿಂದ ಬಹಳ ಕಾಲಿವೆಗಳನ್ನು ಹೊಲಗಳ ಸಲುವಾಗಿ ಅಗಿದಿರುತ್ತಾರೆ (खन्).

"ಹತ್ತು ದಿವಸಗಳಲ್ಲಿ ನಾನು ಸಂಸ್ಕೃತ ಪಂಡಿತನಾಗುವೆನು" ಎಂದು ಅವನು ಅಂದಾಗ (वच्) ನಾನು ನಕ್ಕೆನು (स्मि).

ಯಜ್ಞದತ್ತನು ಸ್ವಲ್ಪ ದಿವಸಗಳ ಹಿಂದೆ ತನ್ನ ಮಗನ ಮುಂಜಿಯನ್ನು ಮಾಡಿದನು (अनु+स्था, वि+धा, कृ), ಆಗ ಅವನು ಬ್ರಾಹ್ಮಣರಿಗೆ ಬಹಳ ದಕ್ಷಿಣೆ ಕೊಟ್ಟನು (दा).

ಗೋವಿಂದನನ್ನು ಸಹಾಯಕ್ಕೆ ಕರೆಯುವದಕ್ಕೋಸ್ಕರ ಒಬ್ಬ ಮನುಷ್ಯನನ್ನು ಕಳುಹಿಸಿದ್ದು ಅವರಿಗೆ ಇಷ್ಟರಲ್ಲಿಯೇ ನೆನಪಾಯಿತು (स्मृ).

ಅಂಜಬೇಡ (भी ಧಾತು मा ಅವ್ಯಯದೊಡನೆ), ನಿನ್ನ ಮುಂದೆ ಕಾಣುವದು ಹಾವಲ್ಲ, ಹಗ್ಗವು.

ಇಂಗ್ಲಿಷರು ಮಲತು ನಿಂತವರ ಮುಖ್ಯಸ್ಥರನ್ನು ಕೊಂದು (वध्), ದೇಶವನ್ನು ಪುನಃ ಕೈವಶ ಮಾಡಿಕೊಂಡಿರುತ್ತಾರೆ (जि).

ಯಾವಾಗಲೂ ಮನೆಯಲ್ಲಿ ಕೂಡುವದರಿಂದಲೂ ಏನೂ ಕೆಲಸ ಮಾಡದೆ ಇರುವದರಿಂದಲೂ ಬಡತನವೂ ಬೇರೆ ಎಷ್ಟೋ ಆಪತ್ತುಗಳೂ ಸಂಭವಿಸಿರುತ್ತವೆ (जन् ಅಥವಾ निस्+पद्).

ನಾನು ಹೇಳಿದ ಆಭರಣಗಳನ್ನು ಮಾಡಿರುತ್ತಿಯಾ (कृ)? ಮಾಡಿದ್ದರೆ ತೋರಿಸು.

---

[1] ಇದು द्रुह् ಧಾತುವಿನ ಅದ್ಯತನಭೂತಕಾಲದ ೭ನೇ ಭೇದದ ರೂಪವು; ಇದರ हकारಕ್ಕೆ ಕ್ಷ್ಕಾರ ಮಾತ್ರವಾಗಿಲ್ಲ.

[2] ವೇದದಲ್ಲಿ ಧಾತುಗಳಿಗೂ ಉಪಸರ್ಗಗಳಿಗೂ ನಿತ್ಯ ಸಾನ್ನಿಧ್ಯವಿರುತ್ತದೆಂಬ ನಿರ್ಬಂಧವಿಲ್ಲ, ಅವುಗಳ ನಡುವೆ ಬೇರೆ ಶಬ್ದಗಳು ಬರಬಹುದು.

ರಾಜಸೇವಕರಾದ ಭೂಮಿಯ ಅಳೆಯುವವರು ಎಲ್ಲ ಭೂಮಿಯನ್ನು ಇನ್ನೂ ಅಳೆದಿಲ್ಲ (मा).

ಆ ಕಾಗದಗಳು ಕೆಲಸಕ್ಕೆ ಬಾರದವುಗಳಾದದರಿಂದ ಅವುಗಳನ್ನೆಲ್ಲ ನಾವು ಹರಿದುಹಾಕಿರುತ್ತೇವೆ (क्षिप्).

ಅವನು ಔಷಧವನ್ನು ಅರೆದು (क्षुद्), ಪಾತ್ರೆಯ ತೆರವು ಮಾಡಿ (रिच्), ಅದರೊಳಗೆ ನೀರನ್ನೂ ಪುಡಿಯನ್ನೂ ಹಾಕಿ[1] (नि+क्षिप् अथवा नि+सिच्), ಅದನ್ನು ಒಲೆಯ ಮೇಲೆ ಇಟ್ಟಿರುತ್ತಾನೆ.

ಗೋವಿಂದನ ಇಚ್ಛೆಗಳೆಲ್ಲ ಪೂರ್ಣವಾದವು (पॄ), ಅವನು ಈಗ ಸುಖದಿಂದಿದ್ದಾನೆ.

ಅವರು ಈ ದೇಶದಲ್ಲಿ ತಮ್ಮ ಆಪ್ತರ ಮತ್ತು ಸ್ನೇಹಿತರ ಮನೋರಥಗಳನ್ನು ತೃಪ್ತಿ ಪಡಿಸಿ ಈಗ ತಮ್ಮ ದೇಶಕ್ಕೆ ಹೋಗುತ್ತಾರೆ.

ಅವನು ಸಂಸಾರವನ್ನು ಬಿಟ್ಟು (परि+त्यज्) ಈಗ ಸನ್ಯಾಸಿಯಾಗಿರುತ್ತಾನೆ (परि+व्रज्).

ಅವರು ನಿನ್ನೆ ಕೊಟ್ಟ ಹಣವನ್ನು ನಾವು ಇನ್ನೂ ಅಂಗೀಕರಿಸಿಲ್ಲ (प्रति+ग्रह्).

ಅವರು ತಮ್ಮ ಅರಸನನ್ನು ಏಕನಿಷ್ಠೆಯಿಂದ ಸೇವಿಸಿರುತ್ತಾರೆ (सेव्).

ವರ್ತಕರು ಪೇಟೆಯೊಳಗಿನ ಎಲ್ಲ ಅರಳೆಯನ್ನು ಕೊಂಡು (परि+क्री) ಇಂಗ್ಲಂದಕ್ಕೆ ಕಳುಹಿದರು (प्र+हि).

ಮಂಗಗಳು ಮನೆಯ ಛಾವಣಿಯನ್ನೆಲ್ಲ ಮುರಿದಿರುತ್ತವೆ (भञ्ज्).

ಆ ಅಣ್ಣತಮ್ಮಂದಿರು ಪೂರ್ವಾರ್ಜಿತ ಆಸ್ತಿಯನ್ನು ವಿಭಾಗಿಸಿಕೊಂಡಿರುತ್ತಾರೆ (वि+भज्).

ಜನರ ನಿಂದೆಗಳನ್ನೆಲ್ಲ ನಾವು ಶಾಂತತೆಯಿಂದ ತಾಳಿಕೊಂಡು (सह्) ಅವಿಚ್ಛಿನ್ನವಾಗಿ ರಾಜ್ಯ ನಡಿಸುವ ಭಾರವನ್ನು ವಹಿಸಿರುತ್ತೇವೆ (वह्).

ಆ ಇಬ್ಬರು ಅರಸರು ಯುದ್ಧಕ್ಕಾಗಿ ತಮ್ಮ ದಂಡುಗಳನ್ನು ಸಿದ್ಧ ಮಾಡಿರುತ್ತಾರೆ (सम्+नह्).

---

## ಕೋಶ ೨೪.

**अक्षम** (ವಿ.) ಅಸಮರ್ಥ.
**अग्निरथ** (ಪು.) ಹೊಗೆಬಂಡಿ.
**अत्यराति** (ಪು.) ಒಬ್ಬ ಕ್ಷತ್ರಿಯನ ಹೆಸರು.
**अनुष्ठेय** (ವಿ. अनु+स्था ಧಾತು. ವಿಧ್ಯರ್ಥ ಕೃ.) ಮಾಡತಕ್ಕ.
**अमित्र** (ಪು.) ಶತ್ರು.

---

1) ನೀರನ್ನು ಹಾಕಿ = जलेन पूरयित्वा.

आज्ञप्त (ಭೂ. ಕೃ.) ಆಜ್ಞಾಪಿಸಲ್ಪಟ್ಟ, ನಿರೂಪಿಸಲ್ಪಟ್ಟ.

आत्त (ವಿ. आ + दा ಧಾತು ಭೂ. ಕೃ) ಒಯ್ದ, ತಕ್ಕೊಂಡ.

सत्रं + आस् ಯಜ್ಞವನ್ನು ಆರಂಭಿಸು.

उत्तरकुरवः (ಪು. ಬಹುವಚನ) ಹಿಮಾಲಯದ ಉತ್ತರ ಸೀಮೆ.

उपरि (ಅ.) ಮೇಲೆ.

एकान्त (ವಿ.) ಬದಲಾಗದ, ಅಚಂಚಲವಾದ.

एकान्ततः (ಅ.) ಎಡೆಬಿಡದೆ.

ऐलूष (ಪು.) ಇಲೂಷಾ ಎಂಬವಳ ಮಗ.

औषध (ನ.) ಔಷಧ.

कवष (ಪು.) ಒಬ್ಬ ಮನುಷ್ಯನ ಹೆಸರು.

कितव (ಪು.) ಠಕ್ಕ.

कुसुमपुर (ನ.) ಒಂದು ಪಟ್ಟಣದ ಹೆಸರು.

जयावह (ವಿ.) ಜಯ ಕೊಡುವಂಥ.

जातकर्मन् (ನ.) ಒಂದು ಸಂಸ್ಕಾರ, ೧೬ ಸಂಸ್ಕಾರಗಳಲ್ಲೊಂದು.

जानन्तपि (ಪು.) ಜನಂತಪನ ಮಗ.

तपन (ಪು.) ಶ್ರಮ ಪಡಿಸುವವ, ಒತ್ತಾಯ ಮಾಡುವವ.

तृप् (ಪರ. ೪ನೇ ಗ.) ತೃಪ್ತಿ ಪಡು.

दंश् (೧ನೇ ಗ. ಪ.) ಕಚ್ಚು.

दन्दशूक (ಪು.) ಹಾವು.

दशा (ಸ್ತ್ರೀ.) ಸ್ಥಿತಿ.

दह् (೧ನೇ ಗ. ಪ.) ಸುಡು.

दीक्ष् (೧ನೇ ಗ. ಆ.) ಯಜ್ಞ ಮಾಡಲಿಕ್ಕೆ ಯೋಗ್ಯನಾಗು.

दुर्विनीत (ವಿ.) ಅಡ್ನಾಡಿ, ಅಶಿಕ್ಷಿತ.

आ + दृ (೬ನೇ ಗ. ಆ.) ಮಾನ ಕೊಡು.

देवक्षेत्र (ನ.) ಸ್ವರ್ಗ.

नियति (ಸ್ತ್ರೀ.) ಅದೃಷ್ಟ.

निःशुक्र (ವಿ.) ಬಲಹೀನ.

नीचैः (ಅ.) ಕೆಳಗೆ.

नेमि (ಸ್ತ್ರೀ.) ಗಾಲಿಯ ಹಳಿ, ಗಾಲಿಯ ಪಟ್ಟಿ.

प्र + उद् + पत् ಹಾರು.

प्रति + पद् ತಿಳುಕೊಳ್ಳು, ಸ್ವೀಕರಿಸು, ಮಾಡು, ರೂಢಿಮಾಡು.

पौराणिक (ಪು.) ಪುರಾಣ ಹೇಳುವವ.

फल् (ಪರ. ೧ನೇ ಗ.) ಸಿದ್ಧಿಯಾಗು.

वि + भज् (೧ನೇ ಗ. ಉಭ.) ಹಂಚು.

भानुमती (ಸ್ತ್ರೀ.) ದುರ್ಯೋಧನನ ಹೆಂಡತಿ.

अव + मन् ಅಲಕ್ಷಿಸು.

महत् (ನ.) ದೊಡ್ಡಸ್ತಿಕೆ, ತೇಜ.

महत्त्व (ನ.) ವಿಶೇಷತ್ವ.

माल्यवत् (ಪು.) ಒಬ್ಬ ರಾಕ್ಷಸನ ಹೆಸರು. (ರಾವಣನ ತಾಯಿಯ ತಂದೆ.)

मुक्तकेशी (ಸ್ತ್ರೀ.) ಕೆದರಿದ ಕೂದಲುಳ್ಳವಳು.

मुग्धाकृति (ವಿ.) ರಮಣೀಯಾಕೃತಿಯುಳ್ಳ.

म्लेच्छ (ಪು.) ಕಿರಾತ, ಕಾಡು ಮನುಷ್ಯ.

प्र + लप् (೧ನೇ ಗ. ಪ.) ಹರಟೆಬಡಿ, ಗಳಹು.

वञ्च् (೧೦ನೇ ಗ. ಆ.) ಮೋಸ ಮಾಡು.

वासिष्ठ (ಪು.) ವಸಿಷ್ಠನ ಸಂತತಿಯವ.

शाक (ಪು.) ಕಾಯಿಪಲ್ಯ.

शुष्मिण (ವಿ.) ಶಕ್ತಿಯುಳ್ಳ.

शैब्य (ಪು.) ಒಬ್ಬ ಅರಸನ ಹೆಸರು.

शोकविकल (ವಿ.) ದುಃಖದಲ್ಲಿ ಮುಳುಗಿದ.

सत्र (ನ.) ಯಜ್ಞದ ಕೂಟ.

सरस्वती (ಸ್ತ್ರೀ.) ಸರಸ್ವತೀ ನದಿ.

साचिव्य (ನ.) ಮಂತ್ರಿತನ.

सात्यहव्य (ಪು.) ಒಬ್ಬ ಉಪಾಧ್ಯಾಯನ ಹೆಸರು.

सुविनीत (ವಿ.) ವಿನಯವುಳ್ಳ.

---

ಒಕ್ಕಲತನಕ್ಕೋಸ್ಕರ कृषिहेतोः, कृषिकर्मणे.

ಹಿರಿಯರಿಂದ ಬಂದ, ಪಿತ್ರಾರ್ಜಿತ पितृपैतामह (ವಿ.).

ಪಂಜರ पञ्जर (ಪು.).
ಕಾಲುವೆ कुल्या (ಸ್ತ್ರೀ.).
ರಾಜಧಾನಿ राजधानी (ಸ್ತ್ರೀ.).
ಹಾವು फणिन् (ಪು.), नाग (ಪು.).
ಕೂಡುವ संगत (ಭೂ. ಕೃ.), संगच्छमान (ವ. ಕೃ.).
ಕಾವಲಲ್ಲಿಟ್ಟ, ನಿರ್ಬಂಧ ಮಾಡಿ ಇಟ್ಟ नियन्त्रित (ಭೂ. ಕೃ.), निबद्ध (ಭೂ. ಕೃ.).
ಅರಳೆ तूल (ಪು.), पिचु (ಪು.).
ರೋಗ व्याधि (ಪು.).
ಏಕನಿಷ್ಠೆಯಿಂದ भक्त्या (ಸ್ತ್ರೀ. ತೃ.), निष्ठया (ಸ್ತ್ರೀ. ತೃ.).
ಪೇಟೆ पण्यवीथिका (ಸ್ತ್ರೀ.), आपण (ಪು.).
ಔಷಧ औषध (ನ.), ಗಿಡಮೂಲಿಕೆ ಮುಂತಾದ ಔಷಧದ ಜೀನಸು, औषधि (ಸ್ತ್ರೀ.).
ನೋಯಿಸುವ व्यथाकर (ವಿ.), पीडाकर (ವಿ.).
ಕಾಗದ पत्रक (ನ.).
ಬಡತನ दारिद्र्य (ನ.), दुर्गति (ಸ್ತ್ರೀ.).
ಪುಡಿ चूर्ण (ನ.), क्षोद (ಪು.).
ಬದುಕು रिक्थ (ನ.), वित्त (ಪು.).
ರಾಜ್ಯ ನಡಿಸುವ ಭಾರ राज्यधुरा (ಸ್ತ್ರೀ.).
ತಳ್ಳಿಗಾರರ ಮುಖ್ಯಸ್ಥ, ಮಲತವರ ಮುಖ್ಯಸ್ಥ प्रधानराजद्रोहिन् (ಪು.).
ಛಾವಣಿ छदिस् (ನ.), पटल (ನ.).
ಭೂವಿಾ ಅಳಿಯುವವ भूमापक (ಪು.).
ಹಂಗಿಸೋಣ, ನಿಂದೆ उपालम्भ (ಪು.).
ವರ್ತಕ वणिज् (ಪು.).
ಎಡೆಬಿಡದೆ अविरतम् (ಅ.).
ಯಜ್ಞದತ್ತ यज्ञदत्त (ಪು.).

---

## ೨ನೇ ಭಾಗ.

### ಆಶೀರ್ವಾದಾರ್ಥ.

೧. ಅನದ್ಯತನಭೂತಕಾಲದ ಪ್ರತ್ಯಯಗಳ ಪೂರ್ವದಲ್ಲಿ यास् ಎಂಬ ಅಕ್ಷರಗಳನ್ನು ಕೂಡಿಸಿದರೆ, ಈ ಅರ್ಥದ ಪರಸ್ಮೈಪದಪ್ರತ್ಯಯಗಳಾಗುತ್ತವೆ. ಈ यास्‌ದ ಮುಂದೆ ಮಧ್ಯಮ ಪ್ರಥಮ ಪುರುಷೈಕವಚನಗಳ स्, त् ಪ್ರತ್ಯಯಗಳು ಬರಲು ಅಂತ್ಯ स्‌ಕ್ಕೆ ಲೋಪ ಬರುವದು. ಪ್ರಥಮಪುರುಷ ಬಹುವಚನಪ್ರತ್ಯಯವು यासुः.

೨. ವಿಧ್ಯರ್ಥದ ಆತ್ಮನೇಪದಪ್ರತ್ಯಯಗಳ ಹಿಂದೆಯೂ ಅವುಗಳೊಳಗಿನ त्, थ्‌ಗಳ ಹಿಂದೆಯೂ स् ಕೂಡಿಸಿದರೆ, ಈ ಅರ್ಥದ ಆತ್ಮನೇಪದಪ್ರತ್ಯಯಗಳಾಗುವವು. ಕೆಲವು ಕಡೆಯಲ್ಲಿ षीध्वम्‌ಕ್ಕೆ षीढ्वम् ಆಗುವದು (ಪುಟ ೯೬, ನಿಯಮ ೪ ನೋಡು).

೩. ಪರಸ್ಮೈಪದಪ್ರತ್ಯಯಗಳು ದುರ್ಬಲ, ಆತ್ಮನೇಪದಪ್ರತ್ಯಯಗಳು ಸಬಲವಾಗಿರುವವು.

### ಈ ಅರ್ಥದ ಪರಸ್ಮೈಪದರೂಪಗಳ ಬಗ್ಗೆ ನಿಯಮಗಳು.

೪. ೧೫ನೇ ಪಾಠದ ೨ನೇ ಭಾಗದ ೨ನೇ ನಿಯಮದ अ, ब, क, इ, फ, ग ಗಳಂತೆ ಕಾರ್ಯಗಳಾಗುವವು.

೫. दा, धा ಧಾತುಗಳ, [दै (ಸ್ವಚ್ಛಮಾಡು), दा (ಕಡಿ) ಧಾತುಗಳ ಹೊರ್ತಾಗಿ] दा ಅಥವಾ धा ರೂಪವನ್ನು ಹೊಂದುವ ಧಾತುಗಳ, मा, स्था, गै, पा, सो, हा ಧಾತುಗಳ ಅಂತ್ಯಸ್ವರಕ್ಕೆ ಏಕಾರಾದೇಶವಾಗುವದು.

೬. ಸಂಯೋಗಪೂರ್ವಕ ಇತರ ಆಕಾರಾಂತ ಧಾತುಗಳ ಅಂತ್ಯ ಆಕಾರಕ್ಕೆ ವಿಕಲ್ಪದಿಂದ ಏಕಾರವಾಗುವದು.

| | | | |
|---|---|---|---|
| ग्लै ಪ್ರ. ಪು. | ग्लेयात् | ग्लेयास्ताम् | ग्लेयासुः |
| | ग्लायात् | ग्लायास्ताम् | ग्लायासुः |

ಆತ್ಮನೇಪದರೂಪಗಳ ಬಗ್ಗೆ ನಿಯಮಗಳು.

೭. सेट् ಧಾತುಗಳ ಮುಂದೆ इ ಆಗಮವು ನಿತ್ಯವಾಗಿಯೂ, वेट् ಧಾತುಗಳ ಮುಂದೆ ವಿಕಲ್ಪವಾಗಿಯೂ ಬರುವದು.

೮. ॠಕಾರಾಂತ ಧಾತುಗಳೂ ಸಂಯೋಗಪೂರ್ವಕ ऋಕಾರಾಂತ ಧಾತುಗಳೂ वृ ಧಾತುವೂ, ಇವುಗಳ ಮುಂದೆ इ ಆಗಮವು ವಿಕಲ್ಪದಿಂದ ಬರುವದು. ಉದಾ: वृ ಧಾ.- वरिषीष्ट, वृषीष्ट (ಮುಂದಿನ ನಿಯಮ ನೋಡು); स्तृ ಧಾ.- स्तरिषीष्ट, स्तृषीष्ट (ಮುಂದಿನ ನಿಯಮ ನೋಡು).

೯. ಧಾತುವಿನ ಮುಂದೆ इ ಆಗಮವು ಬರದಿದ್ದರೆ, ಅಂತ್ಯ ऋ, ॠಕಾರಗಳಿಗೂ ಉಪಾಂತ್ಯ ಹ್ರಸ್ವಸ್ವರಕ್ಕೂ ಗುಣವಾಗುವದಿಲ್ಲ. ಉದಾ: कृ ಧಾ.- कृषीष्ट: स्तॄ ಧಾ.- स्तरिषीष्ट, स्तीर्षीष्ट (ನಿಯಮ ೮); मुच्-मुक्षीष्ट.

೧೦. ಧಾತುವಿನ ಅಂಗಕ್ಕೆ ಆತ್ಮನೇಪದಪ್ರತ್ಯಯಗಳನ್ನು ಹಚ್ಚಿದರೆ, ಕರ್ಮಾರ್ಥಕ ರೂಪಗಳಾಗುತ್ತವೆ. ಈ ಸಾಮಾನ್ಯ ನಿಯಮವಲ್ಲದೆ ಈ ಅರ್ಥದ ಕರ್ಮಾರ್ಥದಲ್ಲಿ ಪುಟ ೧೨೭, ನಿಯಮ ೩ ಹತ್ತುತ್ತದೆ.

क्री ಪರ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | क्रियात् | क्रियास्ताम् | क्रियासुः |
| ಮ. ಪು. | क्रियाः | क्रियास्तम् | क्रियास्त |
| ಉ. ಪು. | क्रियासम् | क्रियास्व | क्रियास्म |

ಆತ್ಮನೇಪದ.

| | | | |
|---|---|---|---|
| ಪ್ರ. ಪು. | क्रषीष्ट | क्रषीयास्ताम् | क्रषीरन् |
| ಮ. ಪು. | क्रषीष्ठाः | क्रषीयास्थाम् | क्रषीढ्वम् |
| ಉ. ಪು. | क्रषीय | क्रषीवहि | क्रषीमहि |

(ಅ) ಕೆಳಗೆ ಹೇಳಿದ ರೂಪಗಳನ್ನು ಸಿದ್ಧ ಮಾಡಿರಿ, ಮತ್ತು ಅಲ್ಲಲ್ಲಿಗೆ ಹತ್ತುವ ನಿಯಮಗಳನ್ನು ಹೇಳಿರಿ:—

दिश्यात्, दिक्षीष्ट, रुध्यात्, रुत्सीष्ट, उच्यात्, स्मर्यात्, स्तर्यात्, नीयात्, नेषीष्ट, देयात्, दासीष्ट, गाहिषीष्ट, घाक्षीष्ट, श्रेयात्, त्रायात्, तीर्यात्, पूर्यात्, उह्यात्, वक्षीष्ट, मोदिषीष्ट, भुक्षीष्ट, दुह्यात्.

(ಬ) ಕೆಳಗೆ ಬರೆದ ಧಾತುಗಳ ಆಶೀರ್ವಾದಾರ್ಥ ರೂಪಗಳನ್ನು ಹೇಳಿರಿ:—

ह, ह्व, वप्, यज्, सह्, नह्, रुह्, लिह्, बन्ध्, ग्लै, हा, भिद्, भू, वृत्, रुच्, दु, लू, सो, स्तु, रु, शास्.

## ೨೫ನೇ ಪಾಠ.

### ಇಚ್ಛಾರ್ಥಕ ಅಥವಾ सन्नन्त ಧಾತುಗಳು.

೧. (ಅ) ೧೧ನೇ ಪಾಠದಲ್ಲಿ ಹೇಳಿದ ನಿಯಮಗಳಂತೆಯೂ ೧೮೭ನೇ ಪುಟದಲ್ಲಿ ಹೇಳಿದ ೩ನೇ ನಿಯಮದಂತೆಯೂ ಧಾತುಗಳಿಗೆ ದ್ವಿತ್ವ ಮಾಡಿ स् ಪ್ರತ್ಯಯವನ್ನು ಹಚ್ಚಿದರೆ, ಇಚ್ಛಾರ್ಥಕ ಧಾತುಗಳಾಗುತ್ತವೆ. ಈ ಧಾತುಗಳಿಗೆ ವರ್ತಮಾನಕಾಲ, ಅನದ್ಯತನಭೂತಕಾಲ, ಆಜ್ಞಾರ್ಥ, ವಿಧ್ಯರ್ಥಗಳಲ್ಲಿ ಕರ್ತ್ರರ್ಥದಲ್ಲಿ स्ದ ಮುಂದೆ अ ವಿಕರಣ ಬರುತ್ತದೆ.

(ಬ) ಅಭ್ಯಾಸದ अಕಾರಕ್ಕೆ इಕಾರಾದೇಶವಾಗುವದು.

೨. ಧಾತುಗಳು सेट् ಇದ್ದರೆ, स ಪ್ರತ್ಯಯದ ಪೂರ್ವದಲ್ಲಿ इ ಆಗಮವಾಗುವದು, अनिट् ಇದ್ದರೆ, इ ಆಗಮವಾಗುವದಿಲ್ಲ.

ಇದಕ್ಕೆ ಅಪವಾದಗಳು.

(ಅ) उ, ऊಕಾರಾಂತ ಧಾತುಗಳು ग्रह्, गुह् ಧಾತುಗಳು ಇವುಗಳಿಗೂ स ಪ್ರತ್ಯಯಕ್ಕೂ ನಡುವೆ इಕಾರಾಗಮ ಬರುವದಿಲ್ಲ. ಉದಾ: जिघृक्षति, बुभूषति.

(ಬ) ೬ನೇ ಗಣದ कृ (ಆ.), धृ (ಆ.), कॄ, गॄ ಈ ಧಾತುಗಳು स्मि, पू (ಆ.), अञ्ज्, प्रच्छ्, ऋ, अश् ಧಾತುಗಳು ಇವುಗಳಿಗೂ स ಪ್ರತ್ಯಯಕ್ಕೂ ನಡುವೆ इ ಆಗಮವಾಗುವದು. ಉದಾ: पिपृच्छिषति, दिधरिषते ಇತ್ಯಾದಿ.

(ಕ) ॠ (ದೀರ್ಘ) ಕಾರಾಂತ ಧಾತುಗಳು, इव् ಅಂತ ಧಾತುಗಳು, वृ, दम्भ् श्रि, यु, भृ, ज्ञप् ಧಾತುಗಳು ಇವುಗಳಿಗೂ स ಪ್ರತ್ಯಯಕ್ಕೂ ನಡುವೆ इ ಆಗಮವು

ವಿಕಲ್ಪದಿಂದ ಬರುವದು. ಉದಾ: दिव्[1]-दुद्यूषति ಅಥವಾ दिदेविषति, श्वि ಧಾ. शिश्वीषति ಅಥವಾ शिश्वयिषति.

೩. ಗುಣದ ಬಗ್ಗೆ ಹೇಳಿದ ಸಾಮಾನ್ಯ ನಿಯಮವು (ಪುಟ ೧೩, ನಿಯಮ ೬) ಈ ಕೆಳಗಿನ ಅಪವಾದಗಳ ಹೊರ್ತಾಗಿ ಉಳಿದ ಕಡೆಯಲ್ಲಿ ಹತ್ತುವದು.

ಆ ಅಪವಾದಗಳು ಯಾವವಂದರೆ —

(ಅ) स ಪ್ರತ್ಯಯದ ಹಿಂದೆ इ ಆಗಮ ಬರದಿದ್ದರೆ, इ, ई, उ, ऊ, ऋ, ॠಕಾರಾಂತ ಧಾತುಗಳ ಮತ್ತು ಉಪಾಂತ್ಯ ಸ್ಥಾನದಲ್ಲಿ इ, उ, ऋಗಳುಳ್ಳಂಥ ಧಾತುಗಳ ಅಂತ್ಯೋಪಾಂತ್ಯ ಸ್ವರಗಳಿಗೆ ಗುಣವಾಗುವದಿಲ್ಲ. ಉದಾ: बुभूषति, निनीषति ಇತ್ಯಾದಿ.

(ಬ) रुद्, विद्, मुष् ಧಾತುಗಳ ಸ್ವರಕ್ಕೆ ಗುಣವಾಗುವದಿಲ್ಲ. ಉಪಾಂತ್ಯ ಸ್ಥಾನದಲ್ಲಿ इ, उಕಾರಗಳುಳ್ಳಂಥ ವ್ಯಂಜನಾದಿ ಧಾತುಗಳ ಕಡೆಯಲ್ಲಿ य्, व्ಗಳ ಹೊರ್ತಾಗಿ ಬೇರೆ ವ್ಯಂಜನಗಳಿದ್ದು स ಪ್ರತ್ಯಯದ ಹಿಂದೆ इ ಆಗಮವು ಬಂದರೆ, ಉಪಾಂತ್ಯ इ, उಕಾರಗಳಿಗೆ ವಿಕಲ್ಪದಿಂದ ಗುಣವಾಗುವದು. ಉದಾ: रुरुदिषति, मुमुदिषते ಅಥವಾ मुमोदिषते ಇತ್ಯಾದಿ.

೪. स ಪ್ರತ್ಯಯದ ಹಿಂದೆ इ ಆಗಮವಾಗದಿದ್ದರೆ, ಧಾತುಗಳ ಅಂತ್ಯಸ್ವರವು ದೀರ್ಘವಾಗುವದು. ಉದಾ: जि ಧಾ - जिगीषति. / हन् ಧಾತುವಿನ अಕಾರವು ದೀರ್ಘವಾಗುವದು. ಉದಾ: जिघांसति.

೫. (ಅ) ग्रह्, स्वप्, प्रच्छ् ಧಾತುಗಳ र्, व्ಗಳಿಗೆ ऋ, उಗಳು ಆದೇಶವಾಗುವವು. ಉದಾ: स्वप्. सुषुप्सति (ಪುಟ ೧೦೮, ನಿಯಮ ೬ ನೋಡು)

(ಬ) द्युत् ಧಾತುವಿನ ಅಭ್ಯಾಸದ यಕಾರಕ್ಕೆ इಕಾರಾದೇಶವಾಗುವದು. ಉದಾ: द्युत् ಧಾತು द्युद्युत्–दिद्युतिषते ಅಥವಾ दिद्योतिषते.

(ಕ) ಕೆಳಗಿನ ಧಾತುಗಳ ಸ್ವರಗಳಿಗೆ इಕಾರಾದೇಶವಾಗುವದು, ಮತ್ತು ಆ ಧಾತುಗಳಿಗೆ ದ್ವಿತ್ವ ಮಾಡುವ ಕಾರಣವಿಲ್ಲ.

मि, मी, मा, दा, धा ಧಾತುಗಳು, दा ಮತ್ತು धा ಇವುಗಳ ರೂಪಗಳನ್ನು ಹೊಂದುವ ಬೇರೆ ಧಾತುಗಳು, रभ्, लभ्, शक्, पत्, पद् ಧಾತುಗಳು ಇವುಗಳೊಳಗಿನ ಸ್ವರಾಂತ ಧಾತುಗಳ ಮುಂದೆ त् ಆಗಮವಾಗುತ್ತದೆ. ಉದಾ: मित्सति, दित्सति, धित्सति, रिप्सते.

(ಡ) आप् ಧಾತುವಿನ ರೂಪವು ईप्सति, ज्ञप् ಧಾತುವಿನ ರೂಪಗಳು ज्ञीप्सति ಮತ್ತು जिज्ञपयिषति ಆಗುತ್ತವೆ.

---

[1]) ಅನುನಾಸಿಕ ಅರ್ಧಸ್ವರಗಳು ಹೊರ್ತಾಗಿ ಉಳಿದ ಯಾವದೊಂದು ವ್ಯಂಜನವು ಆದಿಯಲ್ಲಿ ಉಳ್ಳ ದುರ್ಬಲ ಪ್ರತ್ಯಯವು ಪರವಾಗಲು व्क्कೆ ऊ ಆದೇಶವಾಗುವದು. ಈ ऊಕಾರವು ಹಿಂದಿನ अ, आಗಳಿಗೆ ಕೂಡಿದರೆ, औಕಾರಾದೇಶವಾಗುವದು.

(ಇ) दम्भ् ಧಾತುವಿನ ರೂಪಗಳು ಮೂರು, धिप्सति, धीप्सति, दिदम्भिषति. तन् ಧಾತುವಿನ ರೂಪಗಳು तितांसति, तितंसति, तितनिषति. पत् ಧಾತುವಿನ ರೂಪಗಳು पित्सति ಮತ್ತು पिपतिषति ಆಗುತ್ತವೆ. स् ಪ್ರತ್ಯಯದ ಹಿಂದಿನ तन्, पत् ಧಾತುಗಳು सेट् ಆಗುವವು.

(ಫ) पू (ಆ.) ಧಾತುವಿನ ರೂಪವು पिपविषते; यु ಧಾತುವಿನ ರೂಪಗಳು यियविषति ಅಥವಾ युयूषति.

(ಗ) ऋ ಧಾತುವಿನ ರೂಪವು अरिरिषति; प्रति+इ (ಮನಗಾಣಿಸು) ಧಾತುವಿನ ರೂಪವು प्रतीषिषति.

इ (ಹೋಗು) ಧಾತುವಿಗೆ सन्नन्तದಲ್ಲಿ (ಇಚ್ಛಾರ್ಥದಲ್ಲಿ) गम् ಆದೇಶವಾಗುತ್ತದೆ. ಉದಾ: जिगमिषति.

(ಹ) ಅಭ್ಯಾಸದ ಮುಂದಿನ जि ಧಾತುವಿನ जಕಾರಕ್ಕೆ ग ಆದೇಶವೂ, हि, हन् ಧಾತುಗಳ हಕಾರಕ್ಕೆ घ ಆದೇಶವೂ, चि ಧಾತುವಿನ चಕಾರಕ್ಕೆ ವಿಕಲ್ಪದಿಂದ क् ಆದೇಶವೂ ಆಗುತ್ತದೆ. ಉದಾ: जिगीषति, जिघीषति, जिघांसति, चिचीषति ಅಥವಾ चिकीषति.

೬. ಪ್ರೇರಣಾರ್ಥಕಗಳ ಮತ್ತು ೧೦ನೇ ಗಣದ ಧಾತುಗಳ ಇಚ್ಛಾರ್ಥಕ ರೂಪಗಳನ್ನು ಸಾಮಾನ್ಯ ನಿಯಮಗಳಂತೆ ಮಾಡಬೇಕು.

೭. ಪ್ರೇರಣಾರ್ಥಕಗಳ ಮತ್ತು ೧೦ನೇ ಗಣದ ಧಾತುಗಳ ರೂಪಗಳನ್ನು ಮಾಡುವಾಗ ಪುಟ ೧೯೦, ನಿಯಮ ೪ ಹತ್ತುತ್ತದೆ.

೮. (ಅ) ಧಾತುಗಳು ಮೂಲತಃ ಪರಸ್ಮೈಪದಿಯಾಗಲಿ ಆತ್ಮನೇಪದಿಯಾಗಲಿ ಉಭಯವಿಧವಾಗಲಿ ಇದ್ದಂತೆ ಅವುಗಳ ಇಚ್ಛಾರ್ಥಕ ರೂಪಗಳು ಆಗುತ್ತವೆ. ಆದರೆ

(ಬ) ज्ञा, श्रु, स्मृ, दृश् ಧಾತುಗಳು सन्नंतದಲ್ಲಿ ಆತ್ಮನೇಪದಿ ಆಗುವವು. कॄ ಧಾತು कॄ+स्=कॄस्[1] (ನಿಯಮ ೪)=कीर्स् (ಪುಟ ೨, ನಿಯಮ ೯, ॠಕಾರಕ್ಕೆ ನಿಯಮ ೩, अದಿಂದ ಗುಣವಾಗುವದಿಲ್ಲ)=चिकीर्स् (ಅಂಗವು ನಿಯಮ ೧ ಅ)= चिकीर् + स् + अ + ति = चिकीर्षति (स्‌ಕ್ಕೆ षಕಾರಾದೇಶವಾಗುವದರ ಬಗ್ಗೆಯೂ अ ವಿಕರಣದ ಬಗ್ಗೆಯೂ ೧ನೇ ನಿಯಮ ನೋಡು, ಪರಸ್ಮೈಪದಪ್ರತ್ಯಯದ ಬಗ್ಗೆ ನಿಯಮ ೮ ಅ ನೋಡು). मृ + स् = मॄस - मूर्स् - मुमूर्स् ಅಂಗವು मुमूर्षति ಪ್ರ. ಪು ಏಕವಚನವು.

---

[1] स् ಪ್ರತ್ಯಯದ ಹಿಂದೆ इ ಆಗಮವಾಗದಿದ್ದರೆ, ಇಲ್ಲಿ ಹೇಳಿದ ಸ್ವರ ಸಂಬಂಧ ವಿಕಾರಗಳಾದ ನಂತರ ಅಭ್ಯಾಸದ ಕಾರ್ಯವಾಗುತ್ತದೆ.

भू + स् = बुभूस् (ಅಂಗವು ನಿಯಮ ೧ ಅ)—बुभूषति ಪ್ರ. ಪು. ಏಕವಚನ ನಿಯಮ ೨ ಅ ದಂತೆ ಇಕಾರಾಗಮವಿಲ್ಲ ಮತ್ತು ನಿಯಮ ೩ ಅ ದಂತೆ ಊಕಾರಕ್ಕೆ ಗುಣ ವಾಗುವದಿಲ್ಲ).

ग्रह् + स् = जग्रह् + स = जिग्रह् + स् (ನಿಯಮ ೧ ಬ, ನಿಯಮ ೨ ಅ) – जिगृह् + स् (ನಿಯಮ ೫ ಅ) = जिगृढ् (ಪುಟ ೫೭, ನಿಯಮ ೯) = जिघृढ् (ಪುಟ ೫೮, ನಿಯಮ ಝ) = जिघृक् (ಪುಟ ೬೨, ನಿಯಮ ಟ) = जिघृक् + स् ಅಂಗವು जिघृक्षति (ಪ್ರ. ಪು. ಏಕವಚನ).

द्युत् + स् = दिद्युत् + स् (ನಿಯಮ ೧, ೫ ಬ) = दिद्योत् ಅಥವಾ दिद्युत् (ನಿಯಮ ೩ ಬ) + स् = दिद्योत् + इष् ಅಥವಾ दिद्युत् + इष् (ನಿಯಮ ೨), ಅಂಗಗಳು दिद्योतिषते, दिद्युतिषते (ಪ್ರ. ಪು. ಏಕವಚನ ಆತ್ಮನೇಪದ ನಿಯಮ ೮ ಅ ದಂತೆ), भिद् + स् = बिभिद् + स् (ನಿಯಮ ೧ ಅ) = बिभिद् + स् (ನಿಯಮ ೩ ಅ), ಅಂಗವು बिभित्सति (ಪ್ರ. ಪು. ಏಕವಚನ).

೯. (ಅ) ಇಚ್ಛಾರ್ಥಕಧಾತುಗಳ ಅಂಗಗಳಿಗೆ उ ಪ್ರತ್ಯಯವನ್ನು ಹಚ್ಚಿದರೆ, ಇಚ್ಛಿಸುವವ ಎಂಬ ಅರ್ಥವುಳ್ಳ ನಾಮಗಳಾಗುತ್ತವೆ. ಈ ನಾಮಗಳಿಗೆ ಕರ್ಮ ಏರುತ್ತದೆ. ಉದಾ: चिकीर्षुः कटम्.

(ಬ) ಇಚ್ಛಾರ್ಥಕಧಾತುಗಳಿಗೆ आ ಪ್ರತ್ಯಯ ಹಚ್ಚಿದರೆ, ಭಾವವಾಚಕ ನಾಮಗಳಾಗುತ್ತವೆ. ಉದಾ: जिज्ञासा ತಿಳಿದುಕೊಳ್ಳುವ ಇಚ್ಛೆ, ಕುತೂಹಲ.

प्रारिप्सितस्य ग्रन्थस्याविघ्नपरिसमाप्तये इष्टदेवतां स्तौति ।

स्वयंवरकाले सीतां लिप्सवो रावणादयो बहवो राजानो विदेहाञ्जग्मुः । किं तु रुद्रधनुर्नमयितुमशक्ताः सर्वे भग्नाशा बभूवुः

अभितापसंपदमथोष्णरुचिर्निजतेजसामसहमान इव ।
पयसि प्रपित्सुरपराम्बुनिधेरधिरोढुमस्तगिरिमभ्यपतत् ॥

ब्रह्मतत्त्वं जिज्ञासमानः कश्चिदाचार्यमुपेत्याध्यापय भो ब्रह्मेत्युवाच ।

तस्यां सभायामेव दुर्योधनं गदाघातेन जिघांसुर्भीमसेनो युधिष्ठिरेण निवारितः ।

यियक्षमाणेनाहूतः पार्थेनाथ द्विषन्मुरम् ।
अभिचैद्यं प्रतिष्ठासुरासीत्कार्यद्वयाकुलः ॥

प्रासादतलमारुरुक्षुः सोपानपङ्क्तिषु पदं निधत्ते ।

युरोपीयवैभवं दिदृक्षमाणाः प्रतिसंवत्सरं कतिचिद्भरतखण्डीया अङ्गभूम्यादिदेशानग्निनौकाभिर्गच्छन्ति ।

ब्राह्मणो बुभूषू राजर्षिर्विश्वामित्र उग्रं तपश्चक्रे ।

प्रभूतवर्षणादस्या नद्याः कूलं पिपतिषति । तदस्मिन्मा पदं निधेहि ।

सूर्यवंशसंभवानां राज्ञां यशो जिगासुः कालिदास आह ।

क्व सूर्यप्रभवो वंशः क्व चाल्पविषया मतिः ।
तितीर्षुर्दुस्तरं मोहादुडुपेनास्मि सागरम् ॥

भूरि धनमादित्सुना बलेनानुगम्यमानः शरदारम्भे दिगन्ताञ्जिगीषू रघुरयोध्यायाः प्रतस्थे ।

वटुमुपनिनीषुराचार्यः स्वाधिकारसिद्धये कृच्छ्रत्रयं कुर्यात् ।

राजगृहं प्रविविक्षुर्ऋषिकुमारको हठान्निःसारितो दुर्विनीतैर्द्वारपालैः ।

आत्मनः कौशलं दिदर्शयिषन्त्यङ्गना महान्तं कालमनृत्यत् ।

अर्थयन्ते द्विजन्मानो तस्मादर्थं यियक्षवः ।
अर्थापयत्यसौ सम्यग् दुर्बुद्धं वैदिकं वचः ॥

ನಾಯಿಯು ಸಾಯಲಿಕ್ಕೆ[1] (मृ) ಆಗಿದೆ; ಅದನ್ನು ಕೆಣಕ ಬೇಡ.

ಅವನು ಆ ಗಿಡದ ಕೊಂಬೆಯನ್ನು ಮಣಿಸಲಿಚ್ಛಿಸಿ (नम्. धा. ಪ್ರೇರಣಾರ್ಥಕದ ಇಚ್ಛಾ) ತನ್ನ ಕೈಯನ್ನು ಮೇಲಕ್ಕೆ ಎತ್ತಿದನು.

ಬಹು ದೊಡ್ಡದೊಂದು ಬಿರುಗಾಳಿ ಬಿಟ್ಟು ಸೂರ್ಯನು ಮುಚ್ಚಿ ಹೋದನು; ಆ ಗಾಳಿಯು ಮರಗಳನ್ನು ಬೇರೊರಸಿ ಕಿತ್ತಿ (उद्+मूल्) ಮನೆಗಳನ್ನು ಹಾಳಗೆಡಹುವಂತೆ (भञ्ज्) ತೋರಿತು.

ವಿಶ್ವಾಮಿತ್ರನು ಒಂದು ಸಾವಿರ ವರುಷ ತಪಶ್ಚರ್ಯ ಮಾಡಿದನು. ಅದರಿಂದ ಅವನ ದೇಹವೆಲ್ಲ ಬ್ರಹ್ಮಮಯವಾಗಿ ಪ್ರಕಾಶಿಸ ಹತ್ತಿತು. ಅವನು ತನ್ನ ಪ್ರಕಾಶದಿಂದ ಜಗತ್ತನ್ನೆಲ್ಲ ಸುಡುವಂತೆ (दह्) ತೋರಿದನು.

ತನ್ನ ಸ್ವಂತ ಆಪ್ತರೇ ತನ್ನ ಸಂಗಡ ಯುದ್ಧಮಾಡಲಿಚ್ಛಿಸುತ್ತಾರೆಂದು (युध्) ನೋಡಿ ಅವನ ಮೋರೆ ಇಳಿಯಿತು.

ಆ ಕೂಸು ಮಲಗುತ್ತದೆ (स्वप्), ಅದನ್ನು ತೊಟ್ಟಿಲಲ್ಲಿ ಹಾಕಿ ತೂಗು.

ಒಬ್ಬ ಮನುಷ್ಯನು ಬಾಗಿಲಲ್ಲಿ ನಿಂತಿರುತ್ತಾನೆ; ಅವನು ನಿಮ್ಮ ಸಂಗಡ ಏನೋ ಒಂದು ದೊಡ್ಡ ಸಂಗತಿಯ ಬಗ್ಗೆ ಮಾತಾಡಲಿಚ್ಛಿಸುತ್ತಾನೆ (वच्).

---

[1] ಇಚ್ಛಾರ್ಥಕರೂಪಗಳನ್ನು ಪ್ರಯೋಗಿಸಬೇಕು.

ಈ ಲೋಕದ ಪ್ರಪಂಚವನ್ನು ಬಿಡಲಿಚ್ಛಿಸುವವನು (ತ್ಯಜ್) ಕೆಲವೊಬ್ಬ ತತ್ವ ಜ್ಞಾನಿಯ ಬಳಿಗೆ ಹೋಗಿ ಬ್ರಹ್ಮದ ಜ್ಞಾನವನ್ನು ಪಡೆದು ಅದನ್ನೇ ಧ್ಯಾನಿಸ ತಕ್ಕದ್ದು.

ವಿಧವೆಗಳ ಪುನರ್ವಿವಾಹವನ್ನು ಪ್ರವರ್ತಿಸಲಿಚ್ಛಿಸುವವರು (प्र+वृत् ಧಾ. ಪ್ರೇರಣಾರ್ಥದ ಇಚ್ಛಾ) ಅದನ್ನು ಒಮ್ಮೆಲೇ ಆರಂಭಿಸತಕ್ಕದ್ದು; ಅದರ ಬಗ್ಗೆ ವಾದ ವಿವಾದ ನಡಿಸುವ ಕಾಲವು ವಿಾರಿಹೋಯಿತು.

ಆ ಯುದ್ಧದಲ್ಲಿ ಒಬ್ಬ ಸಿಪಾಯಿಯು ಗಾಯಪಟ್ಟು ಬಹಳ ನೀರಡಿಸಿ ದ್ದನು (पा).

ತನ್ನ ಹಗೆಯೆಂದೆಣಿಸಿ ಒಬ್ಬ ಋಷಿಯನ್ನು ಕಡಿಯುವದಕ್ಕೋಸ್ಕರ (वह) ಧೃಷ್ಟಕೇತುವು ಕತ್ತಿ ಎತ್ತಿರಲಾಗಿ ನಾನು ಅವನ ಕೈ ಹಿಡಿದೆನು.

ನಾನು ಭಾಗೀರಥಿಯ ಸ್ನಾನದ ಅಪೇಕ್ಷೆಯಿಂದಲೂ (स्ना) ಸಾಂಖ್ಯಶಾಸ್ತ್ರ ವನ್ನು ಕಲಿಯಲಿಕ್ಕೆ ಅಲ್ಲಿ ಎರಡು ವರುಷ ನಿಲ್ಲುವ ಅಭಿಲಾಷೆಯಿಂದಲೂ ಕಾಶಿಗೆ ಹೋದೆನು.

ಆ ಇಬ್ಬರು ಹುಡಿಗಿಯರು ಹೂವು ಕೊಯ್ಯುವ ಅಪೇಕ್ಷೆಯಿಂದ (अव+चि) ತೋಟಕ್ಕೆ ಹೋದರು.

ಸ್ವಯಂಭೂ ಆದ ದೇವರು ಜಗತ್ತನ್ನು ಹುಟ್ಟಿಸುವ ಅಪೇಕ್ಷೆಯಿಂದ (सृज) ಅಂತರಿಕ್ಷದಲ್ಲೆಲ್ಲ ತುಂಬಿಕೊಂಡಿದ್ದ ನೀರಿನ ಮೇಲೆ ಪ್ರಕಟನಾದನು.

ಈ ಹೊತ್ತು ಬೆಳಿಗ್ಗೆ ಪಂಜರದಲ್ಲಿ ಹಾಕಿಟ್ಟ ಗಿಳಿಯು ಹಾರಿಹೋಗುವದಕ್ಕೆ ನೋಡುತ್ತದೆ (डी ಅಥವಾ तक्+पत्).

---

## ಕೋಶ ೬೫.

**अधिकार** (ಪು.) ಯಾವದೊಂದು ಸಂಸ್ಕಾರ ಮಾಡುವ ಬಾಧ್ಯತೆ.

**अपराम्बुनिधि** (ಪು.) (अपर ಎರಡನೇ अम्बुनिधि ಸಮುದ್ರ) ಪಶ್ಚಿಮ ಸಮುದ್ರ, ಪಡುವಣಗಡಲ.

**अभिचैद्यम्** (ಅ.) ಕೃಷ್ಣನ ಶತ್ರುವಾದ ಚೈದ್ಯನ ಕಡೆಗೆ.

**अभिताप** (ಪು.) ತೀವ್ರವಾದ ಸೆಕೆ.

**अर्थ्** (೧೦ನೇ ಗ. ಆ.) ಬೇಡಿಕೊಳ್ಳು.

**अर्थापय** (ಸಾಧಿತ ಧಾತು ಉಭ.) ವಿವರಿಸು, ಅರ್ಥ ಹೇಳು.

**अल्पविषया** (ಸ್ತ್ರೀ.) ಆಕುಂಚಿತವಾದ, ಅಲ್ಪ ವಿಸ್ತಾರವಾದ.

**अविघ्न** (ವಿ.) ಅಡ್ಡಿ ಇಲ್ಲದ.

**अस्तगिरि** (ಪು.) ಪಶ್ಚಿಮಾಚಲ, ಸೂರ್ಯ ಚಂದ್ರ ನಕ್ಷತ್ರಾದಿಗಳು ಮುಳುಗುವ ಬೆಟ್ಟ.

**आचार्य** (ಪು.) ಪ್ರಥಮೋಪದೇಶಕ.

आशा (ಸ್ತ್ರೀ.) ಕೋರಿಕೆ.
इष्टदेवता (ಸ್ತ್ರೀ.) ಮನಃಪೂರ್ವಕವಾಗಿ ಆರಾಧಿಸಲ್ಪಡುವ ದೇವತೆ.
उग्र (ವಿ.) ತೀಕ್ಷ್ಣ, ತೀವ್ರ.
उडुप (ಪು. ನ.) ನಾವೆ, ಡೋಣಿ.
उष्णरुचि (ಪು.) ಸೂರ್ಯ.
कतिचित् (ಸ.) ಕೆಲವು.
कार्यद्वयाकुल (ವಿ.) ಎರಡು ಕೆಲಸಗಳಲ್ಲಿ ತೊಡಕಿ ಬಳಲುವ, ಭ್ರಮೆ ಪಟ್ಟ.
कूल (ನ.) ದಂಡೆ, ದಡ.
कृच्छ्र (ನ.) ಪ್ರಾಯಶ್ಚಿತ್ತ.
कृच्छ्रत्रय (ನ.) ಮೂರು ಪ್ರಾಯಶ್ಚಿತ್ತಗಳು.
ग्रह (सम् ಪೂರ್ವಕ) ಕೂಡಿಸು.
दिगन्त (ಪು.) ದಿಕ್ಕುಗಳ ಕಡೆ, ಮೇರೆ, ನಾಲ್ಕು ಕಡೆಗೆ.
दुर्बुद्ध (ವಿ.) ತಿಳಿಯಲಿಕ್ಕೆ ಬಿಗಿಯಾದ, ಗೂಢ.
द्वारपाल (ಪು.) ಬಾಗಿಲ ಕಾಯುವವ.
नी (उप ಪೂರ್ವಕ) ಮುಂಜೀ ಮಾಡು.
पाङ्क्ति (ಸ್ತ್ರೀ.) ಸಾಲು.
पत् (अभि ಪೂರ್ವಕ) ಕಡೆಗೆ ಹಾರಿ ಹೋಗು.
परिसमाप्ति (ಸ್ತ್ರೀ.) ಕಡೆ, ಅಂತ.
प्रचण्ड (ವಿ.) ಭಯಂಕರವಾದ.
बल (ನ.) ದಂಡು, ಸೈನ್ಯ.
भग्न (ಭೂ. ಕೃ.) ಮುರಿದ, ಹಾಳಾದ.
भूरि (ವಿ.) ಬಹಳ.
मुर (ಪು.) ವಿಷ್ಣುವಿನ ಹಗೆಯ ಹೆಸರು.
युरोपीय (ವಿ.) ಯುರೋಪ ಖಂಡದ.
रुह (अधि ಪೂರ್ವಕ) ಏರು.
वर्षण (ನ.) ಮಳೆ ಬೀಳೋಣ, ಮಳೆ.
वृ (೧೦ನೇ ಗ. नि ಪೂರ್ವಕ.) ಪ್ರತಿಬಂಧಿಸು, ಮನಸ್ಸು ತಿರುಗಿಸು.
वैदिक (ವಿ.) ವೇದಗಳಿಗೆ ಸಂಬಂಧಿಸಿದ.
संभव (ಪು.) ಜನ್ಮ.
सांख्य (ನ.) ಒಂದು ಶಾಸ್ತ್ರದ ಹೆಸರು.
सृ (ಪ್ರೇರಣಾರ್ಥಕ ರೂಪ निर् ಪೂರ್ವಕ) ಹೊರಗೆ ಹಾಕು, ನೂಕು, ದೂಡು.
सिद्धि (ಸ್ತ್ರೀ.) ಕೈಗೂಡುವದು.
सूर्यवंश ಸೂರ್ಯನ ವಂಶ, ಕುಲ.
सोपान (ನ.) ಪಾವಟಿಗೆ.
हठात् (ಅ.) ಬಲುಮೆಯಿಂದ, ಛಲದಿಂದ.

---

ದುಃಖಿತ आर्त (ಭೂ. ಕೃ.), आर्दित (ಭೂ. ಕೃ.).
ಪಂಜರ पञ्जर (ಪು.).
ತೊಟ್ಟಿಲ प्रेङ्खा (ಸ್ತ್ರೀ.).
ಚರ್ಚೆ वादविवाद (ಪು.).
ಕಡವು, ಪೀಡಿಸು तुद्.
ಸೋಜಿಗವಾದ, अद्भुत (ವಿ.).
ಗೌರವ गुरुत्व (ನ.), महत्त्व (ನ.).
ಗೌರವದ ಕೆಲಸ गुरुकार्य (ನ.).
ಮಿಂಚುವ उत्तेजित (ವಿ.), उद्दीपित (ವಿ., ಕ. ಭೂ. ಕೃ. ಗಳು).
ಕಾಣಿಸದಂಥ अदृश्य (ವಿ.).
ಬಳಗದವ ज्ञाति (ಪು.), बन्धु (ಪು.).
ಕಳೆಯಿಲ್ಲದ पाण्डु (ವಿ.), विवर्ण (ವಿ.).
ತತ್ವಜ್ಞಾನಿ तत्त्वविद् (ಪು.).
ತೀವ್ರ, ತೀಕ್ಷ್ಣ प्रबल (ವಿ.), बलीयस् (ವಿ.).
ಎತ್ತು नम् (ಪ್ರೇರಣಾರ್ಥಕ उद् ಪೂರ್ವಕ).
ಹೊಳೆಯುವ, ಮಿಂಚುವ देदीप्यमान (ವಿ.), विभ्राजमान (ವಿ., ವ. ಕೃ. ಗಳು).
ತೂಗು दोलय ಅಥವಾ आन्दोलय (ಸಾಧಿತ ಧಾತು).
ಸಾರಣಿ, ಶಿಸ್ತು विधि (ಪು.), पद्धति (ಸ್ತ್ರೀ.).
ಸಂಕೋಲೆ बन्धन (ನ.), निगड (ಪು. ನ.).
ಭಯಂಕರವಾದ प्रचण्ड (ವಿ.).

## ೨೬ನೇ ಪಾಠ.

### ಧಾತುಸಾಧಿತಗಳು.

೧. ಧಾತುಗಳು सेट् ಇದ್ದರೆ, ಅವುಗಳಿಗೆ ಪರವಾದ ಹೇತ್ವರ್ಥಕ तुम् ಪ್ರತ್ಯಯದ ಹಿಂದೆ इ ಆಗಮವು ನಿತ್ಯವಾಗಿ ಬರುವದು; अनिट् ಇದ್ದರೆ, इ ಆಗಮವು ಬರುವದಿಲ್ಲ; वेट् ಇದ್ದರೆ, इ ಆಗಮವು ವಿಕಲ್ಪದಿಂದ ಬರುವದು.

೨. (ಅ) ಭೂತಾರ್ಥಕ त ಪ್ರತ್ಯಯವು ದುರ್ಬಲವೆಂದು[1] ತಿಳಿಯತಕ್ಕದ್ದು. ಆದದರಿಂದ ಪುಟ ೧೩, ನಿಯಮ ೬ರಲ್ಲಿ ಹೇಳಿದ ಕಾರ್ಯವಾಗುವದಿಲ್ಲ. ಪುಟ ೧೦೭, ೪ನೇ ನಿಯಮವೂ, ಮತ್ತು ಪುಟ ೨, ೯ನೇ ನಿಯಮವೂ ಹತ್ತುತ್ತವೆ. ಉದಾ: कृ धा.-कृत; वद्-उदित. पॄ-पूरित अथवा पूर्ण.

(ಬ) इಕಾರಾಗಮದ ಬಗ್ಗೆ ಹೇಳಿದ ಸಾಮಾನ್ಯ ನಿಯಮವು (೧ನೇ ನಿಯಮ) ಈ ಪ್ರತ್ಯಯಕ್ಕೂ ಹತ್ತುತ್ತದೆ. ಆದರೆ ಇದಕ್ಕೆ ಅಪವಾದಗಳು ಕೆಲವು ಉಂಟು.

(ಕ) ಅಪವಾದಗಳು ಯಾವವೆಂದರೆ, (त ಪ್ರತ್ಯಯದ ಹಿಂದೆ इಕಾರಾಗಮವಾಗದಂಥ ಧಾತುಗಳು ಯಾವವೆಂದರೆ) --

(೧) उ, ऊ, ऋಕಾರಾಂತ ಧಾತುಗಳು. ಉದಾ: नु-नुत; भू-भूत; कॄ-कीर्ण.

(೨) ಯಾವದಾದರೂ ಪ್ರತ್ಯಯದ ಹಿಂದೆ ವಿಕಲ್ಪದಿಂದ इಕಾರಾಗಮವಾಗುವ ಧಾತುಗಳು. ಉದಾ: इष्-इष्ट (ಪುಟ ೧೧೮, ನಿಯಮ ೨); दम्भ्-दब्ध (ಪಾಠ ೨೫, ನಿಯಮ ೨ ಕ); सिव्[2]-स्यूत (ಪಾಠ ೨೫, ನಿಯಮ ೨ ಕ); मुह्-मुग्ध ಅಥವಾ मूढ (ಪುಟ ೯೬, ನಿಯಮ ೬; ಪುಟ ೧೦೯, ನಿಯಮ ೧ ಅ); क्षम्-क्षान्त (ಪುಟ ೨೨೪, ನಿಯಮ ೬ ಅ); ಮತ್ತು ಕೆಳಗಿನ ನಿಯಮ ಹ (ಪುಟ ೨೨೩).

(೩) ಮತ್ತೂ ಕೆಲವು ಧಾತುಗಳಿಗೆ इ ಆಗಮವು ಬರುವದಿಲ್ಲ.

(ಡ) द, रಕಾರಾಂತ ಧಾತುಗಳಿಗೆ ಪರವಾದ त ಪ್ರತ್ಯಯಕ್ಕೆ न ಆದೇಶವಾಗುವದು, ಈ तದ ಹಿಂದಿನ द्ಕ್ಕೆ न् ಆದೇಶವಾಗುವದು. ಉದಾ: भिद्-भिन्न; शॄ-शीर्ण.

---

[1] ಅಂದರೆ ಇದರ ಹಿಂದಿನ ಅಂತ್ಯೋಪಾಂತ್ಯ ಸ್ವರಗಳಿಗೆ ಗುಣ ವೃದ್ಧಿಗಳಾಗುವದಿಲ್ಲ.

[2] ಅನುನಾಸಿಕ ಅರ್ಧಸ್ವರಗಳ ಹೊರ್ತಾಗಿ ಉಳಿದ ಯಾವದೊಂದು ವ್ಯಂಜನವು ಆದಿಯಲ್ಲಿ ಉಳ್ಳ ದುರ್ಬಲಪ್ರತ್ಯಯವು ಪರವಾಗಲು व्ಕ್ಕೆ ऊ ಆದೇಶವಾಗುವದು. ಈ ऊಕಾರವು ಹಿಂದಿನ अ, आಗಳಿಗೆ ಕೂಡಿದರೆ, औಕಾರಾದೇಶವಾಗುವದು.

(ಇ) ಧ್, ತ್ರ್, ಋ, ಲ್ರಗಳುಳ್ಳ ಸಂಯೋಗಗಳು ಆದಿಯಲ್ಲಿರುವ ಆಕಾರಾಂತ ಧಾತುಗಳಿಗೂ ಮತ್ತು ಕೆಲವು ಧಾತುಗಳಿಗೂ ಪರವಾದ त ಪ್ರತ್ಯಯಕ್ಕೆ न ಆದೇಶ ವಾಗುವದು.

ಅಪವಾದಗಳು:—नुद्, विद् (೭ನೇ ಗ.), त्रन्द्, त्रै, घ्रा, ह्री ಧಾತುಗಳಿಗೆ ಪರ ವಾದ तಕಾರಕ್ಕೆ न ಆದೇಶವು ವಿಕಲ್ಪದಿಂದಾಗುವದು. ध्यै, ख्या, मद् ಧಾತುಗಳ ಮುಂದಿನ तಕಾರಕ್ಕೆ नಕಾರಾದೇಶವಾಗುವದಿಲ್ಲ.

(ಫ) इ ಆಗಮವುಳ್ಳ त ಪ್ರತ್ಯಯವು ಪರವಾಗಲು शी, स्विद् (೧ನೇ ಗ.), मिद्, क्ष्विद्, धृष् ಧಾತುಗಳ ಸ್ವರಗಳಿಗೆ ಗುಣವಾಗುವದು.

(ಗ) यम्, रम्, नम्, गम्, हन्, मन्, तन्, क्षण्, क्षिण्, ऋण्, वन् ಧಾತುಗಳ ಅಂತ್ಯ ಅನುನಾಸಿಕಗಳಿಗೆ ಲೋಪ ಬರುವದು. ಉದಾ: गम्—गत, नम्—नत.

(ಹ) त ಪ್ರತ್ಯಯದ ಹಿಂದೆ इ ಆಗಮವು ಬರದಿದ್ದಾಗ अम्, अन्ಗಳು ಕಡೆಯಲ್ಲಿ ಉಳ್ಳ ಧಾತುಗಳ ಸ್ವರಗಳು ದೀರ್ಘವಾಗುವವು. ಉದಾ: शम्. शान्त; क्षम्—क्षान्त; दम्—दान्त (ಪುಟ ೨೨೪, ನಿಯಮ ೬ ಅ; ಪುಟ ೯೬, ನಿಯಮ ೬).

(ಯ) त ಪ್ರತ್ಯಯದ ಹಿಂದೆ इ ಆಗಮವು ಬರದಿದ್ದರೆ, ಧಾತುಗಳ ಉಪಾಂತ್ಯ ಅನುನಾಸಿಕಕ್ಕೆ ಲೋಪ ಬರುವದು. ಉದಾ: रञ्ज्—रक्त; अञ्ज्—अक्त.

೩. (ಅ) ಕರ್ಮಾರ್ಥಕ त ಪ್ರತ್ಯಯಾಂತ ಭೂತಕಾಲವಾಚಕವಿಶೇಷಣ ಗಳಿಗೆ वत् ಪ್ರತ್ಯಯವನ್ನು ಹಚ್ಚಲಾಗಿ ಕರ್ತ್ರರ್ಥಕ ಭೂತಕಾಲವಾಚಕವಿಶೇಷಣ ಗಳಾಗುತ್ತವೆ. ಉದಾ: कृ-कृत-कृतवान्, लब्धवान् ಇತ್ಯಾದಿ.

(ಬ) वत् ಪ್ರತ್ಯಯಾಂತ ವಿಶೇಷಣಗಳಿಗೆ ई ಪ್ರತ್ಯಯವನ್ನು ಹಚ್ಚಲಾಗಿ ಸ್ತ್ರೀಲಿಂಗದ ರೂಪಗಳಾಗುತ್ತವೆ. ಉದಾ: कृतवती.

೪. (ಅ) ಪ್ರಥಮಪುರುಷ ಬಹುವಚನಪ್ರತ್ಯಯದಂಥ ಪೂರ್ಣಭೂತ ಕಾಲದ ದುರ್ಬಲಪ್ರತ್ಯಯಗಳನ್ನು ಹೊಂದಲಿಕ್ಕೆ ಸಿದ್ಧವಾದ ಪರಸ್ಮೈಪದಿಧಾತು ಗಳ ಅಂಗಕ್ಕೆ वस् ಪ್ರತ್ಯಯವನ್ನೂ, ಆತ್ಮನೇಪದಿಧಾತುವಿನ ಅಂಗಕ್ಕೆ आन ಪ್ರತ್ಯಯ ವನ್ನೂ ಹಚ್ಚಲಾಗಿ ಪೂರ್ಣ ಭೂತಕಾಲವಾಚಕ ಕರ್ತ್ರರ್ಥಕ ಧಾತುಸಾಧಿತ ಗಳಾಗುತ್ತವೆ.

(ಬ) ಈ ಪ್ರತ್ಯಯಗಳ ಹಿಂದಿನ ಅಂಗವು ಒಂದೇ ಕಾಗುಣಿತಾಕ್ಷರವುಳ್ಳದ್ದು, ಅಂದರೆ ಒಂದೇ ಸ್ವರವುಳ್ಳದಿದ್ದರೆ ಅಥವಾ ಮೂಲ ಧಾತು ಆಕಾರಾಂತವಿದ್ದರೆ, वस् ಪ್ರತ್ಯಯದ ಹಿಂದೆ इಕಾರಾಗಮವಾಗುತ್ತದೆ. घस् ಧಾತುವಿಗಾದರೂ इಕಾ ರಾಗಮವಾಗುತ್ತದೆ. ಉದಾ: दा-ददिवस्, पत्-पेतिवस्, ಆದರೆ कृ-चकृवस् ಅಥವಾ चकृ + आन = चक्राण, हु-जुहुवस् ಅಥವಾ जह्राण.

(ಕ) गम्, हन्, विद् (೬ನೇ ಗ.), विश्, दृश् ಧಾತುಗಳ ಮುಂದಿನ वस् ಪ್ರತ್ಯ ಯಕ್ಕೆ इಕಾರಾಗಮವು ವಿಕಲ್ಪದಿಂದ ಬರುವದು. ಉದಾ: गम् – जग्मिवस् ಅಥವಾ जगन्वस्[1].

(ಡ) वस् ಮತ್ತು आन ಪ್ರತ್ಯಯಗಳ ಹಿಂದಿನ वन्च्, अञ्ज् ಮುಂತಾದ ಧಾತುಗಳ ಉಪಾಂತ್ಯ ಅನುನಾಸಿಕಕ್ಕೆ ಲೋಪ ಬರುವದು; ಋಕಾರಾಂತ ಧಾತು ಗಳ ಅಂತ್ಯ ಸ್ವರಕ್ಕೆ ಗುಣವಾಗುವದಿಲ್ಲ. ಉದಾ: आजिवस्, तितीर्वस्; ಪೂರ್ಣ ಭೂತಕಾಲದಲ್ಲಿ ಮೊದಲನೇ ಕಾರ್ಯವಾಗುವದಿಲ್ಲ, ಎರಡನೇದಾಗುತ್ತದೆ.

(ಇ) ಪೂರ್ಣಭೂತಕಾಲದ ಪ್ರ. ಪು. ಬಹುವಚನದ ರೂಪವೇ ಈ ವಿಶೇ ಷಣದ ಅಂಗವಾಗಿ ದ್ವಿತೀಯಾ ಬಹುವಚನ ಹಿಡಿದು ಮುಂದಿನ ಸ್ವರಾದಿ ವಿಭಕ್ತಿ ಪ್ರತ್ಯಯಗಳನ್ನೂ ಸ್ತ್ರೀಲಿಂಗರೂಪದ ईಕಾರವನ್ನೂ ನಪುಂಸಕ ಪ್ರಥಮಾ ದ್ವಿತೀಯಾ ವಿಭಕ್ತಿಗಳ ದ್ವಿವಚನಪ್ರತ್ಯಯಗಳನ್ನೂ ಹೊಂದುವದು. ಉದಾ: चिक्रीवस् – चिक्रियुषा ತೃ. ವಿ, चिक्रियुषी ಸ್ತ್ರೀರೂಪ, जगन्वस् ಅಥವಾ जग्मिवस् ವಿಶೇಷಣ, जग्मुषा ತೃ. ವಿ., जग्मुषी ಸ್ತ್ರೀರೂಪ.

ಕೆಲವು ಧಾತುಗಳ ಅಂಗಕ್ಕೆ ಮೇಲೆ (ಡ)ದಲ್ಲಿ ಹೇಳಿದ ವಿಶೇಷ ಕಾರ್ಯ ಗಳು ಆಗುತ್ತವೆ.

೫. ಎರಡನೇ ಭವಿಷ್ಯತ್ಕಾಲವಾಚಕಧಾತುಸಾಧಿತ ವಿಶೇಷಣಗಳು ಪರಸ್ಮೈ ಪದಿಧಾತುಗಳಿಗೆ अत् ಪ್ರತ್ಯಯವನ್ನೂ ಆತ್ಮನೇಪದಿಗಳಿಗೆ मान ಪ್ರತ್ಯಯವನ್ನೂ ಹಚ್ಚಲಾಗಿ ಆಗುತ್ತವೆ. ಈ ಪ್ರತ್ಯಯಗಳು ಎರಡನೇ ಭವಿಷ್ಯತ್ಕಾಲದ ಪುರುಷ ವಚನಬೋಧಕ ಪ್ರತ್ಯಯಗಳ ಹೊರ್ತು ಉಳಿದ ರೂಪಕ್ಕೆ ಹತ್ತುವವು. अत् ಪ್ರತ್ಯಯದ ಹಿಂದಿನ अಕ್ಕೆ ಲೋಪ ಬರುವದು. ಉದಾ: करिष्यत् – करिष्यमाण, द्रक्ष्यत् – द्रक्ष्यमाण.

स्यत् ಎಂಬದರ ಸ್ತ್ರೀಲಿಂಗರೂಪವು ವಿಕಲ್ಪದಿಂದ स्यन्ती ಅಥವಾ स्यती ಆಗುವದು.

೬. (ಅ) सेट् ಧಾತುಗಳ ಮುಂದೆ ಭೂತಕಾಲವಾಚಕ त्वा ಪ್ರತ್ಯಯ ಬರಲು ಅದರ ಹಿಂದೆ इ ಆಗಮ ಬರುವದು. ಆದರೆ अम्, अन्‌ಗಳು ಕಡೆಯಲ್ಲಿ ಉಳ್ಳ सेट् ಧಾತುಗಳ ಮುಂದಿನ त्वा ಪ್ರತ್ಯಯದ ಪೂರ್ವದಲ್ಲಿ इ ಆಗಮವು ವಿಕಲ್ಪ ದಿಂದಾಗುವದು.

(ಬ) त्वा ಪ್ರತ್ಯಯವು ದುರ್ಬಲ, ಆದರೆ ಇದರ ಹಿಂದೆ इ ಆಗಮ ಬಂದಾಗ ಧಾತುವಿನೊಳಗಿನ ಸ್ವರಕ್ಕೆ ಗುಣವಾಗುತ್ತದೆ.

---

[1] ಪುಟ ೯೭, ಟಿಪ್ಪಣಿ ೧ ನೋಡು.

(ಕ) ಕ್ತ್ವಾ ಪ್ರತ್ಯಯಕ್ಕೆ ಇಕಾರಾಗಮವಾಗದಿದ್ದರೆ, ನಿಯಮ ೨ (ಗ), (ಹ) ಗಳು ಹತ್ತುತ್ತವೆ. ಉದಾ: तन् - तत्वा ಅಥವಾ तनित्वा (ನಿಯಮ ೬ ಅ ಮತ್ತು ಕ); मन् - मत्वा; शम् – शान्त्वा ಅಥವಾ शमित्वा ಇತ್ಯಾದಿ.

(ಡ) ಕ್ತ್ವಾಕ್ಕೆ ಆದೇಶವಾದ य ಪ್ರತ್ಯಯ ಪರವಾಗಲು यम्, रम्, नम्, गम् ಧಾತುಗಳ ಅಂತ್ಯಾನುನಾಸಿಕವಾದ म्‌ಕ್ಕೆ ವಿಕಲ್ಪವಾಗಿಯೂ, हन्, मन्, तन्, क्षण्, क्षिण्, ऋण्, वन् ಧಾತುಗಳ न्, ण्‌ಕ್ಕೆ ನಿತ್ಯವಾಗಿಯೂ ಲೋಪ ಬರುವದು.

೭. (ಅ) ವಿಧ್ಯರ್ಥಕ ಕರ್ಮವಾಚಕಧಾತುಸಾಧಿತಗಳ ಪ್ರತ್ಯಯಗಳು[1] तव्य, अनीय, य ಎಂದು ಮೂರು ಉಂಟು.

(ಬ) तव्य, अनीय ಪ್ರತ್ಯಯಗಳ ಹಿಂದಿನ ಅಂತ್ಯ ಸ್ವರಕ್ಕೂ ಉಪಾಂತ್ಯ ಹ್ರಸ್ವ ಸ್ವರಕ್ಕೂ ಗುಣವಾಗುತ್ತದೆ.

(ಕ) सेट् ಧಾತುಗಳ ಮುಂದಿನ तव्य ಪ್ರತ್ಯಯಕ್ಕೆ इಕಾರಾಗಮವಾಗುವದು.

(ಡ) (೧) य ಪ್ರತ್ಯಯದ ಹಿಂದಿನ (ಧಾತ್ವಂತ) इ, उಕಾರಗಳಿಗೆ ಗುಣವಾಗುತ್ತದೆ; ಅಂಗದ ओಕಾರಕ್ಕೆ अव् ಆದೇಶವಾಗುವದು. ಉದಾ: क्रु – को – कव्य; नी – नेय.

(೨) आಕಾರಕ್ಕೆ एಕಾರಾದೇಶವಾಗುವದು. ಉದಾ: दा – देय.

(೩) ऋಕಾರಕ್ಕೆ ವೃದ್ಧಿಯಾಗುವದು. ಉದಾ: कृ - कार्य.

(೪) इ, स्तु, वृ (ಉಭ.), दृ, जुष् ಧಾತುಗಳಿಗೂ ಉಪಾಂತ್ಯಸ್ಥಾನದಲ್ಲಿ ऋಕಾರವುಳ್ಳ ಧಾತುಗಳಿಗೂ य ಪ್ರತ್ಯಯವು ಪರವಾಗಲು ಅವುಗಳ ಸ್ವರಗಳಲ್ಲಿ ಏನೂ ಹೆಚ್ಚುಕಡಿಮೆಯಾಗುವದಿಲ್ಲ.

(೫) य ಪ್ರತ್ಯಯದ ಹಿಂದೆ ಹ್ರಸ್ವಸ್ವರವಿದ್ದರೆ, ಆ ಸ್ವರಕ್ಕೂ य ಪ್ರತ್ಯಯಕ್ಕೂ ನಡುವೆ त् ಆಗಮವಾಗುವದು. ಉದಾ: स्तु-स्तुत्य.

ಈ ನಿಯಮಗಳಿಗೆ ಎಷ್ಟೋ ಅಪವಾದಗಳುಂಟು.

೮. (ಅ) ಧಾತುಗಳಿಗೆ तृ, अक ಪ್ರತ್ಯಯಗಳನ್ನು ಹಚ್ಚಲಾಗಿ ಕರ್ತೃವಾಚಕನಾಮಪದಗಳು ಆಗುತ್ತವೆ.

(ಬ) तृ ಪ್ರತ್ಯಯದ ಹಿಂದಿನ ಅಂತ್ಯಸ್ವರಕ್ಕೂ ಉಪಾಂತ್ಯ ಹ್ರಸ್ವಸ್ವರಕ್ಕೂ ಗುಣವಾಗುವದು.

(ಕ) अक ಪ್ರತ್ಯಯದ ಹಿಂದಿನ ಅಂತ್ಯಸ್ವರಕ್ಕೂ, मಕಾರಾಂತ सेट् ಧಾತುಗಳ ಹೊರ್ತಾಗಿ ಉಳಿದ ಧಾತುಗಳೊಳಗಿನ ಉಪಾಂತ್ಯ अಕಾರಕ್ಕೂ ವೃದ್ಧಿಯು,

---

[1] ಮೂಲಧಾತು ಸಕರ್ಮಕವಿದ್ದರೆ ಈ ಧಾತುಸಾಧಿತಗಳು ಕರ್ಮಾರ್ಥಕವೆಂತಲೂ, ಅಕರ್ಮಕವಿದ್ದರೆ ಭಾವಾರ್ಥಕವೆಂತಲೂ ತಿಳಿಯಬೇಕು.

ಅಕಾರವು ಹೊರ್ತಾಗಿ ಉಳಿದ ಉಪಾಂತ್ಯ ಹ್ರಸ್ವಸ್ವರಗಳಿಗೆ ಗುಣವು ಆಗುವದು. ಉದಾ: नी-नेतृ ಮತ್ತು नायक; वच्-वक्तृ ಮತ್ತು वाचक; बुध्-बोद्धृ-बोधक; शम्-शामक; आ + चम् = आचामक.

(ಡ) ಆಕಾರಾಂತ ಧಾತುಗಳಿಗೆ अक ಪ್ರತ್ಯಯವು ಹತ್ತಲಾಗಿ ನಡುವೆ य ಆಗಮವಾಗುವದು. ಉದಾ: गा-गायक; स्था-स्थायक ಇತ್ಯಾದಿ.

(ಇ) हन् ಧಾತುವಿನ ಸ್ವರಕ್ಕೆ ವೃದ್ಧಿಯಾಗುವಂಥ ಧಾತುಸಾಧಿತಪ್ರತ್ಯಯವು ಪರವಾಗಲು ಆ ಧಾತುವಿನ न्‌ಕ್ಕೆ त् ಆದೇಶವಾಗುವದು. ಉದಾ: हन्-घातक (ಪುಟ ೨೦೪, ನಿಯಮ ೧೪).

(ಫ) तृ ಪ್ರತ್ಯಯವು ಸ್ತ್ರೀಲಿಂಗದಲ್ಲಿ त्री ಎಂತಲೂ, अक ಪ್ರತ್ಯಯವು इका ಒಮ್ಮೊಮ್ಮೆ अका ಎಂತಲೂ ಆಗುತ್ತವೆ.

೯. (ಅ) ಧಾತುಗಳಿಗೆ अन, अ, ति ಪ್ರತ್ಯಯವನ್ನು ಹಚ್ಚಲಾಗಿ ಭಾವವಾಚಕನಾಮಗಳಾಗುತ್ತವೆ.

(ಬ) ति ಪ್ರತ್ಯಯವು ದುರ್ಬಲವು. ಭೂತಕಾಲವಾಚಕ त ಪ್ರತ್ಯಯದ ಹಿಂದಿನ ಧಾತುಗಳಿಗೆ ಆಗುವ (ಪುಟ ೨೨೨, ೨ನೇ ನಿಯಮದಲ್ಲಿ ಹೇಳಿದ) ಕಾರ್ಯಗಳು ಈ ಪ್ರತ್ಯಯದ ಹಿಂದಿನ ಧಾತುಗಳಿಗೆ ಆಗುವವು. ಉದಾ: वच्-उक्ति; मुच्-मुक्ति.

(ಕ) अ ಪ್ರತ್ಯಯ ಪರವಾಗಲು ಕೆಲವು ಧಾತುಗಳ ಸ್ವರಕ್ಕೆ ಗುಣವು, ಕೆಲವು ಧಾತುಗಳ ಸ್ವರಕ್ಕೆ ವೃದ್ಧಿಯು ಆಗುತ್ತದೆ. अन ಪ್ರತ್ಯಯದ ಹಿಂದಿನ ಅಂತ್ಯಸ್ವರಕ್ಕೂ ಉಪಾಂತ್ಯಹ್ರಸ್ವಸ್ವರಕ್ಕೂ ಗುಣವಾಗುತ್ತದೆ. ಉದಾ: भू-भाव-भवन; जि-जय; हन्-घात-हनन; बुध्-बोध-बोधन.

(ಡ) अ ಪ್ರತ್ಯಯದ ಹಿಂದಿನ ಅಂತ್ಯ च्, ज्‌ಗಳಿಗೆ ಕ್ರಮವಾಗಿ क्, ग् ಆದೇಶಗಳಾಗುವವು. ಉದಾ: पच्-पाक, युज्-योग.

೧೦. ವಾಡಿಕೆಯಾಗಿ ति ಪ್ರತ್ಯಯಾಂತನಾಮಗಳು ಸ್ತ್ರೀಲಿಂಗವಾಚಕಗಳೂ, अ ಪ್ರತ್ಯಯಾಂತ ನಾಮಗಳು ಪುಲ್ಲಿಂಗಗಳೂ, अन ಪ್ರತ್ಯಯಾಂತ ನಾಮಗಳು ನಪುಂಸಕವಾಚಕಗಳೂ ಇರುತ್ತವೆ.

तस्मादेवं विदुषे ब्राह्मणायैवं चक्रुषे न क्षत्रियो द्रुह्यात् ।
राजा यक्ष्यमाणो ब्राह्मणं पुरोदधीत ।

[1]छन्दांसि वै देवेभ्यो हव्यमूढ्वा श्रान्तानि जघनार्धे यज्ञस्य तिष्ठन्ति यथाश्वो वाश्वतरो वोहित्रांस्तिष्ठेदेवम् ।

[1] ಯಜ್ಞದಲ್ಲಿ ಪಠಿಸುವ ವೇದಮಂತ್ರಗಳ ವೃತ್ತಗಳು ಬಲಿಯನ್ನು ವಹಿಸಿ ದೇವತೆಗಳಿಗೆ ಒಯ್ದುಕೊಡುತ್ತವೆಂದು ನಂಬಿಕೆಯುಂಟು.

असुरैः सह योत्स्यमान इन्द्रो वरुणस्य साहाय्यं ययाचे ।

वरुणसाहाय्यं लब्धवतस्तस्मात्सर्वेऽसुरा अबिभयुः ।

व्यर्थं मे जन्म न मया कृतं कर्तव्यं न भुक्तं भोक्तव्यं न दृष्टं द्रष्टव्यं न श्रुतं श्रोतव्यम् ।

निषेदुषीं राज्ञीं दृष्ट्वा दास्योऽपि सपत्नीवृत्तं कथयिष्यन्त्योऽधस्तस्थुः ।

ब्राह्मणेभ्यो दत्तसर्वस्वो रघुः प्रत्यग्रागतायार्थिने धनं दित्सुः कुबेरात्तन्निष्क्रष्टुं चक्रमे । कुबेरस्तु तेनाभियास्यमानमात्मानं प्रेक्ष्य स्वयमेव तस्य कोशे धनवृष्टिं पातयामास । तत्सर्वं धनमात्मने ददिवांसं रघुं वक्ष्यमाणामाशिषं सोऽर्थ्युवाच ।

आशास्यमन्यत्पुनरुक्तभूतं श्रेयांसि सर्वाण्यधिजग्मुषस्ते ।

पुत्रं लभस्वात्मगुणानुरूपं भवन्तमीड्यं भवतः पितेव ॥

ततो रघुः पुत्रं प्रापाजं नाम । तं कतिभिः संवत्सरैर्विवाहयोग्यदशं ज्ञात्वा ससैन्यमिन्दुमतीस्वयंवराय विदर्भान्प्रस्थापितवान् ।

मार्गे नर्मदारोधस्येकरात्रमुषितवतस्तस्य सेनानिवेशो वन्यगजस्त्वमृषिशापात्समापेदानेन केनचिद्गन्धर्वेण तुमुलश्चक्रे ।

तमापतन्तं नृपतेरवध्यो वन्यः करीति श्रुतवान्कुमारः ।

निवर्तयिष्यन्विशिखेन कुम्भे जघान नात्यायतकृष्टचापः ॥

स विद्धमात्रः[1] स्वीयं दिव्यं रूपं प्राप । ततः प्रजह्रुषेऽप्यात्मन उपचक्रुषेऽजाय संमोहनाख्यमस्त्रं ददौ ।

एवं तयोरध्वनि दैवयोगादासेदुषोः सख्यमचिन्त्यहेतु ।

एको ययौ चैत्ररथप्रदेशान्सौराज्यरम्यानपरो विदर्भान् ॥

तं नगरोपकण्ठे तस्थिवांसं तदागमनहृष्टो विदर्भनाथः प्रत्युज्जगाम नगरं चानीय सर्वां सत्क्रियां चकार ।

त्रैलोक्यदीपके देवे लोकान्तरमुपेयुषि ।

तमस्तान्तमभूद्विश्वं कः सुखी महदापदि ॥

---

[1] मात्र ಪ್ರತ್ಯಯವು ನಾಮಗಳ ಮುಂದೆ ಬರಲು 'ಅಷ್ಟೇ, ಅಷ್ಟಕ್ಕೇ' ಎಂಬ ಅರ್ಥವನ್ನು ಕೊಡುತ್ತದೆ.

ಕ್ರೌಂಚ ಪಕ್ಷಿಗಳ ಯುಗ್ಮದಲ್ಲಿ ಒಂದನ್ನು ಕೊಂದ (हन्.)[1] ನಿಷಾದನಿಗೆ ವಾಲ್ಮೀಕಿಯು ಶಾಪ ಕೊಟ್ಟನು.

ಆ ಋಷಿಯು ತನಗೆ ನೂರು ಆಕಳುಗಳನ್ನು ಕೊಡುತ್ತೇನೆಂದು ಮಾತು ಕೊಟ್ಟ (प्रति+श्रु) ಅರಸನಿಗೆ ಆಶೀರ್ವಾದ ಕೊಟ್ಟನು.

ವಾರಣಾವತಿಗೆ ಹೋಗುವ (गम्, इ) ಪಾಂಡವರಿಗೆ ವಿದುರನು ನೀತೀ ಹೇಳಿದನು.

ಆ ಪಟ್ಟಣವನ್ನು ಸುಡುವ (ಪೂರ್ವದಲ್ಲಿ) (दह्) ದಳವಾಯಿಯು ಅದರೊಳಗಿನ ಹೆಂಗಸರನ್ನೂ ಹುಡುಗರನ್ನೂ ಮತ್ತೊಂದು ಕಡೆಗೆ ಕಳುಹಿದನು.

ಆ ಹಣವನ್ನು ಅವನಿಗೆ ತಿರಿಗಿ ಕೊಡಬೇಕೆಂದು ಅಪ್ಪಣೆ ಮಾಡುವ (आ+दिश्) (ಪೂರ್ವದಲ್ಲಿ) ನ್ಯಾಯಾಧೀಶನು ಅವನಿಗೆ ಒಳ್ಳೇ ನಡತೆಯಿಂದ ನಡಿ ಎಂದು ಬೋಧಿಸಿದನು.

ಯಜ್ಞದತ್ತನಿಗೆ ಕಾಶಿಯ ಬಿಟ್ಟು ಹೋಗಲಪ್ಪಣೆಯಾಗುವ (ಪೂರ್ವದಲ್ಲಿ) (अनुज्ञास्यमान) ದೇವದತ್ತನು, ನಿನ್ನ ಪಾಪಗಳಿಗಾಗಿ ಪ್ರಾಯಶ್ಚಿತ್ತ ತೆಗೆದುಕೋ ಎಂದು ಅವನಿಗೆ ಹೇಳಿದನು.

ಅವಳನ್ನು ಗಂಡನ ಮನೆಗೆ ಕಳುಹುವ (ಸಮಯದಲ್ಲಿ) (प्र+हि, प्र+इष) ಕಣ್ವನು ಅಗ್ನಿಗೆ ಪ್ರದಕ್ಷಿಣೆ ಮಾಡೆಂತಲೂ, ದೊಡ್ಡಸ್ತಿಕೇ ಬಗ್ಗೆ ಅಭಿಮಾನ ಪಡಬೇಡೆಂತಲೂ ಅವಳಿಗೆ ಬೋಧಿಸಿದನು.

ವಿಷ್ಣುವಿಗೆ ಕೊಡತಕ್ಕ (दा) ವಸ್ತ್ರಗಳು ಬಹು ಸರಸಾದವೂ ಬೆಲೆಯುಳ್ಳವೂ ಉಂಟು.

ಆ ಮರವು ಕಡಿಯತಕ್ಕದ್ದುಂಟು (छिद्).

ಅವನು ಕಳುಹಿದ ವಿಲಕ್ಷಣವಾದ ಅಪ್ಪಣೆಯಿಂದ ಏನು ತಿಳಿಯತಕ್ಕದ್ದು (बुध्)?

ಎಲ್ಲ ಅರಸರನ್ನು ಗೆದ್ದು (जि) ಸೆರೆಮನೆಯಲ್ಲಿ ಹಾಕಿದಂಥ ಜರಾಸಂಧನನ್ನು ಕೃಷ್ಣನೂ ಭೀಮನೂ ಕೂಡಿ ಕೊಂದರು.

ಅವನ ಶಬ್ದವು ನಂಬತಕ್ಕದ್ದಲ್ಲ (वि+श्वस्); ಅವನ ಕೃತ್ಯಗಳು ಹಳಿಯತಕ್ಕಂಥವು (निन्द्).

---

[1] ಕೆಳಗೆ ಗೆರೆ ಎಳದ ಶಬ್ದಗಳ ಅರ್ಥವನ್ನು ಸಂಸ್ಕೃತದಲ್ಲಿ ಧಾತುಸಾಧಿತಗಳಿಂದ ತೋರಿಸತಕ್ಕದ್ದು.

ಅದು ತಿನ್ನತಕ್ಕದ್ದೂ (भक्ष्, अभि + अव + हृ) ಕುಡಿಯತಕ್ಕದ್ದೂ ಅಲ್ಲ (१।); ಅದನ್ನು ನಾವು ಯಾಕೆ ಹುಡುಕಬೇಕು?

ಕೆಲವು ಬುದ್ಧಿಯ ಲಕ್ಷಣಗಳನ್ನು ಪ್ರಕಟಿಸಿರುವ ಕಾರಣ ಅವನು ಮೂರ್ಖನೆಂದು ತಿಳಿಯಲಾಗದು (१२).

---

## ಕೋಶ ೨೬.

अज (ಪು.) ರಘುರಾಜನ ಮಗನ ಹೆಸರು.

अत्यायत (ಅ. ಅಥವಾ ವಿ.) ಬಹಳ ದೂರ, ಬಹಳ ಉದ್ದ.

अधस् (ಅ.) ಕೆಳಗೆ.

अनुरूप (ವಿ.) ಸರಿಯಾದ, ಅಂತೆ, ಹಾಗೆ.

अश्वतर (ಪು.) ಗಂಡು ಹೇಸರಗತ್ತೆ.

आख्या (ಸ್ತ್ರೀ.) ಹೆಸರು.

इन्दुमती (ಸ್ತ್ರೀ.) ಒಬ್ಬ ರಾಜಕನ್ನಿಕೆಯ ಹೆಸರು.

उपकण्ठ (ನ.) ಪಟ್ಟಣಕ್ಕೆ ಅಥವಾ ಹಳ್ಳಿಗೆ ಹೊಂದಿರುವ ಭೂಮಿ ಅಥವಾ ಅದರ ಮೇರೆ.

कुम्भ (ಪು.) ಆನೆಯ ಕಪಾಲದ ಮೇಲಿನ ಗುಂಡು, ಗಂಡಸ್ಥಲ.

कृ (उप ಪೂರ್ವಕ) ಉಪಕಾರ ಮಾಡೋಣ, ಒಳಿತು ಮಾಡೋಣ.

गम् (प्रति + उद् ಪೂರ್ವಕ) ಕಡೆಗೆ ಹೋಗು, ಸಾಗು.

चैत्ररथ (ಪು.) ಗಂಧರ್ವರ ಪ್ರದೇಶ.

छन्दस् (ನ.) ಛಂದಸ್ಸು, ವೃತ್ತ.

जघनार्ध (ನ.) [जघन (ನ.) ನಡುವು, ಸೊಂಟ, ತಿಗ; अर्ध ಅರ್ಧ] ತಿಗದ ಹಿಂಭಾಗ.

तप् (೪ನೇ ಗ. ಪ.) ಕ್ಲೇಶ ಪಡು.

दीपक (ವಿ.) ಪ್ರಜ್ವಲಿಸುವಂಥಾದ್ದು.

धा (पुरस् ಪೂರ್ವಕ) ಒಬ್ಬನನ್ನು ಪುರೋಹಿತನನ್ನಾಗಿ ನೇಮಿಸು.

नर्मदा (ಸ್ತ್ರೀ.) ಒಂದು ನದಿಯ ಹೆಸರು.

पुनरुक्तभूत (ವಿ.) ತಿರಿತಿರಿಗಿ ಅಂದಂಥ.

प्रत्यग्र (ವಿ. ಮತ್ತು ಅ.) ಹೊಸ, ನವೀನ.

प्रदेश (ಪು.) ಪ್ರಾಂತ.

रोधस् (ನ.) ತೀರ, ದಂಡೆ.

लोकान्तरम् (ನ.) अन्यो लोकः = लोकान्तरम् ಎರಡನೇ ಲೋಕ, ಪರಲೋಕ.

वच् (आशिषम् ಪೂರ್ವಕ) ಹರಸು, ಆಶೀರ್ವಾದ ಕೊಡು.

वन्य (ವಿ.) ವನದಲ್ಲಿ ಹುಟ್ಟುವ ಅಥವಾ ಇರುವ.

वरुण (ಪು.) ನೀರಿನ ದೇವತೆಯು.

विदर्भ (ಪು.) ನಿತ್ಯ ಬಹುವಚನ ಒಂದು ದೇಶದ (ವರ್ಹಾಡ ಪ್ರಾಂತದ) ಹೆಸರು.

विशिख (ಪು.) ಬಾಣ.

वृष्टि (ಸ್ತ್ರೀ.) ಮಳೆ.

शाप (ಪು.) ಶಾಪ.

शास् (आ ಪೂರ್ವಕ ೨ನೇ ಗ. ಆ.) ಇಚ್ಛಿಸು. ಆಶೀರ್ವಾದ ಕೊಡು.

संमोहन (ಪು.) ಒಂದು ಅದ್ಭುತವಾದ ಆಯುಧದ ಅಥವಾ ಅಸ್ತ್ರದ ಹೆಸರು.

सत्क्रिया (ಸ್ತ್ರೀ.) ಆತಿಥ್ಯ, ಸತ್ಕಾರ.

सपत्नी (ಸ್ತ್ರೀ.) ಸವತಿ.

सर्वस्व (ನ.) (सर्व ಎಲ್ಲ; स्व ನ.) ಯಾವತ್ತು ಸಂಪತ್ತು.

सेनानिवेश (ಪು.) ಸೈನ್ಯದ ಛಾವಣಿ, ಪಾಳ್ಯ.

सौराज्य (ನ.) ಉತ್ತಮ ರಾಜ್ಯ.

हव्य (ನ.) ಹೋಮದ ದ್ರವ್ಯ, ಬಲಿ.

---

ಚಲೋ ರೀತಿಯಿಂದ ನಡಿಸೋಣ सदाचारं प्रतिपद्, सदाचारेण वृत्.
ಬಹು ಬೆಲೆಯುಳ್ಳ, ಊಚ महार्ह (ವಿ.).
ವಿಚಿತ್ರವಾದ विलक्षण (ವಿ.).
ಸುತ್ತ ತಿರುಗು, ಪ್ರದಕ್ಷಿಣೆ ಮಾಡು प्रदक्षिणीकृ.
ಸೆರೆಮನೆಯಲ್ಲಿ ಹಾಕು कारागृहे निक्षिप्.
ಜರಾಸಂಧ जरासंध (ಪು.), ಮಗಧ ದೇಶದ ಒಬ್ಬ ಅರಸು.
ಕ್ರೌಂಚ, ಒಂದು ಜಾತಿಯ ಹಕ್ಕಿ क्रौंच (ಪು.).
ನಿಷಾದ, ಬೇಡ निषाद (ಪು.).
ಗರ್ವಿಷ್ಠ, ಹೆಮ್ಮೆಯುಳ್ಳ उत्सिक्त (ಭೂ. ಕೃ.).
ಹೆಮ್ಮೆಯುಳ್ಳ उत्सेकिनी (ಸ್ತ್ರೀ.); उत्सेकिन् (ಪು.).
ತಿರಿಗಿ ಕೊಡು प्रति + दा.
ಲಕ್ಷಣ चिह्न (ನ.).
ವಾರಣಾವತೀ वारणावती (ಸ್ತ್ರೀ.).
ವಿದುರ विदुर (ಪು.).

## ಅಭ್ಯಾಸಕ್ಕಾಗಿ ಆರಿಸಿ ತೆಗೆದ ಪಾಠಗಳು.

### ೧ನೇ ಪಾಠ.

ಐತರೇಯ ಬ್ರಾಹ್ಮಣದೊಳಗಿನದು (೭ನೇ ಸಂಚಿಕೆ).

हरिश्चन्द्रो ह वैधस ऐक्ष्वाको राजाऽपुत्र आस[1] । तस्य ह शतं जाया बभूवुः । तासु पुत्रं न लेभे । तस्य ह पर्वतनारदौ गृह ऊषतुः । स ह नारदं पप्रच्छ ।

यन्त्विमं पुत्रमिच्छन्ति ये विजानन्ति ये च न ।
किंस्वित्पुत्रेण विन्दन्ते तन्म आचक्ष्व नारद ॥ इति ।
स एकया[2] पृष्टो दशभिः प्रत्युवाच ।
ऋणमस्मि[3]न्त्संनयत्यमृतत्वं च गच्छति ।
पिता पुत्रस्य जातस्य पश्येच्चेज्जीवतो मुखम् ॥

---

1) ಇದು अस् ಧಾತುವಿನ ಪೂರ್ಣಭೂತಕಾಲದ ರೂಪವು. ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಇದರ ಸ್ವತಂತ್ರಪ್ರಯೋಗವಿಲ್ಲ. ಪೂರ್ಣಭೂತಕಾಲದ ೨ನೇ ರೂಪವನ್ನು ಮಾಡುವದರಲ್ಲಿ ಮಾತ್ರ ಸಾಹ್ಯಕ್ರಿಯಾಪದದಂತೆ ಇದನ್ನು ಪ್ರಯೋಗಿಸುವದುಂಟು.

2) ಈ ಸಂಖ್ಯಾವಾಚಕದ ವಿಶೇಷ್ಯವು गाथा ಅಧ್ಯಾಹೃತವಾಗಿರುವದು; गाथा ಅಂದರೆ ಶ್ಲೋಕ.

3) ಪದಾಂತ್ಯ न् ದ ಮುಂದೆ स् ಬಂದರೆ, ಅವುಗಳ ನಡುವೆ त् ಆಗಮವು ವಿಕಲ್ಪದಿಂದ ಬರುವದು.

यावन्तः पृथिव्यां भोगा यावन्तो जातवेदसि ।
यावन्तो अप्सु प्राणिनां भूयान्पुत्रे पितुस्ततः ॥
शश्वत्पुत्रेण पितरोऽत्यायन्बहुलं तमः ॥

अथैनमुवाच वरुणं राजानमुपधाव पुत्रो मे जायतां तेन त्वा यजा इति । तथेति । स वरुणं राजानमुपससार पुत्रो मे जायतां तेन त्वा यजा इति । तथेति । तस्य ह पुत्रो जज्ञे रोहितो नाम । तं होवाचाजनि ते वै पुत्रो यजस्व मानेनेति । स होवाच यदा वै पशुर्निर्दशो भवत्यथ स मेध्यो भवति निर्दशो न्वस्त्वथ त्वा यजा इति । तथेति । स ह निर्दश आस । तं होवाच निर्दशो न्वभूद्यजस्व मानेनेति । स होवाच यदा वै पशोर्दन्ता जायन्तेऽथ स मेध्यो भवति दन्ता न्वस्य जायन्तामथ त्वा यजा इति । तथेति । तस्य ह दन्ता जज्ञिरे । तं होवाचाज्ञत[1] वा अस्य दन्ता यजस्व मानेनेति । स होवाच यदा वै पशोर्दन्ताः पद्यन्तेऽथ स मेध्यो भवति दन्ता न्वस्य पद्यन्तामथ त्वा यजा इति । तथेति । तस्य ह दन्ताः पेदिरे। तं होवाचापत्सत वा अस्य दन्ता यजस्व मानेनेति स होवाच यदा वै पशोर्दन्ताः पुनर्जायन्तेऽथ स मेध्यो भवति दन्ता न्वस्य पुनर्जायन्तामथ त्वा यजा इति । तथेति । तस्य ह दन्ताः पुनर्जज्ञिरे । तं होवाचाज्ञत[1] वा अस्य पुनर्दन्ता यजस्व मानेनेति । स होवाच यदा वै क्षत्रियः सांनाहुको भवत्यथ स मेध्यो भवति संनाहं नु प्राप्नोत्वथ त्वा यजा इति । तथेति । स ह संनाहं प्रापत्तं होवाच संनाहं नु प्रापोद्यजस्व मानेनेति । स तथेत्युक्त्वा पुत्रमामन्त्रयामास । ततायं वै मह्यं त्वामददाद्धन्त त्वयाहमिमं यजा इति । स ह नेत्युक्त्वा धनुरादायारण्यमपातस्थौ । स संवत्सरमरण्ये चचार ।

अथ हैक्ष्वाकं वरुणो जग्राह । तस्य होदरं जज्ञे । तदु ह रोहितः शुश्राव । सोऽरण्याद्ग्राममेयाय तमिन्द्रः पुरुषरूपेण पर्येत्योवाच ।

नानाश्रान्ताय श्रीरस्तीति रोहित शुश्रुम ।
पापो नृषद्वरो जन इन्द्र इच्चरतः सखा ॥

---

[1] ಇದು जन् ಧಾತುವಿನ ಅದ್ಯತನಭೂತಕಾಲದ (ಪ್ರ. ಪು. ಬಹುವಚನದ) ರೂಪವು (ವೈದಿಕ ಪ್ರಯೋಗ).

चरैवेति । चरैवेति वै मा ब्राह्मणोऽवोचदिति ह द्वितीयं संवत्सरमरण्ये चचार । सोऽरण्याद्ग्राममेयाय । तमिन्द्रः पुरुषरूपेण पर्येत्योवाच ।

पुष्पिण्यौ चरतो जङ्घे भूष्णुरात्मा फलग्रहिः ।
[1]शेरेऽस्य सर्वे पाप्मानः श्रमेण प्रपथे हताः ॥

चरैवेति । चरैवेति वै मा ब्राह्मणोऽवोचदिति ह तृतीयं संवत्सरमरण्ये चचार । सोऽरण्याद्ग्राममेयाय । तमिन्द्रः पुरुषरूपेण पर्येत्योवाच ।

आस्ते भग आसीनस्योर्ध्वस्तिष्ठति तिष्ठतः ।
शेते निपद्यमानस्य चराति चरतो भगः ॥

चरैवेति । चरैवेति वै मा ब्राह्मणोऽवोचदिति ह चतुर्थं संवत्सरमरण्ये चचार । सोऽरण्याद्ग्राममेयाय । तमिन्द्रः पुरुषरूपेण पर्येत्योवाच ।

कलिः शयानो भवति संजिहानस्तु द्वापरः ।
उत्तिष्ठंस्त्रेता भवति कृतं संपद्यते चरन् ॥

चरैवेति । चरैवेति वै मा ब्राह्मणोऽवोचदिति ह पञ्चमं संवत्सरमरण्ये चचार । सोऽरण्याद्ग्राममेयाय । तमिन्द्रः पुरुषरूपेण पर्येत्योवाच ।

चरन्वै मधु विन्दति चरन्स्वादुमुदुम्बरम् ।
सूर्यस्य पश्य श्रेमाणं यो न तन्द्रयते चरन् ॥

चरैवेति । चरैवेति वै मा ब्राह्मणोऽवोचदिति ह षष्ठं संवत्सरमरण्ये चचार । सोऽजीगर्तं सौयवसिमृषिमशनया परीतमरण्य उपेयाय । तस्य ह त्रयः पुत्रा आसुः शुनःपुच्छः शुनःशेपः शुनोलाङ्गूल इति । तं होवाच ऋषेऽहं ते शतं ददाम्यहमेषामेकेनात्मानं निष्क्रीणा इति । स ज्येष्ठं पुत्रं निगृह्णान उवाच न न्विममिति नो एवेममिति कनिष्ठं माता । तौ ह मध्यमे संपादयांचक्रतुः शुनःशेपे । तस्य ह शतं दत्त्वा स तमादाय सोऽरण्याद्ग्राममेयाय । स पितरमेत्योवाच तत हन्ताहमनेनात्मानं निष्क्रीणा इति । स वरुणं राजानमुपससारानेन त्वा यजा इति । तथेति भूयान्वै ब्राह्मणः क्षत्रियादिति वरुण उवाच । तस्मा एतं राजसूयं यज्ञक्रतुं प्रोवाच । तमेतमभिषेचनीये पुरुषं पशुमालेभे ।

तस्य ह विश्वामित्रो होतासीज्जमदग्निरध्वर्युर्वसिष्ठो ब्रह्मायास्य उद्गाता । तस्मा उपाकृताय नियोक्तारं न विविदुः । स होवाचाजीगर्तः

---

[1] शीं ಧಾತುವಿನ ವರ್ತಮಾನಕಾಲ ಪ್ರ. ಪು. ಬಹುವಚನದ ರೂಪವು (ವೈದಿಕ ಪ್ರಯೋಗ).

सौयवसिर्मह्यमपरं शतं दत्ताहमेनं नियोक्ष्यामीति । तस्मा अपरं शतं दद्रुस्तं स [1]निनियोज । तस्मा उपाकृताय नियुक्तायाप्रीताय पर्यग्निकृताय विशासितारं न विविदुः । स होवाचाजीगर्तः सौयवसिर्मह्यमपरं शतं दत्ताहमेनं विशसिष्यामीति । तस्मा अपरं शतं ददुः । सोऽसिं निःशान एयाय । अथ ह शुनःशेप ईक्षांचक्रेऽमानुषमिव वै मा विशसिष्यन्ति हन्ताहं देवता उपधावामीति । स प्रजापतिमेव प्रथमं देवतानामुपससार। तं प्रजापतिरुवाचाग्निर्वै देवानां नेदिष्ठस्तमेवोपधावेति । सोऽग्निमुपससार। तमग्निरुवाच सविता वै प्रसवानामीशे[2] तमेवोपधावेति । स सवितारमुपससार । तं सवितोवाच वरुणाय वै राज्ञे नियुक्तोऽसीति तमेवोपधावेति। स वरुणं राजानमुपससार । तं वरुण उवाचाग्निर्वै देवानां मुखं सुहृदयतमस्तं नु स्तुह्यथ त्वोत्स्रक्ष्याम इति । सोऽग्निं तुष्टाव । तमग्निरुवाच विश्वान्देवान्स्तुह्यथ त्वोत्स्रक्ष्याम इति । स विश्वान्देवांस्तुष्टाव । तं विश्वेदेवा ऊचुरिन्द्रो वै देवानामोजिष्ठो बलिष्ठः सहिष्ठः सत्तमः पारयिष्णुतमस्तं नु स्तुह्यथ त्वोत्स्रक्ष्याम इति । स इन्द्रं तुष्टाव । तस्मा इन्द्रः स्तूयमानः प्रीतो मनसा हिरण्यरथं ददौ । तमिन्द्र उवाचाश्विनौ नु स्तुह्यथ त्वोत्स्रक्ष्याम इति । सोऽश्विनौ तुष्टाव । तमश्विना ऊचतुरुषसं नु स्तुह्यथ त्वोत्स्रक्ष्याम इति । स उषसं तुष्टाव । तस्य[3] ह स्मर्च्यृच्युक्तायां विपाशो मुमुचे । कनीय ऐक्ष्वाकस्योदरं भवति । उत्तमस्यामेवर्च्युक्तायां विपाशो मुमुचे । अगद ऐक्ष्वाक आस ।

## ೨೬೯ ಪಾಠ.

## त्र या णा म् धू र्ता ना म् ।

कस्मिंश्चिदधिष्ठाने मित्रशर्मा नाम ब्राह्मणः प्रतिवसति स्म । स कदाचिन्माघमासे पशुप्रार्थनाय ग्रामान्तरं गतः । तत्र तेन कश्चिद्यजमानो याचितः । भो यजमान आगामिन्याममावास्यायां यक्ष्यामि यज्ञं तद्देहि

---

1) ಧಾತುವಿನ ಆದ್ಯಕ್ಷರಕ್ಕೆ ಬದಲಾಗಿ ಉಪಸರ್ಗದ ಆದ್ಯಕ್ಷರವು ದ್ವಿತ್ವ ಮಾಡಲ್ಪಟ್ಟಿರುವದು.

2) ಈಶ್ ಧಾತುವಿನ ವರ್ತಮಾನಕಾಲ ಪ್ರ. ಪು. ಏಕವಚನದ ರೂಪವು (ವೈದಿಕಪ್ರಯೋಗ); ಸಾಮಾನ್ಯ ನಿಯಮಗಳಿಗನುಸರಿಸಿ ಈ ರೂಪವು ಈಷ್ಟೆ ಎಂದು ಆಗುವದು.

3) (उषस्) ಅರುಣೋದಯದ ಸ್ತೋತ್ರವನ್ನು ಶುನಃಶೇಪನು ಮಾಡಿದನು; ಆ ಸ್ತೋತ್ರಕ್ಕೆ ಇದರ ಸಂಬಂಧವು.

मे पशुमेकम् । अथ तेन तस्य शास्त्रोक्तः पीवरतनुः पशुः प्रदत्तः। सोऽपि तं समर्थमितश्चेतश्च गच्छन्तमवलोक्य स्कन्धे कृत्वा सत्वरं स्वपुराभिमुखः प्रतस्थे।

अथ तस्य गच्छतो मार्गे त्रयो धूर्ताः संमुखा बभूवुः। तैश्च तादृशं पीवरतनुं पशुं स्कन्धमारूढमवलोक्य मिथोऽभिहितम्। अहो अस्य पशोर्भक्षणादद्यतनो हिमपातो व्यर्थतां नीयते। तदेनं वञ्चयित्वा पशुमादाय शीतत्राणं कुर्मः

अथ तेषामेकतमो वेषपरिवर्तनं विधाय संमुखो भूत्वा तमूचे। भो भोः किमेवं जनविरुद्धं हास्यकार्यमनुष्ठीयते यदेष सारमेयोऽपवित्रः स्कन्धारूढो नीयते। ततश्च तेन कोपाभिभूतेनाभिहितमहो किमन्धो भवान्यत्पशुं सारमेयं प्रतिपादयसि। सोऽब्रवीद्ब्रह्मन् कोपस्त्वया न कार्यो यथेच्छं गम्यतामिति।

अथ यावत्किंचिदध्वान्तरं गच्छति तावद्द्वितीयो धूर्तः संमुखः समुपेत्य तमुवाच। भो ब्रह्मन् कष्टं कष्टं यद्यपि वल्लभोऽयं ते सारमेयस्तथापि स्कन्धमारोपयितुं न युज्यते। अथासौ सकोपमिदमाह। भोः किमन्धो भवान्यत्पशुं सारमेयं वदसि। सोऽब्रवीद्भगवन् मा कोपं कुर्वज्ञानान्मयाभिहितम् त्वमात्मरुचितं समाचरेति।

अथ यावत्स्तोकं वर्त्मान्तरं गच्छति तावत्तृतीयोऽन्यवेषधारी धूर्तः संमुखः समुपेत्य तमुवाच। भो अयुक्तमेतद्यत्त्वं सारमेयं स्कन्धाधिरूढं नयसि तत्त्यज्यतामेष यावदन्यः कश्चिन्न पश्यति। अथासौ बहु विमृश्य तं पशुं सारमेयमेव मन्यमानो भयाद्भूमौ प्रक्षिप्य स्वगृहमुद्दिश्य पलायितः। ततस्ते त्रयो मिलित्वा तं पशुमादाय प्रतस्थिरे।

### ब्राह्मणभुजंगमयोः।

अस्ति कस्मिंश्चिदधिष्ठाने हरिदत्तो नाम ब्राह्मणः। तस्य च कृषिं कुर्वतः सदैव निष्फलः कालोऽतिवर्तते। अथैकस्मिन्दिवसे स ब्राह्मणो घर्मार्तः स्वक्षेत्रमध्ये वृक्षच्छायायां प्रसुप्तः। अनतिदूरे वल्मीकोपरि प्रसारितं भीषणं भुजंगमं दृष्ट्वासौ चिन्तयामास। नूनमेषा क्षेत्रदेवता कदाचि-

दपि न पूजिता तेनेदं मे कृषिकर्म विफलीभवति तदहमस्याः पूजामद्य करिष्यामि । इत्यवधार्य कुतोऽपि क्षीरं याचित्वा शरावे निक्षिप्य वल्मीकान्तिकमुपगम्योवाच । भोः क्षेत्रपाल मयैतावन्तं कालं न ज्ञातं यत्त्वमत्र वससि तेन पूजा न कृता तत्सांप्रतं क्षमस्वेति । एवमुक्त्वा दुग्धं निवेद्य गृहाभिमुखं प्रायात् ।

अथ प्रातर्यावदागत्य पश्यति तावद्दीनारमेकं शरावे दृष्टवान् । एवं च प्रतिदिनमेकाकी समागत्य तस्मै क्षीरं ददात्येकैकं च दीनारं गृह्णाति ।

अथैकस्मिन्दिवसे वल्मीके क्षीरनयनाय पुत्रं नियुज्य ब्राह्मणो ग्रामं जगाम । पुत्रोऽपि क्षीरं तत्र नीत्वा संस्थाप्य च पुनर्गृहं समायातः । दिनान्तरे तत्र गत्वा स दीनारमेकं दृष्ट्वा गृहीत्वा च चिन्तितवान् । नूनं सौवर्णदीनारपूर्णोऽयं वल्मीकस्तदेनं भुजंगं हत्वा सर्वमेकवारं ग्रहीष्यामि । एवं संप्रधार्यान्येद्युः क्षीरं ददता ब्राह्मणपुत्रेण सर्पो लगुडेन शिरसि ताडितः । स च दैववशादमुक्तजीवितो रोषात्तं ब्राह्मणकुमारं तीव्रविषैर्दशनैस्तथादशद्यथा स सद्यः पञ्चत्वमुपागतः ।

अथ पुनरपि ब्राह्मणः प्रत्यूषे क्षीरं गृहीत्वा तत्र गत्वा तारस्वरेण सर्पमस्तौत् । तदा सर्पो वल्मीकान्तर्लीन एव ब्राह्मणं प्रत्युवाच । त्वं लोभादत्रागतः पुत्रशोकमपि विहाय । इतःपरं तव मम च प्रीतिर्नोचिता । तव पुत्रेण यौवनोन्मत्तेनाहं ताडितो मया च स दष्टः । कथं मया लगुडप्रहारो विस्मर्तव्यस्त्वया च पुत्रशोकदुःखं कथं विस्मर्तव्यम् । इत्युक्त्वा बहुमूल्यं हीरकमणिं तस्मै दत्त्वा पुनस्त्वया नागन्तव्यमिति कथयित्वा विवरं प्रविष्टः । ब्राह्मणोऽपि मणिं गृहीत्वा पुत्रबुद्धिं निन्दन्स्वगृहमागतः ।

## ೩ನೇ ಪಾಠ.

(ಭರ್ತೃಹರಿಯ ನೀತಿಶತಕದೊಳಗಿನದು.)

अज्ञः सुखमाराध्यः सुखतरमाराध्यते विशेषज्ञः ।
ज्ञानलवदुर्विदग्धं ब्रह्मापि नरं न रञ्जयति ॥ १ ॥

लभेत सिकतासु तैलमपि यत्नतः पीडयन् ।
पिबेच्च मृगतृष्णिकासु सलिलं पिपासार्दितः ।

